ಆಪ್ತ ಸಂವಾದಕ್ಕೆ, ಅಥವಾ ಏಕಾಂತಕ್ಕೆ, ಸಂಗೀತ ಹೇಗೆ ಹಿತಮಿತವಾದ ವಾತಾವರಣವನ್ನು ಕಲ್ಪಿಸಿಕೊಡಬಲ್ಲುದೋ, ಹಾಗೇ, ಚಿತ್ರಕಲೆ, ಒಳ್ಳೆಯ ಓದಿಗೊಂದು ಸಂವೇದನಾಶೀಲವಾದ Spaceನ್ನು ಮೂಡಿಸಬಲ್ಲುದು. ಮೇಜಿನ ಮೇಲಿನ ಹೂದಾನಿಯಂತೆ; ಗೋಡೆಯ ಮೇಲಿನ ಕಲಾಕೃತಿಯಂತೆ, ಅಂಗಳದಲ್ಲಿನ ಮರದಂತೆ-ಅದು ತನ್ನ ಪಾಡಿಗಿದ್ದೂ ಒಂದು ವ್ಯಾಪಕವಾದ ಪರವಶತೆಗೆ ಇಂಬು ಕೊಡಬಲ್ಲುದು.

ವಿವಿಧ ಹೊಸ-ಹಳೆ ಕಲಾವಿದರು, ಕಲಾವಿದ್ಯಾರ್ಥಿಗಳು ತಮ್ಮಷ್ಟಕ್ಕೆ ಸ್ವತಂತ್ರವಾಗಿ ರಚಿಸಿದ ಚಿತ್ರ, ಚಿತ್ತಾರಗಳನ್ನು, ಮೊದಲ ಸಂಚಿಕೆಯಿಂದಲೂ ನಮ್ಮ ಪುಟಗಳಲ್ಲಿ ಬಳಸುತ್ತ ಬಂದಿದ್ದೇವೆ. ಸ್ವಯಂಸ್ಫೂರ್ತ ಚಿತ್ರಗಳು, ತಮ್ಮ ಪ್ರಭೆಯನ್ನು ಕಾದಿಟ್ಟುಕೊಂಡೇ ಬರಹಗಳಿಗೊಂದು ವಿಶಿಷ್ಟ ಸಹಯೋಗವನ್ನು ಕೊಡುತ್ತವೆ. ನಂತರವೂ ತಾಜಾ ಆಗಿ ಉಳಿಯುತ್ತವೆ.

ನಮ್ಮ ಒಳಪುಟಗಳ ಕಲೆಯನ್ನು, ಮುಖಪುಟಗಳನ್ನು ಮೆಚ್ಚಿ, ಸ್ವಾಗತಿಸಿ, ನೀವು ಬರೆಯುತ್ತಿರುವ ನೂರಾರು ಕಾಗದಗಳು, ಹೊಸತನ್ನು ಕಾಣಬಯಸುವ ನಿಮ್ಮ ಸುಂದರ ಕಣ್ಣುಗಳಿಗೆ ಸಾಕ್ಷಿಯಾಗಿವೆ. ನಮಗೆ ಧೈರ್ಯ ತಂದಿವೆ.

ಈ ಸಂಚಿಕೆಯಲ್ಲಿ 'ವಿಶ್ವಭಾರತಿ'ಯ ಮಾಂಟೋ, 'ಶತಮಾನದ ಮೆಲುಕಿ'ನ ಪಾವೆಂ ಮತ್ತು ಈಗಿನ ಅಬ್ಬಾಸ್ ಮೇಲಿನಮನಿ, ಈ ಮೂವರ ವಿಭಿನ್ನ ಕಾಲದ ಕತೆಗಳು, ಕೋಮು ವೈಷಮ್ಯದ ನೋವಿನ ಎಳೆಯನ್ನು ಬೇರೆ ಬೇರೆ ಕಡೆ ಸ್ಪರ್ಶಿಸಿವೆ. ಇದರ ಜತೆಗೇ ಇರಬೇಕಾಗಿದ್ದ ಗುಲ್ಜಾರ್ ಕತೆಯನ್ನು ಮುಂದಿನ ಸಂಚಿಕೆಯಲ್ಲಿ ಕೊಡುತ್ತೇವೆ. ಈ ಸಲದ 'ಕಾಗದದ ದೋಣಿ' ವಿಶೇಷ 'ಗುರುವಂದನೆ'ಯಾಗಿದೆ. ಸಾಹಿತ್ಯಿಕ ಸಂವಾದ, ಮಾತುಕತೆಗಾಗೇ 'ಮಂಟಪ' ಅಂಕಣವನ್ನು ಆರಂಭಿಸಿದ್ದೇವೆ.

ಕಡುಕಾಡಿನಲ್ಲಿ ಗಾಳಿಗೆದ್ದು ಬೀಳುವ ಕಪ್ಪು ಪ್ಲಾಸ್ಟಿಕ್ ಶೀಟ್‌ನೆದುರು ಅನ್ಯಮನಸ್ಕರಾಗಿ ಕೂತಿರುವ ರಾಜ್‌ಕುಮಾರ್....

ಜಮ್ಮು-ಕಾಶ್ಮೀರದ ಹೊಲದಲ್ಲಿ ನಡುರಾತ್ರಿ ನಿದ್ದೆಯಿಂದ ಎಬ್ಬಿಸಲ್ಪಟ್ಟು, ಸಾಲಾಗಿ ನಿಂತ ತಂದೆಯರ ಬರ್ಬರ ಹತ್ಯೆಯನ್ನು ನೋಡಿದ ಎಳೆ ಮಕ್ಕಳ ಕಂಗಳು....

ಗ್ರಾಮದ ಸರಪಂಚನ ಮನೆಯ ಹೂವು ಕೊಯ್ಯಲು ಹೋಗಿ, ಆತನಿಂದ ಒದೆತ ತಿಂದು ಅಸುನೀಗಿದ ಉತ್ತರಪ್ರದೇಶದ ಪೋರ ಆ ಹೂ ಗಿಡದಡಿಗೆ ಬಿಟ್ಟ ಪುಟ್ಟ ಹವಾಯ್ ಚಪ್ಪಲಿಗಳು....

.... ಈಗ ಕಣ್ಣೆದುರಿನ ಬಿಂಬಗಳು

ಸಂಪಾದಕ



# ಭಾವ ಲೋಕ

## ಕತೆಗಳು



## ಶತಮಾನದ ಮೆಲುಕು



## ವಿಶ್ವ ಭಾರತಿ

### ದೇಶಚ್ಛೇದದ ಕತೆಗಳು





# ಭಾವನಾ

ಸಂಪುಟ -1 ಸಂಚಿಕೆ - 6
ಸೆಪ್ಟೆಂಬರ್ 2000



ಪ್ರಕಾಶಕರು, ಮುದ್ರಕರು, ಮಾಲಿಕರು
ವಿಜಯ ಸಂಕೇಶ್ವರ
ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಸಂಪಾದಕ
ಜಯಂತ ಕಾಯ್ಕಿಣಿ

ಮುಖಪುಟ ಕಲಾಕೃತಿ : ಪ್ರದೀಪ್ ರಾವುತ್
ವಿನ್ಯಾಸ: ಶ್ರೀಪಾದ್

ಹಿಂಪುಟ ಛಾಯಾಚಿತ್ರ : ಎಚ್. ಚಂದ್ರಶೇಖರ್

ಸಂಚಿಕೆಯ ಕಲಾವಿದರು: ಸೃಜನ್, ಇಕ್ಬಾಲ್ ಅಹ್ಮದ್, ಚಂದ್ರಕಾಂತ ಕುಸನೂರ್, ರಾಧಾಕೃಷ್ಣ ಬಂದಗದ್ದೆ , ದೇವದಾಸ್, ಅಪಾರ, ಪ್ರಕಾಶ್ ವಿಶ್ವಕರ್ಮ, ಸಂಗು, ರಾಜೇಶ್, ಪ್ರತಿಭಾ, ಜಾನ್‌ದೇವರಾಜ್, ಶಶಿಧರ್, ಶ್ರೀಪಾದ್

ಸಂಪಾದಕೀಯ ಕಾರ್ಯಾಲಯ
ನಂ. 32, 2ನೆಯ ಮುಖ್ಯರಸ್ತೆ, ವೈಯಾಳಿಕಾವಲ್
ಬೆಂಗಳೂರು - 560 003
ದೂರವಾಣಿ : 3365312, 3365313
ಫ್ಯಾಕ್ಸ್: 080-3340311

ಪ್ರಧಾನ ಕಛೇರಿ
ಗಿರಿರಾಜ ಅನೆಕ್ಸ್
ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ
ದೂರವಾಣಿ: 0836-253656, 253657
ಫ್ಯಾಕ್ಸ್: 0836-253630





ಶಾಂತಾರಾಮ ಸೋಮಯಾಜಿ

# ಎಂದೂ ಬೆಳೆಯದ ಹುಡುಗ

ಇಲ್ಲ, ಉಳ್ಳಾಲ ಎಲ್ಲುಂಟು ಅಂತ ನನಗೆ ಗೊತ್ತೇ ಇರಲಿಲ್ಲ. ಹೇಗೆ ಗೊತ್ತಾಗುವುದು ನನಗೆ? ಅಲ್ಲಿಗೆ ಹೋದರಲ್ವಾ ನಾನು. ಆಗ ನಾನು ಸಣ್ಣ ಹುಡುಗನಲ್ವಾ? ಆ ಹೊಸಬೆಟ್ಟು, ಬೈಕಂಪಾಡಿ, ತೋಕೂರು, ಕೂಳೂರು, ಅದು ಬಿಟ್ಟು ನಾನು, ಬೇರೆಲ್ಲಿಗೆ ಹೋಗಿದ್ದೆ? ನನಗೆ ಒಬ್ಬನಿಗೇ ಹೇಗೆ ಹೋಗ್ಲಿಕ್ಕಾಗ್ತದೆ? ನನ್ನ ಅಪ್ಪನೊಟ್ಟಿಗೆ ನಾನು ಒಂದೆರಡು ಸರ್ತಿ ಮಂಗಳೂರಿಗೆ ಹೋಗಿ ಬಂದದ್ದು ಹೌದು. ಆ ಹಂಪನಕಟ್ಟೆ ಬಸ್‌ಸ್ಟ್ಯಾಂಡಿನಲ್ಲಿ, ಎಷ್ಟೆಲ್ಲಾ ಬಸ್ಸು ಬಂದು ನಿಲ್ತವೆ ಅಂತ, ಅಷ್ಟು ಮಾತ್ರ ನಂಗೆ ನೆನಪು. ಮತ್ತೆ ಅಲ್ಲೇ ಕಬ್ಬಿನ ರಸ ಕುಡಿದದ್ದೂ ನೆನಪುಂಟು. ಎಷ್ಟು ನೊಣ ಇರ್ತವೆ ಅಲ್ಲಿ ಅಲ್ವಾ? ಒಂದೆರಡು ದುಂಬಿ ಕೂಡಾ ಹಾರಾಡ್ತಾ ಇದ್ವು. ಪುಣ್ಯಕ್ಕೆ ನನ್ನನ್ನು ಕಚ್ಚಲಿಲ್ಲ ಅವು. ಕಚ್ಚಿದ್ರೆ ಎಷ್ಟು ನೋವು ಬರ್ತದೆ ಅಲ್ವಾ? ನನ್ನ ಅಕ್ಕ ಒಮ್ಮೆ ಕಚ್ಚಿಸಿಕೊಂಡಿದ್ದಳು. ಆಗ ಅವಳ ಕಿರಿಚಾಟ ನೋಡ್ಬೇಕಿತ್ತು. ಹೌದು, ಮುಖದ ಮೇಲೇ ಕಚ್ಚಿದ್ದು, ಕೆನ್ನೆ ಮೇಲೆ. ಪುಗ್ಗದ ಹಾಗೆ ಬಾತುಹೋಗಿತ್ತು ಕೆನ್ನೆ.

ಮತ್ತೊಂದು ಸರ್ತಿ ಮದುವೆಗಂತ ಬಜಪೆಗೆ ಹೋಗಿ ಬಂದಿದ್ದೆ. ಅದು ನೆನಪುಂಟು ನನಗೆ. ಹೌದು, ವಿಮಾನ ನಿಲ್ದಾಣ ಅಲ್ಲೇ ಇರುವುದಲ್ವಾ? ಅದು ಗೊತ್ತಿತ್ತು. ನಿಲ್ದಾಣ ನೋಡ್ಬೇಕಂತ ತುಂಬಾ ಆಶೆಯಿತ್ತು. ಅದೂ ವಿಮಾನ, ಹಕ್ಕಿಯ ಹಾಗೆ ರೆಕ್ಕೆ ಬಿಚ್ಚಿಕೊಂಡು ಇಳಿದು ಬರುವಾಗ ತುಂಬಾ ಚಂದ ಕಾಣ್ತದಂತ ಕೇಳಿದ್ದೆ. ಕೆಳಗಿಳಿದ ಮೇಲೆ ವಿಮಾನದ ರೆಕ್ಕೆಗೆ ಏನಾಗ್ತದೆ? ಮಡಚಿಕೊಳ್ತದಾ? ಅದು ಗೊತ್ತಿಲ್ಲ. ಇಲ್ಲ, ವಿಮಾನ ನೋಡ್ಲಿಕ್ಕಾಗ್ಲಿಲ್ಲ. ನನ್ನ ಅಪ್ಪ ಕರಕೊಂಡು ಹೋದರಲ್ವಾ? ಅವ್ರಿಗೆ ಎಲ್ಲಿತ್ತು ಪುರುಸೊತ್ತು? ವಿಮಾನದೊಳಗೆ, ಮೇಲೆ ಹತ್ತಿ ನೋಡ್ಬೇಕಂತಲೂ ಆಶೆಯಿತ್ತು. ಅಲ್ಲಿ, ಒಳಗೆ ಕೂತುಕೊಂಡ ಕೂಡಲೇ ಚಾಕಲೇಟು ಕೊಡ್ತಾರಂತಲ್ವಾ? ಮತ್ತೆ ಬಾಯಾರಿಕೆ ಅಂತ ನೀರು ಕೇಳಿದ್ರೆ, ಐಸ್ ಹಾಕಿದ ನೀರೇ ಕೊಡ್ತಾರಂತಲ್ವಾ? ಅದರೊಳಗೆ ಹೇಗೆ ಐಸ್ ಮಾಡ್ತಾರೆ? ನಂಗೆ ಗೊತ್ತಿಲ್ಲ.

ಆಮೇಲೆ ಇನ್ನೊಂದು ಸರ್ತಿ ಉಡುಪಿಗೆ ನನ್ನನ್ನು ಕರಕೊಂಡು ಹೋಗಿದ್ರು. ನನ್ನೊಬ್ಬನನ್ನೇ ಅಲ್ಲ. ನನ್ನ ಅಮ್ಮ, ಅಕ್ಕ, ಅಣ್ಣ ಮತ್ತು ತಂಗಿ, ಎಲ್ರೂ ಹೋಗಿದ್ದೆವು. ನೀಲಿ ಬಸ್ಸಲ್ಲಿ. ನೆನಪುಂಟು ನನಗೆ. ಊಟವಾ? ಮಠದಲ್ಲಿ ಅಲ್ಲ. ಹೋಟ್ಲಲ್ಲಿ ಮಾಡಿದ್ದು. ಇಷ್ಟು ದೊಡ್ಡ ಪ್ಲೇಟಲ್ಲಿ ಬಡಿಸಿದ್ದು ಅವರು. ಅಷ್ಟು ದೊಡ್ಡ ಪ್ಲೇಟಲ್ಲಿ ಊಟ ಮಾಡ್ಲಿಕ್ಕಾಗ್ತದಾ





ಅಂತ ಕಂಡಿತು ನನಗೆ. ಊಟವಾ? ಒಳ್ಳೇದಿತ್ತು. ಏನು, ಚಪಾತಿಯಾ? ಅಲ್ಲ, ಅಲ್ಲ, ಪೂರಿ. ಬಿಸಿ ಬಿಸಿ ಇತ್ತು. ಕೈಯಿಂದ ಅದನ್ನು ಒತ್ತಿದ ಕೂಡಲೇ, ಅದರೊಳಗಿಂದ ಬಿಸಿ ಗಾಳಿ ಸುಂಯಂತ ಹೊರಗೆ ಬರ್ತದೆ ಅಲ್ವಾ? ಅದೊಂದು ತಮಾಷೆ. ಹೌದು, ಪೂರಿ ನಂಗೆ ಇಷ್ಟವಾಯ್ತು. ಉಳಿದವರಿಗಾ? ಎಲ್ರಿಗೂ ಇಷ್ಟವಾಯ್ತು. ನನ್ನ ಅಕ್ಕ ಜಾಸ್ತಿ ತಿಂದುಬಿಟ್ಟಳಂತ ಕಾಣ್ತದೆ. ಅವಳಿಗೆ ಯಾವಾಗ್ಲೂ ಹಸಿವೆ. ನೋಡ್ಲಿಕ್ಕೆ, ಹೀಗೆ ಕಡ್ಡಿ ಪಹಿಲ್ವಾನ ತರ ಇರ್ತಿದ್ದಳು. ಆದ್ರೆ ಯಾವಾಗಲೂ ಹಸಿವು. ಮನೇದ್ದು ಬೆಲ್ಲ, ಕಾಯಿ ಕದೀತಾ ಇದ್ದದ್ದೆಲ್ಲಾ ಅವಳೇ. ಕಳ್ಳಿ. ಕೆಲ ಸರ್ತಿ ಅದಕ್ಕಾಗಿ ಸರೀ ಪೆಟ್ಟು ತಿಂದಿದ್ದಾಳೆ. ಅಲ್ಲ, ಅಲ್ಲ ಅಮ್ಮನಿಂದಲ್ಲ, ಅಪ್ಪನಿಂದ. ಅಮ್ಮ ಯಾರಿಗೂ ಹೊಡೆದದ್ದಿಲ್ಲ. ನಾವೇನಾದ್ರು ಸರಿ ಮಾಡದೇ ಇದ್ರೆ, ಅವರು ಅಳುವುದು ಅಷ್ಟೆ. ಯಾವಾಗ್ಲೂ ಅಳುವುದು. ಬಾಯಿ ಬಿಟ್ಟು, 'ಅಮ್ಮ, ಅಮ್ಮ, ಅಮ್ಮ' ಅಂತ ಕೂಗಿಕೊಂಡಲ್ಲ. ಸುಮ್ಮನೇ ಬಾಯಿ ಮುಚ್ಚಿಕೊಂಡು 'ಹೂಂ ಹೂಂ' ಅಂತ ಉಸಿರಲ್ಲೇ ಅಳುವುದು ಅವರು. ಆಗ ಮೂಗಿಂದ ಸಿಂಬಳ ಬರ್ತದೆ ಅವರಿಗೆ. ಹೇಸಿಗೆ ಅಲ್ವಾ, ಹೌದು....

ಅಕ್ಕ, ಹಾಗೆ ರಾಕ್ಷಸನ ಹಾಗೆ ತಿಂದಳಲ್ವಾ, ಹೋಟ್ಲಲ್ಲಿ. ಅದೇ ಉಡುಪಿಯಲ್ಲಿ. ಮತ್ತೆಂತ ಆಯ್ತು ಗೊತ್ತುಂಟಾ? ಅವಳು ಬಸ್ಸಲ್ಲೇ ವಾಂತಿ ಮಾಡಿದ್ದು. ಇಶ್ಶಿ, ಹೇಸಿಗೆ, ವಾಸನೆ. ವಾಂತಿ ಮಾಡಿದ್ರೆ ಎಷ್ಟು ವಾಸನೆ ಅಲ್ವಾ? ಆವಾಗ್ಲೇ ಅದು ನನಗೆ ಗೊತ್ತಾದದ್ದು.



ಇಲ್ಲ, ಉಳ್ಳಾಲಕ್ಕೆ ನಾನು ಹೋಗ್ಲೇ ಇಲ್ಲ, ಅದಕ್ಕಿಂತ ಮೊದಲು. ಅಲ್ಲಿ ಹರಿಯುವ ನದಿಯಾ? ನೇತ್ರಾವತಿ, ಅಲ್ವಾ? ಹೌದು ಕೇಳಿದ್ದೇನೆ. ನೋಡಿರಲಿಲ್ಲ ಮಾತ್ರ. ಅದೊಂದು ತಮಾಷೆ ಅಲ್ವಾ, ಅಂದ್ರೆ, ನದಿಗೆ ನೇತ್ರಾವತಿ ಅಂತ ಹೆಸರಿಟ್ಟದ್ದು? ಯಾಕೆ ಗೊತ್ತುಂಟಾ? ನನ್ನ ಅಜ್ಜನ ಮನೆಯಲ್ಲೂ ಒಬ್ಬರು ನೇತ್ರಾವತಿ ಅಂತ ಇದ್ದಾರೆ. ನಾವೆಲ್ಲಾ 'ನೇತ್ರಾವತಿ ಅತ್ತೆ' ಅಂತ ಅವರನ್ನು ಕರೆಯುವುದು. ಅವರು ನಮಗೇನು ಆಗ್ಬೇಕೂಂತ ನನಗೆ ಗೊತ್ತಿಲ್ಲ. ಅಪ್ಪನ ಅಕ್ಕನೋ ಏನೋ. ಅಥವಾ ಅಪ್ಪನ ಚಿಕ್ಕಮ್ಮನಾ? ಏನೋ ನನಗೆ ಗೊತ್ತಿಲ್ಲ, ನೇತ್ರಾವತಿ ಅತ್ತೆ ಅಂತ ಮಾತ್ರ ಗೊತ್ತುಂಟು. ಅವರ ಪ್ರಾಯವಾ? ಜಾಸ್ತಿ ಯಾಗಿದೆ. ಎಷ್ಟೂಂತ ನಂಗೆ ಹೇಗೆ ಗೊತ್ತು? ಜಾಸ್ತಿಯಾಗಿದೆ ಅಂತ ಗೊತ್ತುಂಟು, ಆದ್ರೆ ಅವರಿಗೆ ಸರೀ ಮಾತಾಡಲಿಕ್ಕೆ ಬರುವುದಿಲ್ಲ. ಮಗು ಮಾತಾಡಿದ ಹಾಗೆ ಮಾತಾಡ್ತಾ ಇದ್ದದ್ದು ಅವರು. ಮಾತಾಡಲಿಕ್ಕೆ ಶುರು ಮಾಡಿದ್ರೆ, ಹೇಗೆ ಗೊತ್ತುಂಟಾ, ಅವರ ನಾಲಿಗೆ ಹೊರಗೆ ಬರ್ತದೆ. ಹಾವಿನ ಹಾಗೆ. ಇವರೇನು ಹಾವಾ ಅಂತ ಯಾರಾದರೂ ಎಣಿಸಿಕೊಳ್ಬೇಕು. ಆದರೆ ಹಾವಿನ ಹಾಗೆ ಕಚ್ಚುವುದಿಲ್ಲ ಅವರು. ಅವರ ಬಾಯಿಯ ಆ ಕಡೆಯಿಂದ, ಈ ಕಡೆಯಿಂದ ಎಂಜಲು ಹೊರಗೆ ಸುರೀತದೆ. ಕೊಳಕು ಅಲ್ವಾ? ನೋಡಿ ದವರು ಇಶ್ಶಪ್ಪಾ ಅಂತ ಮಾಡ್ತಾರೆ. ಅದಕ್ಕೇ ನಾನವರ ಮುಖ ಕೂಡಾ ನೋಡ್ತಿರಲಿಲ್ಲ.

ಉಳ್ಳಾಲಕ್ಕೆ ದಿನಾಗಲೂ ಮಂಗಳೂರಿಂದ ಟ್ರೈನು ಹೋಗ್ತಾ, ಬರ್ತಾ ಇರ್ತದೆ ಅಂತ ಗೊತ್ತಿತ್ತು ನನಗೆ. ಟ್ರೈನು ಹೋಗಲಿಕ್ಕಂತ ಉದ್ದ ಕಬ್ಬಿಣದ ಮಾರ್ಗ ಉಂಟಂತಲ್ವಾ? ಜಲ್ಲಿಕಲ್ಲು ಹಾಕಿ ಮಾಡ್ತಾರಂತಲ್ವಾ? ಇಲ್ಲ, ನಾನು ಸ್ವತಃ ನೋಡಿರಲಿಲ್ಲ.

ಟ್ರೈನು ಹೇಗುಂಟುಂತಲಾ? ಟ್ರೈನು ಹೇಗುಂಟುಂತ ನನಗೆ ಹೇಗೆ ಗೊತ್ತಾಗಬೇಕು? ನೋಡಿದ್ದರಲ್ವಾ ನಾನು. ಹೌದು, ಚಿತ್ರದಲ್ಲಿ ನೋಡಿದ್ದೆ ನಾನು. ಆಗ ನಮ್ಮ ನಾಲ್ಕನೇ ಕ್ಲಾಸಿನ ಪುಸ್ತಕದಲ್ಲಿ ಟ್ರೈನಿನ ಚಿತ್ರ ಇತ್ತು. ಹೊರಗಿಂದ ಮಾತ್ರ ಚಿತ್ರ ತೆಗೆದದ್ದು, ಟ್ರೈನಿನ ಒಳಗೆ ಹೇಗುಂಟೂಂತ ನಂಗೆ ಗೊತ್ತಿಲ್ಲ. ಬಸ್ಸಿನ ಹಾಗೆ ಸೀಟಿರಬೇಕು ಅಲ್ವಾ. ಕೆಲವರು ಟ್ರೈನಲ್ಲಿ ಹೋಗಿ ಬಂದವರು, ಅದರೊಳಗೆ ಮಲಗಲಿಕ್ಕೆ ಕೂಡಾ ಜಾಗ ಉಂಟೂಂತ ಹೇಳಿದ್ದನ್ನು ಕೇಳಿದ್ದೆ. ಆಗ, ಅದು ಹೇಗೆ ಅಂತ ನನಗೆ ಆಶ್ಚರ್ಯ. ಎಲ್ರೂ, ಒಟ್ಟಿಗೇ, ಚಾಪೆ ಹಾಸಿ ಮಲಗುವುದಾ? ಆದರೆ ಹಾಗೆ ಟ್ರೈನು ಸ್ಪೀಡಲ್ಲಿ ಓಡುವಾಗ ಒಬ್ಬರಿಗೊಬ್ಬರು ಡೇಶ್ ಆಗುವುದಿಲ್ವಾ? ಅದೇ ಆಶ್ಚರ್ಯ. ಡೇಶ್ ಆಗಿ ಹೊರಗೆ ಬಿದ್ದುಬಿಟ್ಟರೆ? ಹೇಗಪ್ಪಾ, ನಂಗೆ ಗೊತ್ತಾಗುವುದಿಲ್ಲ..... ಮತ್ತೆ ನನ್ನ ದೊಡ್ಡಪ್ಪನ ದೊಡ್ಡ ಮಗಳಿದ್ದಾಳಲ್ವಾ, ಮಾಧವಿ, ಅವಳ ಮದುವೆಗೆ ದಿಬ್ಬಣದವರೆಲ್ಲಾ ಬಂದದ್ದು ಕೂಡಾ ಟ್ರೈನಲ್ಲಿ ಅಲ್ವಾ? ಹೌದು. ಟ್ರೈನಿನೊಳಗೆ ಉಚ್ಚೆ ಹೊಯ್ಯಲಿಕ್ಕೆ ಕೂಡಾ ಜಾಗವುಂಟಂತಲ್ವಾ? ಆಗ ಗೊತ್ತಾದದ್ದು ನನಗೆ.... ಆದರೆ ನಾನು ಸ್ವತಃ ಟ್ರೈನು ನೋಡ್ಲೇ ಇಲ್ಲ. ಅದರಲ್ಲಿ ಹೋಗಲೂ ಇಲ್ಲ. ಟ್ರೈನು, ಚುಕ್, ಚುಕ್, ಚುಕ್ ಅಂತ ಶಬ್ದ ಮಾಡಿಕೊಂಡು ಹೋಗ್ತದೆ ಅಂತ ಮಾತ್ರ ಗೊತ್ತಿತ್ತು. ಆದರೆ ಸ್ವತಃ ನೋಡ್ಲೇ ಇಲ್ಲ.

ಉಳ್ಳಾಲ ಸಂಕವಾ? ಟ್ರೈನು ಹೋಗಿ ಬರಲಿಕ್ಕೆ, ಅಲ್ಲಿ, ಉಳ್ಳಾಲದಲ್ಲಿ ಮೊದಲಿಂದಲೂ ಒಂದು ಸಂಕ ಇದೆ ಅಂತ ಬೇರೆಯವರು ಹೇಳಿದ್ದನ್ನು ಕೇಳಿದ್ದೆ ಆಗ. ಸೇತುವೆ ಇರದೇ ಇದ್ರೆ ಟ್ರೈನು ಹೋಗಲಿಕ್ಕಾಗ್ತದಾ? ನೀರಲ್ಲಿ ದೊಮ್ಮಂತ ಬೀಳುವುದಿಲ್ವಾ ಅದು?

ಆದರೆ, ಲಾರಿ, ಬಸ್ಸು ಮತ್ತು ಮನುಷ್ಯರು ಹೋಗಲಿಕ್ಕೆ ಸಂಕ ಇರ್ಲಿಲ್ಲಂತಲೂ ಗೊತ್ತಿತ್ತು. ಸಂಕ ಬೇಕೇ ಬೇಕಲ್ವಾ. ಮನುಷ್ಯರಾದ್ರೆ ದೋಣಿ ಯಲ್ಲಿ ಹೋಗಬಹುದು. ಈಜಿಕೊಂಡೂ

ಹೋಗಬಹುದು ಹೌದು. ಆದ್ರೆ, ಬಟ್ಟೆಯೆಲ್ಲಾ ಒದ್ದೆಯಾಗುವುದಿಲ್ವಾ? ಒದ್ದೆಯಾಗುವುದು ಚಿಂತಿಲ್ಲಾ ಅಂತಾದ್ರೆ, ಈಜಿಕೊಂಡು ಹೋಗ ಬಹುದು. ಆದ್ರೆ, ಲಾರಿ, ಬಸ್ಸು ಹೇಗೆ ಹೋಗು ವುದು? ಅವಕ್ಕೆ ಈಜಲಿಕ್ಕಾಗ್ತದಾ? ಈಜುವಂತಾ ಬಸ್ಸು ಮಾಡ್ಬೇಕು. ಈಜಿಕೊಂಡು ಹೋಗುವ ಲಾರಿ ಮಾಡ್ಬೇಕು. ಹಾಗಾದ್ರೆ, ಚಿಂತಿಲ್ಲ. ಅದ ನ್ನೆಲ್ಲಾ ಯಾರು ಮಾಡುವುದು? ಇಂಜಿನಿಯರ್ ಕಲಿತವರು ಮಾಡ್ಬೇಕಷ್ಟೇ. ನನಗೂ ಆಗ ಇಂಜಿ ನಿಯರ್ ಆಗ್ಬೇಕಂತ ಆಶೆಯಿತ್ತು, ಇಂಜಿನಿಯರ್ ಕಲಿತ್ರೆ, ಲಾರಿಯನ್ನು ನೀರಲ್ಲಿ ಈಜುವಂತೆ ಮಾಡ ಬಹುದಲ್ವಾ? ಆಗ ಸೇತುವೆ ಎಂತದಕ್ಕೆ? ನಮ್ಮ ಹೆಡ್‌ಮಾಸ್ಟರರ ಮಗ ಇದ್ದಾನಲ್ವಾ, ಅವನೂ ಇಂಜಿನಿಯರ್ ಅಂತೆ. ಅವನಿಗೊಂದು ಜೀಪಿತ್ತು. ಜೀಪು ಹೋಗಲಿಕ್ಕೆ ಮಾರ್ಗ ಬೇಕಂತ ಇಲ್ವಂತೆ, ಹಾಗೆ ಹೇಳುವುದನ್ನು ಕೇಳಿದ್ದೇನೆ. ಅದು ಗುಡ್ಡದ ಮೇಲೆ ಹತ್ತಿಕೊಂಡೇ, ಹತ್ತಿಕೊಂಡೇ ಹೋಗ್ತದಂತೆ!.... ಇಲ್ಲಪ್ಪಾ, ನಾನು ಜೀಪಲ್ಲಿ ಕೂತುಕೊಳ್ಳಲೇ ಇಲ್ಲ. ಕೂತು ಕೊಂಡು ಡ್ರೈವ್ ಮಾಡ್ಬೇಕಂತ ಆಶೆಯಿತ್ತು. ಅದಕ್ಕೇ ನಂಗೆ ಇಂಜನಿಯರ್ ಆಗ್ಬೇಕಂತ ಆಶೆಯಿದ್ದದ್ದು.

ಅಲ್ಲಿ, ಉಳ್ಳಾಲದಲ್ಲಿ, ಲಾರಿ, ಬಸ್ಸಿಗೆ ಸೇತುವೆ ಇಲ್ಲಾಂತ, ಅದಕ್ಕಾಗಿ ಒಂದು ಸಂಕ ಕಟ್ಟಲಿಕ್ಕೆ ಶುರುಮಾಡಿದ್ದಂತ ನಾನು ಕೇಳಿದ್ದೆ. ಗಟ್ಟಿ ಸಿಮೆಂಟು ಹಾಕಿ ಕಟ್ಟುತ್ತಾ ಇದ್ದಾರಂತ ಕೇಳಿದ್ದೆ. ಮತ್ತೆಂತ ಆಯ್ತು ಗೊತ್ತುಂಟಾ? ಅದು ಅರ್ಧ ಕಟ್ಟುವಾಗಲೇ ದೊಡ್ಡ ನೆರೆ ಬಂತು. ಮಳೆಗಾಲ ದಲ್ಲಿ ನೆರೆ ಬರ್ತದಲ್ವಾ, ಅದಕ್ಕಿಂತಲೂ ಜೋರು ನೆರೆ ಬಂತು. ಸಂಕ ಕಟ್ಟಿದ್ದೆಲ್ಲಾ, ಎಂದ್ರೆ, ಕಲ್ಲು, ಸಿಮೆಂಟು, ಎಲ್ಲಾ ನೆರೆಯಲ್ಲಿ ಹೋಯ್ತು. ಆಮೇಲೆ ಇನ್ನೊಂದು ಸಂಕ ಕಟ್ಟಲಿಕ್ಕೆ ಶುರು ಮಾಡಿದ್ರಂತೆ. ಅದೇ ಜಾಗದಲ್ಲಾ ಅಥವಾ ಬೇರೆ ಜಾಗದಲ್ಲಾ ಅದು ನನಗೆ ಗೊತ್ತಿಲ್ಲ. ಅದೇ ಜಾಗದಲ್ಲೇ ಇರಬೇಕು. ಮೊದಲಿಗಿಂತ ಜಾಸ್ತಿ ಗಟ್ಟಿ ಕಟ್ಟಿದರು. ಆದ್ರೆ, ಅದು ಕೂಡಾ, ಇನ್ನೊಂದು ದೊಡ್ಡ ನೆರೆ ಬಂದು ಬಿದ್ದುಬಿಟ್ಟಿತಂತೆ. ಅದೆಲ್ಲಾ ಗೊತ್ತಿತ್ತು ನನಗೆ, ಆಗ. ಹೇಗೆ ಗೊತ್ತಾಯ್ತಂತಲಾ? ನಮ್ಮ ಊರಲ್ಲಿ ಎಲ್ರಿಗೂ ಗೊತ್ತಿತ್ತು. ಪೇಪರಲ್ಲಿ ಬಂದಿತ್ತಂತ ಕಾಣ್ತದೆ. ಇಲ್ಲ, ನಾನು ಪೇಪರ್ ಓದುತ್ತಿರಲಿಲ್ಲ. ನಮ್ಮ ಮನೆಗೆ ತರಿಸಿದರಲ್ವಾ, ಅಪ್ಪ! ಅದಕ್ಕೆ ಹಣ ಎಷ್ಟು ಬೇಕು! ಅಪ್ಪನ ಹತ್ರ ಎಲ್ಲಿತ್ತು ಹಣ. ಶಾಲೆಯಲ್ಲಿ ತರಿಸ್ತಾ ಇದ್ರು. ಮತ್ತೆ ಕ್ಷೌರಿಕನ ಅಂಗಡಿಯಲ್ಲಿ ತರಿಸ್ತಾ ಇದ್ರು. 'ಮೋಹಿನಿ ವಿಲಾಸ' ಹೋಟ್ಲಲ್ಲೂ ತರಿಸ್ತಾ ಇದ್ರುಂತ ಕಾಣ್ತದೆ, ಪೇಪರು.... ಮತ್ತೆ ಆ ವಿಷಯ ನನ್ನ ದೋಸ್ತಿಯರಿಗೆಲ್ಲಾ ಗೊತ್ತಿತ್ತು.

ಹೌದು, ದೋಸ್ತಿಯರು ನನಗೆ ಆಗ ತುಂಬಾ. ನಂಗೆ ಎಲ್ರೂ ದೋಸ್ತಿಯೇ, ನಮ್ಮ ಡಾಕ್ಟರರ ಮಗ ಇದ್ದಾನಲ್ವಾ, ನರಹರಿ, ಅವನೊಬ್ಬ ಮಾತ್ರ ನನ್ನ ದೋಸ್ತಿಯಲ್ಲ. ಯಾಕೆ ಗೊತ್ತುಂಟಾ? ಒಂದು ಸರ್ತಿ, ಶಾಲೆಯಲ್ಲಿ ನಾನು ಕ್ರಿಕೆಟ್ ಆಡುವಾಗ, ಅವನೇ ಎಲ್‌ಬಿ ಡಬ್ಲ್ಯೂ ಕೊಟ್ಟು ನನ್ನನ್ನು ಔಟ್ ಮಾಡಿಯೇಬಿಟ್ಟ. ನಾನಾಗ ಇಪ್ಪತ್ತೇಳು ರನ್ ಮಾಡಿದ್ದೆ. ಹಾಫ್ ಸೆಂಚುರಿ ಖಂಡಿತಾ ಮಾಡ್ತಿದ್ದೆ. ಆದರೆ ಆ ನರಹರಿ ಸುಮ್ಮ ಸುಮ್ಮನೇ ನನ್ನನ್ನು ಔಟ್ ಮಾಡಿದ. ಅದಕ್ಕೇ ಅವನು ನನ್ನ ದೋಸ್ತಿಯಲ್ಲ. ಮತ್ತೆಲ್ರೂ ನನ್ನ ದೋಸ್ತಿ. ಅದರಲ್ಲಿ ಇಬ್ಬರು ನನ್ನ ಕ್ಲಾಸಿನವರೇ. ಒಂದೇ ಶಾಲೆಗೆ ಹೋಗ್ತಿದ್ದದ್ದು ನಾವಾಗ. ಹೆಸರಾ? ಶಾಲೆಯ ಹೆಸರಾ? ನಂಗೆ ಗೊತ್ತಿಲ್ಲ. ಎಲ್ರೂ 'ಪಡ್ಲಾಗಿ ಶಾಲೆ' ಅಂತಲೇ ಕರೀತಾ ಇದ್ದದ್ದು. ಅದೇ ಹೆಸರಿರಬೇಕು. ದೋಸ್ತಿಯವರ ಹೆಸರಾ? ಒಬ್ಬನ ಹೆಸರು ಮಧುಕರ. ಇನ್ನೊಬ್ಬ ಅಬ್ದುಲ್ಲ. ಇಬ್ರೂ ಒಳ್ಳೇ ದೋಸ್ತಿ. ಅಬ್ದುಲ್ಲ ಸ್ವಲ್ಪ ಹುಡುಗಿಯ ಹಾಗೆ, ನೋಡ್ಲಿಕ್ಕೆ. ಯುರೋಪಿ ಯನ್ ಇದ್ದಾರಲ್ವಾ, ಅದೇ ತರ ಅವಂದು ಮೈ. ಮತ್ತೆ ಪುಚ್ಚೆ ಕಣ್ಣು. ತುಂಬಾ ನಾಚಿಕೆ ಅವನಿಗೆ. ಕನ್ನಡ ಮಾತಾಡಲಿಕ್ಕೆ ಇನ್ನೂ ಜಾಸ್ತಿ ನಾಚಿಕೆ.

ಮಧುಕರ, ಅಬ್ದುಲ್ಲ, ಇಬ್ರಿಗೂ ಉಳ್ಳಾಲದಲ್ಲಿ ಹೊಸ ಸಂಕ ಕಟ್ತಾ ಇದ್ದಾರಂತ ಗೊತ್ತು. ಅಬ್ದುಲ್ಲನಿಗೆ ಟ್ರೈನಲ್ಲಿ ಹೋಗಿ ಗೊತ್ತುಂಟು. ಆದ್ರೆ, ಅವನಿಗೆ ಅದರಲ್ಲಿ ಹೋಗುವುದು ಇಷ್ಟ ಆಗ್ಲಿಲ್ಲಂತೆ. ಯಾಕೆ ಗೊತ್ತುಂಟಾ? ಅದರಲ್ಲಿ ಕೂತ್ಕೊಂಡರೆ ಬೀಳುವ ಹಾಗೆ ಆಗ್ತಿತ್ತಂತೆ. ಹಾಗೆ ಆಗ್ತದಾ? ಇರಬೇಕು. ಇಲ್ಲದಿದ್ರೆ ಅವನು ಹೇಗೆ ಹೇಳುವುದು? ಸುಳ್ಳು ಹೇಳ್ತಾನಾ ಅವ?

ಮಧುಕರ ಒಂದು ಸರ್ತಿ ಹೇಳಿದ. ಏನಂದ್ರೆ, ಇನ್ನೊಂದು ಸರ್ತಿ ಸಂಕ ಕಟ್ಟಬೇಕಾದ್ರೆ ಯಾರಾದರೂ ಸಣ್ಣ ಹುಡುಗನನ್ನು ಬಲಿ ಕೊಡಲೇಬೇಕಂತೆ. ಬಲಿ ಕೊಡದೇ ಇದ್ರೆ, ಏನಾಗ್ತದೆ ಗೊತ್ತುಂಟಾ, ಸಂಕ, ಕಟ್ಟಿದ್ದೆಲ್ಲಾ ಪುನಾ ನೀರಿಗೆ ಬೀಳ್ತದಂತೆ. ಎಷ್ಟು ಸರ್ತಿ ಕಟ್ಟಿದರೂ ಅಷ್ಟು ಸರ್ತಿ ಕೂಡಾ ನೀರಲ್ಲಿ ಕೊಚ್ಚಿ ಹೋಗ್ತದಂತೆ, ಬಲಿ ಕೊಡದೇ ಇದ್ರೆ! ಅದು ಆಶ್ಚರ್ಯವಲ್ವಾ? ಎಂತದಪ್ಪಾ ಹೀಗೆ ಅಂತ ಕಂಡಿತು ನನಗೆ. ಹತ್ತು ಸರ್ತಿ ಕಟ್ಟಿದ್ರು, ಹತ್ತು ಸರ್ತಿ ಮುಳುಗಿ ಹೋಗ್ತದಾ? ನೂರು ಸರ್ತಿ ಕಟ್ಟಿದರೆ? ನೂರು ಸರ್ತಿಯೂ ಮುಳುಗಿ ಹೋಗ್ತದಾ? ಮತ್ತೆ ಸಾವಿರ ಸರ್ತಿ? ಅಷ್ಟು ಸರ್ತಿ ಮುಳುಗಿ ಹೋಗುವುದಂದ್ರೆ! ವಿಚಿತ್ರವಲ್ವಾ ಅದು?

ಆದ್ರೆ, ಬಲಿ ಕೊಟ್ರೆ ಮಾತ್ರ ಸಂಕ ಗಟ್ಟಿ ನಿಲ್ತದಂತೆ. ಹುಡುಗಂದೇ ಬಲಿಯಾಗಬೇಕು. ಒಂಭತ್ತು-ಹತ್ತು ವರ್ಷದ ಹುಡುಗ ಆಗಬೇಕಂತೆ. ಅಂದರೆ ಅಬ್ದುಲ್ಲ, ಮಧುಕರ ಮತ್ತು ನನ್ನ ಪ್ರಾಯದ ಹುಡುಗ ಆಗ್ಬೇಕಲ್ವಾ ಅಂತ ನಾನಾಗ ಯೋಚನೆ ಮಾಡಿದೆ.

ಆದ್ರೆ, ಬಲಿಯಂದ್ರೆಂತದು? ಹುಡುಗನ ಬಲಿ ಅಂದ್ರೇನು? ಅದು ನಂಗೆ ಗೊತ್ತಿರಲಿಲ್ಲ. ನಾನು ಮಧುಕರನತ್ರ ಕೇಳಿದೆ, ''ಎಂತದು, ಬಲಿಯಾ? ಎಂತದು ಹಾಗಂದ್ರೆ?'' ನಾನು ಕೇಳಿದ್ದು ಮಧುಕರನತ್ರ, ಅವನು ಎಲ್ರಿಗಿಂತ ಹುಶಾರು. ಅದಕ್ಕೆ, ''ಭೂತಕ್ಕೆ ಬಲಿ ಕೊಡುವುದು ಗೊತ್ತಿಲ್ವಾ ನಿಂಗೆ'' ಅಂತ ಕೇಳಿದ ಮಧುಕರ.

ಅದು ಗೊತ್ತಿತ್ತು. ಎಲ್ರಿಗೂ ಗೊತ್ತಿಲ್ವಾ? ಅಬ್ದುಲ್ಲನಿಗೂ ಗೊತ್ತಿತ್ತು. ಅಂಗಡಿಯಿಟ್ಟಿದ್ದಾರಲ್ವಾ, ನಾರಾಯಣ ಶೆಟ್ಟರೂ, ಅವರು ಭೂತಕ್ಕೆ ಕೋಳಿ ಬಲಿಕೊಟ್ಟದ್ದನ್ನು ನಾನು ನೋಡ್ಲಿಲ್ವಾ? ಭೂತಕ್ಕೆ ನಾರಾಯಣ ಶೆಟ್ರ, ಕೋಳಿಯೇ ಇಷ್ಟವಂತೆ. ಹಾಗೆ ಎಲ್ಲೂ, ಹೇಳುವುದನ್ನು ಕೇಳಿದ್ದೆ ನಾನು.

ಆದ್ರೆ, ಹುಡುಗನನ್ನು ಬಲಿಕೊಡುವುದಂದ್ರೆ ಏನು? ಭೂತಕ್ಕೆ ಇಷ್ಟ ಕೋಳಿ ಅಲ್ವಾ? ಮತ್ತೆ ಸಂಕಕ್ಕೆ? ಸಂಕ ಅಂದ್ರೆ, ಭೂತವಾ? ಅದು ಹೇಗೆ ಸಾಧ್ಯ? ನಂಗೆ ಅರ್ಥವಾಗಲಿಲ್ಲ. ಅದಕ್ಕೆ ನಾನು ಮಧುಕರನತ್ರ ಕೇಳಿದೆ, ''ಅದು ಗೊತ್ತುಂಟು, ಆದ್ರೆ ಹುಡುಗ ಎಂತದಕ್ಕೆ? ಸಂಕ ಅಂದ್ರೆ ಭೂತವಾ?''

''ಅದು ಕೂಡಾ ಹಾಗೇ'' ಅಂತ ಹೇಳಿದ, ಮಧುಕರ.

''ಅದ್ಹೇಗೆ ಹೇಳು'' ಅಂತ ಪೀಡಿಸಿದೆ, ಮಧುಕರನತ್ರ.

''ಕೋಳಿ ಕೊಟ್ಟ ಹಾಗೆ ಹುಡುಗನನ್ನು ಕೊಡುವುದು ಅಷ್ಟೆ'' ಅಂತ ಹೇಳಿದ, ಅವ.

''ಅಂದ್ರೆ, ಭೂತದ ಮುಂದೆ ಹುಡುಗನ ಮಂಡೆ ಕತ್ತರಿಸುತ್ತಾರಾ'' ಅಂತ ಕೇಳಿದೆ ನಾನು.

''ಅದೆಲ್ಲಾ ನಂಗೆ ಗೊತ್ತಿಲ್ಲ, ಎರಡೂ ಸಹ ಒಂದೇ ರೀತಿ ಅಂತ ಗೊತ್ತುಂಟು ನನಗೆ'', ಅಂತ ಹೇಳಿದ, ಮಧುಕರ.

ನಂಗೆ ಅದೇ ಆಶ್ಚರ್ಯ ಕಂಡಿತು. ಕುತ್ತಿಗೆ ತುಂಡು ಮಾಡ್ತಾರಾ? ಹುಡುಗಂದು? ಆಗ ರಕ್ತ ಬರುವುದಿಲ್ವಾ? ನೋವಾಗಬೇಕಲ್ವಾ? ಅಳುವುದಿಲ್ವಾ ಹುಡುಗ? ಹಾಗೆಲ್ಲಾ ಯೋಚನೆಯಾಯ್ತು ನನಗೆ. ಹಾಗೇ ಕೇಳಿದೆ ನಾನು ಮಧುಕರನತ್ರ.

''ಅಳದೆ ಇರ್ಲಿಕ್ಕಾಗ್ತದಾ?'' ಅಂತ ಪ್ರಶ್ನೆ ಹಾಕಿದ, ಮಧುಕರ.

ಹಾಗಾದ್ರೆ, ಅದೆಂತದು ಬಲಿ ಅಂತ ಕಂಡಿತು ನನಗೆ. ಕುತ್ತಿಗೆಗೆ ಗಾಯ ಮಾಡಿ, ರಕ್ತ ಬರಿಸಿಕೊಂಡು ಬಲಿಕೊಡುವುದಾ? ಹುಡುಗನಿಗೆ



ಚಂದ್ರಕಾಂತ ಕುಸನೂರು

ಅಷ್ಟೆಲ್ಲಾ ನೋವು ಮಾಡುವುದೆಂತದಕ್ಕೆ? ತುಂಬಾ ನೋವು ಆಗಿಯೇ ಆಗ್ತದಲ್ವಾ. ನನ್ನ ಕೈಗೆ ಮುಳ್ಳು ತಾಗಿದರೂ, ಜೋರು ನೋವು ಬರ್ತದೆ. ರಕ್ತ ನೋಡಿದ್ರೆ, ಸಾಕು, ನಂಗೆ ಕೆಲ ಸರ್ತಿ ಮೂರ್ಛೆ ತಪ್ಪಿ ಹೋಗ್ತದೆ. ಒಂದು ಸರ್ತಿ ಏನಾಯ್ತು ಗೊತ್ತುಂಟಾ? ರಾಮರಾಯರಿದ್ದಾರಲ್ವಾ, ಅವರ ಮನೆದ್ದು ತೋತಾಪುರಿಗೆ ಕಲ್ಲು ಬಿಸಾಕಲು ಹೋದದ್ದು ನಾವು. ಆಗ ಏನಾಯ್ತಂದ್ರೆ, ಮಧುಕರನ ತಮ್ಮ ಇದ್ದಾನಲ್ವಾ, ಶ್ರೀಪತಿ, ಅವನಿಗೆ ಸರೀ ಕಲ್ಲು ಬಿಸಾಕಲಿಕ್ಕೆ ಬರುವುದಿಲ್ಲ. ಅವನು ಕಲ್ಲು ಬಿಸಾಕಿದ್ದು, ನನ್ನ ಕಾಲಿಗೇ ಪೆಟ್ಟು ಬಿತ್ತು. ಇಷ್ಟು ದೊಡ್ಡ ಗಾಯ ಆಗಿ ರಕ್ತ ಬರ್ಲಿಕ್ಕೆ ಶುರುವಾಯ್ತು. ನೋವು ಅಷ್ಟಿರಲಿಲ್ಲ. ಆದರೆ ರಕ್ತ ನೋಡಿದ್ದೇ ಸರಿ, ನಂಗೆ ಗಾಬರಿಯಾಗಿ, ನಾನು ಸೀದಾ ಮನೆಗೆ ಓಡಿಕೊಂಡು ಹೋದೆ. ನನ್ನ ಅಮ್ಮ, 'ಕಣ್ಣು ಮುಚ್ಚು, ಕಣ್ಣು ಮುಚ್ಚು, ರಕ್ತ ನೋಡ್ಬೇಡ' ಅಂತ ಹೇಳಿದ್ರು. ಅವರದಕ್ಕೆ ಅರಶಿನಪುಡಿ ಹಾಕುವಾಗ್ಲೆ ನಂಗೆ ಮೂರ್ಛೆ ತಪ್ಪಿಹೋಯ್ತು. ಮತ್ತೊಂದು ಸರ್ತಿ, ಫುಟ್‌ಬಾಲ್ ಆಡುವಾಗ಼್ೂ ಹಾಗೇ ಆಯ್ತು. ನನ್ನ ಹಿಂದಿಂದ ಯಾರೋ ದೂಡಿದ ಪೆಟ್ಟಿಗೆ ನಾನು ಜಾರಿ ಬಿದ್ದುಬಿಟ್ಟೆ. ಮತ್ತೆ ಹಿಂದೆ ಗಾಯ ಆಗಿತ್ತಲ್ಲಾ, ಅದೇ ಜಾಗದಲ್ಲಿ ಪುನಾ ಗಾಯ. ಆಗ ಕೂಡಾ, ನಾನು ಮನೆಗೆ ಬಂದು ಮೂರ್ಛೆ ಹೋಗಿಬಿಟ್ಟೆ. ಆಗ ನನ್ನ ಅಪ್ಪ ಮನೆಯಲ್ಲಿದ್ದರು. ಅವರಿಗೆ ಸರೀ ಕೋಪ ಬಂತು. ಯಾರು ದೂಡಿದ್ದು ಅಂತ ಕೇಳಿದ್ದಕ್ಕೆ, ನಾನು, ನಾರಾಯಣ ಶೆಟ್ಟರ ಮಗನ ಹೆಸರು ಹೇಳಿದೆ. ಅವನಿಗೆ ಅವರು ಆಗ ಸರೀ ಬೈದುಬಿಟ್ಟರು. ಅವನಿಗೆ ಹಾಗೇ ಆಗ್ಬೇಕು. ಯಾಕೆ ಗೊತ್ತುಂಟಾ? ಅವನು ಗುಟ್ಟಲ್ಲಿ ಬೀಡಿ ಎಳೀತಾನೆ, ಬರೀ ಘಟಿಂಗ ಅವ.

ಅದಕ್ಕೇನೇ ನನಗೆ ಆಶ್ಚರ್ಯ ಆಯ್ತು. ಏನಂದ್ರೆ, ಹಾಗೆ ಹುಡುಗನಿಗೆ ನೋವು ಮಾಡಿ ಯಾಕೆ ಬಲಿ ಕೊಡ್ಬೇಕು ಅಂತ. ಬಲಿ ಕೊಡದಿದ್ರೆ ಏನಾಗ್ತದೆ? ಹಾಗೇ ನಾನು ಮಧುಕರನತ್ರ ಕೇಳಿದೆ. ''ಮತ್ತೆ ಪುನಾ ಸಂಕ ನೀರಿನಲ್ಲಿ

ಹೋಗಿಬಿಡ್ತದೆ'' ಅಂತ ಹೇಳಿದ ಅವ. ಸಂಕ ಕಟ್ಟದೇ ಇದ್ರೆ? ನದಿಯ ಆ ಕಡೆಗಿದ್ದವರು ಆ ಕಡೆಗೆ, ಮತ್ತೆ, ಈ ಕಡೆಗಿದ್ದವರು ಈ ಕಡೆಗೇ ಇರಬೇಕಾಗ್ತದೆ. ಎಲ್ರಿಗೂ ಈಜಲಿಕ್ಕೆ ಬರ್ತದಾ? ಅದು ಆಶ್ಚರ್ಯ ಕಂಡಿತು ನನಗೆ! ಅಂದ್ರೆ, ಆ ಕಡೆಯವರನ್ನು ಈ ಕಡೆಯವರು ನೋಡ್ಲಿಕ್ಕೇ ಇಲ್ಲ, ಮತ್ತೆ ಈಚೆ ಕಡೆಯವರನ್ನು ಆ ಕಡೆಯವರು ಕೂಡಾ ನೋಡ್ಲಿಕ್ಕಿಲ್ಲ. ಹಾಗೇ ಎಷ್ಟು ವರ್ಷ ಹೋದರೂ, ಹಾಗೇ ಇರ್ತದೆ. ಅದು ಆಶ್ಚರ್ಯವಲ್ವಾ? ಈ ಭೂಲೋಕ ಎಲ್ಲಾ ಇರುವತನಕ ಹಾಗೇ ಇರುವುದಂದ್ರೆ? ಅದು ದೊಡ್ಡ ಆಶ್ಚರ್ಯ. ತುಂಬಾ ಕಷ್ಟ ಅಲ್ವಾ ಹಾಗಿದ್ರೆ? ತುಂಬಾ ಕಷ್ಟ ಅಂತ ಕಂಡಿತು ನನಗೆ.

ಮತ್ತೆ ಏನಾಯ್ತು ಗೊತ್ತುಂಟಾ? ನನ್ನ ಅಪ್ಪ ಒಂದು ಸರ್ತಿ ಜೋರು ಮಾಡಿದ್ರು, ನನಗೆ. ಏನಂದ್ರೆ, ಇನ್ನು ಮೇಲೆ, ಸಾಯಂಕಾಲ ಆಗುವುದರೊಳಗೇ ಮನೆಗೆ ಬರಬೇಕೂಂತ ನನಗೆ ಜೋರು ಮಾಡಿದ್ರು. ಅಂದ್ರೆ, ಹೆಚ್ಚು ಹೊತ್ತು ಆಡಬಾರ್ದು ಅಂತ. ಮಧುಕರನ ಅಮ್ಮನೂ ಅವನಿಗೆ ಹೇಳಿದ್ರಂತೆ. ಅವನ ಮನೆಯಲ್ಲಿ ಅವನ ಅಮ್ಮನೇ ಅವನಿಗೆ ಬಯ್ಯುವುದು ಜಾಸ್ತಿ. ಕೆಲವು ಸರ್ತಿ ಪೆಟ್ಟು ಕೂಡಾ ಕೊಡ್ತಾರೆ. ಅವನ ಅಪ್ಪ ಇದ್ದಾರಲ್ವಾ, ಅವರು ತುಂಬಾ ಪಾಪ. ಆದರೆ ನಮ್ಮ ಮನೆಯಲ್ಲಿ ನಮ್ಮ ಅಮ್ಮ ಬಯ್ತಿದ್ದೇ ಇಲ್ಲ. ಅವರಿಗೆ ಕೋಪ ಬಂದಾಗ ಅವರು ಯಾವಾಗಲೂ ಅಳುವುದಂತ ನಾನು ಹೇಳಿದ್ದೇನಾ? ಹೇಳಿದ್ದೇನಲ್ವಾ?

ನಾವೆಲ್ಲಾ, ಆಗ, ಸಾಯಂಕಾಲ ಆದಾಗ ಎಂತ ಮಾಡ್ತಿದ್ದದ್ದು ಗೊತ್ತುಂಟಾ? ಶಾಲೆ ಬಿಟ್ಟ ಮೇಲೆ, ರಾತ್ರೆ ಆಗುವವರೆಗೆ ಮೈದಾನ ಉಂಟಲ್ವಾ, ಅಲ್ಲಿ ಕ್ರಿಕೆಟ್ ಆಡುವುದು. ರಾತ್ರೆ ಆಗುವವರೆಗೆ ಮಾತ್ರ. ಆದರೆ ಕೆಲ ಸರ್ತಿ ರಾತ್ರಿ ಆದರೂ ಗೊತ್ತಾಗ್ತಾ ಇದ್ದಿಲ್ಲ ನಮಗೆ. ಮತ್ತೆ ಬಾಲು ಕಾಣದೇ ಇದ್ರೆ, ರಾತ್ರೆ ಆಯ್ತಾಂತ ಗೊತ್ತಾಗ್ತದೆ. ಕೆಲ ಸರ್ತಿ ಮನೆಗೆ ಹಿಂದೆ ಬರು ವಾಗ ದಾರಿ ಎಲ್ಲುಂಟು ಅಂತಲೇ ಗೊತ್ತಾಗ್ತಾ ಇದ್ದಿಲ್ಲ. ಒಂದು ಸರ್ತಿ ಏನಾಯ್ತು ಗೊತ್ತುಂಟಾ? ಅಬ್ದುಲ್ಲ ಇದ್ದಾನಲ್ವಾ, ಅವನಿಗೆ ಸರಿ ಗೊತ್ತಾಗದೆ, ತೆಂಗಿನ ಸಸಿ ನೆಡಲಿಕ್ಕೆ ಹೊಂಡ ಮಾಡಿದ್ದಾರಲ್ವಾ, ಅದಕ್ಕೆ ಬಿದ್ದುಬಿಟ್ಟ. ಆದರೆ ಗಾಯ ಆಗಲಿಲ್ಲ ಮಾತ್ರ. ಅದರೊಳಗೆ ಸೆಗಣಿ ಇತ್ತಂತ ಕಾಣ್ತದೆ. ಮರುದಿವಸವೂ ಅವನ ಚಡ್ಡಿ ಉಂಟಲ್ವಾ, ಅದಕ್ಕೆ ಸೆಗಣಿ ವಾಸನೆಯೇ ಬರ್ತಿತ್ತು. ನಾನು ಮಾತ್ರ ಹಾಗೆ ಬಿದ್ದದ್ದೇ ಇಲ್ಲ. ಬಿದ್ರೆ ನನ್ನ ಅಪ್ಪ ನನ್ನನ್ನು ಸುಮ್ಮನೆ ಬಿಡುತ್ತಿದ್ದರಾ? ಸರೀ ಕುಂಡೆಗೆ ಕೊಡುವುದಿಲ್ವಾ ಅವರು. ಅಡಿಕೋಲಿಂದಲೇ ಹೊಡಿತಾ ಇದ್ದದ್ದು ಅವರು.

ಅಪ್ಪ ಯಾಕೆ ಹಾಗೆ ಹೇಳಿದ್ದು ಗೊತ್ತುಂಟಾ? ಆ ಉಳ್ಳಾಲ ಸಂಕ ಕಟ್ಟುವವರು ಬಂದು ಹುಡುಗರನ್ನು ಎಳಕೊಂಡು ಹೋಗ್ತಾರಂತ ಸುದ್ದಿಯಾಯ್ತು. ಯಾಕೆ ಗೊತ್ತುಂಟಾ? ಬಲಿ ಕೊಡಲಿಕ್ಕಂತ. ಅದು ಎಲ್ರಿಗೂ ಗೊತ್ತಾಗಿ ಬಿಟ್ಟಿತು. ತೋಕೂರು ಉಂಟಲ್ವಾ, ಅಲ್ಲಿ ಒಬ್ಬ ಹುಡುಗ ಹಾಲು ತಕ್ಕೊಂಡು ಹೋಗ್ತಾ ಇದ್ದನಂತೆ. ಆಗ ಸಂಕ ಕಟ್ಟುವವರು ಬಂದು ಅವನನ್ನು ಎಳಕೊಂಡು ಹೋಗ್ತಿದ್ದರಂತೆ. ಪುಣ್ಯಕ್ಕೆ ಆಗ ಒಬ್ರು ಮಾಸ್ಟ್ರು ಸೈಕಲಲ್ಲಿ ಬರ್ತಿದ್ದರಂತೆ. ಅವ್ರಿಗೆ ಗೊತ್ತಾಗಿಬಿಟ್ಟಿತಂತೆ. ಅವರು ಮತ್ತೆ, ಸಂಕ ಕಟ್ಟುವವರೊಟ್ಟಿಗೆ ಫೈಟ್ ಮಾಡಿ ಹುಡುಗನನ್ನು ಬಿಡಿಸಿದ್ರು. ಅದು ಪೇಪರಲ್ಲಿ ಬಂದಿರಬೇಕೂಂತ ಕಾಣ್ತದೆ. ಅಬ್ದುಲ್ಲ ಹೇಳಿದ್ದು ನಮಗೆ.

ಆಮೇಲೆ ನಾವು, ಸಾಯಂಕಾಲ ಆಗುವುದ ರೊಳಗೇ ಕ್ರಿಕೆಟ್ ನಿಲ್ಲಿಸಿಬಿಡ್ತಿದ್ದೆವು. ಒಂದು ಸಲ ನಾನು ಸೆಂಚುರಿ ಮಾಡುವವನಿದ್ದೆ. ಅರುವತ್ತೇಳು ರನ್ ಆಗಿತ್ತು. ಮಧುಕರ ಆಟ ನಿಲ್ಲಿಸಬೇಕಂತ ಹೇಳಿದ. ತಡ ಆದ್ರೆ ಅವನ ಅಮ್ಮ ಬೆತ್ತ ಹಿಡಿದು ಹೊಡೀತಾರಂತೆ. ಮತ್ತೆ ನಿಲ್ಲಿಸಿಬಿಟ್ಟೆವು. ಸೆಂಚುರಿ ಮಾಡ್ಲಿಕ್ಕಾಗ್ಲೇ ಇಲ್ಲ ನನಗೆ.

ಮತ್ತೆ ಓಡಿಕೊಂಡು, ಓಡಿಕೊಂಡು ಮನೆಗೆ ಬಂದೆ ಹೋಗ್ತಾ ಇದ್ದೆವು. ದಾರಿಯಲ್ಲಿ ಯಾರಾದರೂ ಸಿಕ್ಕಿದ್ರೆ, ಸಂಕ ಕಟ್ಟುವವರು ಬಂದರೂಂತ ಹೆದರಿಕೊಂಡು ಹೋಗ್ತಾ ಇದ್ದದ್ದು ನಾವು.

ಒಂದು ಸರ್ತಿ ಏನಾಯ್ತು ಗೊತ್ತುಂಟಾ? ನಮ್ಮ ಮನೆಯಲ್ಲಿ ಕಡ್ಡಿಪೆಟ್ಟಿಗೆ ಮುಗಿದಿತ್ತು. ಆಟ ಆಡಿ ಬರುವಾಗ, ನಾರಾಯಣ ಶೆಟ್ಟರ ಅಂಗಡಿಗೆ ಹೋಗಿ ಕಡ್ಡಿಪೆಟ್ಟಿಗೆ ತಕ್ಕೊಂಡು ಬಾ ಅಂತ ಹೇಳಿದ್ರು, ಅಮ್ಮ. ಆಟ ಮುಗಿದಾದ ಮೇಲೆ ನಾನು ಅಬ್ದುಲ್ಲನ ಹತ್ರ ಹೇಳಿದೆ, ಅಂಗಡಿಗೆ ಬಾ ಅಂತ. ಅವನು ಬರುವುದಿಲ್ಲ ಅಂತ ಹೇಳಿದ. ಮತ್ತೆಂತ ಮಾಡುವುದು? ನಾನು ಹಾಗಾದ್ರೆ ಓಡಿ ಹೋಗಿ ಕಡ್ಡಿಪೆಟ್ಟಿಗೆ ತರ್ತೇನೆ, ನೀನು ನಿಧಾನಕ್ಕೆ ಹೋಗು ಅಂತ ಹೇಳಿದೆ, ಅಬ್ದುಲ್ಲನಿಗೆ. ಅವನು ಆಯ್ತೂಂತ ಹೇಳಿದ.

ನಾನು ಓಡಿಕೊಂಡು ನಾರಾಯಣಶೆಟ್ರ ಅಂಗಡಿಗೆ ಹೋದೆ. ಒಂದು ಕಡ್ಡಿಪೆಟ್ಟಿಗೆ ಬೇಕು ಅಂತ ಹೇಳಿದೆ. ಮತ್ತೆಂತದು ಬೇಕು, ಅವಲಕ್ಕಿ ಬೇಕಾ ಅಂತ ಕೇಳಿದ ಪೂವಪ್ಪ. ಸಜ್ಜಿಗೆ ಬೇಕಾ ಅಂತ ಕೇಳಿದ. ಬೇಡ ಅಂತ ಹೇಳಿದೆ. ಕಡ್ಡಿಪೆಟ್ಟಿಗೆ ಮಾತ್ರವಾ ಅಂತ ಕೇಳಿದ. ಹೌದು ಅಂತ ಹೇಳಿದೆ. ತೆಗೆದು ಶೆಟ್ಟರ ಮೇಜಿನ ಮೇಲಿಟ್ಟ. ಕತ್ತಲೆ ಆಗ್ತಾ ಉಂಟಂತ ನನಗೆ ಹೆದ್ರಿಕೆ ಆಗ್ತಾ ಇತ್ತು. ಆದರೆ ನಾರಾಯಣ ಶೆಟ್ಟರು, ಪುಸ್ತಕದಲ್ಲಿ ಗುರುತು ಹಾಕಿ, ನನಗೆ ಕಡ್ಡಿ ಪೆಟ್ಟಿಗೆ ಕೊಡುವಾಗ ತಡ ಆಯ್ತು. ಯಾಕೆ ಗೊತ್ತುಂಟಾ? ಚಾ ಕುಡಿದು, ಒಂದು ಬೀಡಿ ಹೊತ್ತಿಸಿದ ಮೇಲೇ ಅವರು ಪುಸ್ತಕದಲ್ಲಿ ಬರೆದದ್ದು.

ಮತ್ತೆ ಓಡಿಕೊಂಡು ಮೈದಾನಕ್ಕೆ ಬರುವಾಗ, ಅಬ್ದುಲ್ಲ, ಎಲ್ರೂ ಹೋಗಾಗಿತ್ತು. ಕತ್ತಲು ಆಗಿತ್ತು. ಹೆದ್ರಿಕೆ ಆಗ್ತಾ ಇತ್ತು ನನಗೆ. ಆದ್ರೆ ಏನು ಮಾಡ್ಲಿಕ್ಕಾಗ್ತದೆ? ತಲೆ ಕೆಳಗೆ ಮಾಡಿಕೊಂಡು, ಒಬ್ಬನೇ ನಡಕೊಂಡು ಮನೆಗೆ ಹೋಗ್ತಾ ಇದ್ದೆ. ಒಂದು ವೇಳೆ ಸಂಕ ಕಟ್ಟುವವರು ಬಂದರೆ ಏನು ಮಾಡುವುದು, ಅಂತ ಯೋಚನೆ ಆಯ್ತು ನನಗೆ.

ಸ್ವಲ್ಪ ದೂರ ನಡೆದ ಮೇಲೆ, ಯಾರೋ ನನ್ನ ಹೆಸರು ಹಿಡಿದು ಕರೆಯುವುದು ಕೇಳಿತು. ಯಾರಪ್ಪಾ ಇದು ಅಂತ ತಲೆಯೆತ್ತಿ ನೋಡಿದೆ. ಕತ್ತಲಲ್ಲಿ ಎಂತದು ಕಾಣ್ತದೆ? ಪುನಾ ಒಮ್ಮೆ ನನ್ನ ಹೆಸರು ಕರೆದ್ರು. ಯಾರಿದು? ಹೆಂಗಸಿದ್ದು ಸ್ವರ. ಆಚೀಚೆ ನೋಡಿದೆ. ನಮ್ಮ ಕುಂದಾಪುರ ಚಿಕ್ಕಮ್ಮ ಇದ್ದಾರಲ್ವಾ, ಅವರ ಹಾಗಿದ್ದೇ ಸ್ವರ.

ಆ ಕಡೆ, ಗೇರುಮರದ ಬುಡದಲ್ಲಿ, ಯಾರೋ ಹೆಂಗಸು ನಿಂತ ಹಾಗೆ ಕಾಣಿಸಿತು. ಅದರೊಟ್ಟಿಗೇ ಒಬ್ಬ ಉದ್ದ ಗಂಡಸು ನಿಂತ ಹಾಗಿತ್ತು. ಯಾರದು? ಆ ಹೆಂಗಸು ಪುನಾ ನನ್ನ ಹೆಸರು ಹಿಡಿದು ಕರೆಯಿತು. ಕುಂದಾಪುರದಿಂದ ನನ್ನ ಚಿಕ್ಕಮ್ಮ ಬಂದಿದ್ದಾರಾ ಅಂತ ಆಶ್ಚರ್ಯ ಆಯ್ತು ನಂಗೆ. ಅಲ್ಲಿಗೆ ಹೋಗಿ ನೋಡ್ತೇನೆ, ಅದು ನನ್ನ ಚಿಕ್ಕಮ್ಮ ಅಲ್ಲ. ಸ್ವರ ಮಾತ್ರ ಅದೇ ತರ. ನೋಡ್ಲಿಕ್ಕೆ ಬೇರೆ. ಒಳ್ಳೆ ಜರಿ ಸೀರೆ ಉಟ್ಟುಕೊಂಡಿದ್ರು. ಶ್ರೀಮಂತರು ಇರಬೇಕಂತ ಅನಿಸಿತು ನನಗೆ. ಮುಖ ಮಾತ್ರ ಅಷ್ಟು ಚಂದ. ಸಣ್ಣ ಮಗುವಿನ ಮುಖವುಂಟಲ್ವಾ ಹಾಗೆ. ಉರುಟುರುಟು, ಕಿವಿಯಲ್ಲಿ ವಜ್ರದ ಬೆಂಡೋಲೆ ತರ ಹೊಳೀತಿತ್ತು. ಯುರೋಪಿಯನ್‌ರ ತರ ಇತ್ತು ಮೈ. ಅಷ್ಟು ಬಿಳಿ. ಯಾರಪ್ಪಾ ಇದು? ಗಂಡಸನ್ನು ನೋಡಿದೆ. ತುಂಬಾ ಉದ್ದ, ನನ್ನ ಶೇಷ ಮಾವನಿಗಿಂತಲೂ ಉದ್ದ. ಸ್ವಲ್ಪ ಕಪ್ಪು. ಆಟದವರ ಹಾಗೆ ತಲೆ ಹಿಂದಕ್ಕೆ ಬಾಚಿಕೊಂಡಿದ್ದ. ಬಿಳಿ ಮುಂಡು ಉಟ್ಟಿದ್ದ.

ಯಾರಿವರು ಅಂತ ಯೋಚನೆ ಮಾಡಿದೆ. ನನ್ನ ಹೆಸರು ಹೇಗೆ ಗೊತ್ತು ಇವರಿಗೆ? ಆ ಹೆಂಗಸು ಕೇಳಿತು, ''ನ್ಯಾವ್ಯಾರು ಅಂತ ಗೊತ್ತಾಗಲಿಲ್ವಾ ನಿಂಗೆ?''

ಇಲ್ಲಾಂತ ಹೇಳಿದೆ ನಾನು.

''ನಾವು ಕೂಡಾ ನಿನ್ನ ಅತ್ತೆ, ಮಾವ ಆಗ್ಬೇಕು'' ಅಂತ ಹೇಳಿತು ಹೆಂಗಸು.

ಹೌದಾ? ನಂಗೆ ಖುಶಿಯಾಯಿತು. ನನ್ನ ಒಬ್ಬರಾದರೂ ಅತ್ತೆ ಮಾವ, ಒಳ್ಳೇ ಶ್ರೀಮಂತರಿದ್ದಾರಲ್ವಾ ಅಂತ ಖುಶಿಯಾಯ್ತು. ಆ ಡಾಕ್ಟರರ ಮಗ ನರಹರಿ ಇದ್ದಾನಲ್ವಾ, ಅವನಿಗೆ ಹೇಳ್ಬೇಕು. ಯಾಕಂದ್ರೆ ಅವನ ಅಪ್ಪನಿಗೆ ಸ್ಕೂಟರ್ ಉಂಟು. ಅವರ ಮನೆ ಎದುರಿಗೆ ಗುಲಾಬಿ ಗಿಡ ನಟ್ಟಿದ್ದಾರೆ. ಮತ್ತೆ ಅವರ ಮನೆಯಲ್ಲಿ ಎರಡೆರಡು ರೇಡಿಯೋ ಉಂಟು. ಅದಕ್ಕೇ, ನನ್ನ ಒಬ್ರು ಅತ್ತೆ ತುಂಬಾ ಶ್ರೀಮಂತರು ಅಂತ ಹೇಳ್ಬೇಕು ಅವನತ್ರ.

''ಕೈಯಲ್ಲಿ ಎಂತದು, ಕಡ್ಡಿಪೆಟ್ಟಿಗೆಯಾ'' ಅಂತ ಕೇಳಿತು, ಹೆಂಗಸು.

ಅರೇ, ನನ್ನ ಚಿಕ್ಕಮ್ಮನ ಸ್ವರದ ಹಾಗೇ ಈ ಅತ್ತೆಯ ಸ್ವರ. ಆದ್ರೆ ಆ ಚಿಕ್ಕಮ್ಮನಿಗೆ ಒಳ್ಳೇ ಸಂಗೀತ ಬರ್ತದೆ. ಮದುವೆ ಸಮಯ, ಹಾಡುವುದೆಲ್ಲಾ ಅವರೇ. ಕೆಲ ಸರ್ತಿ ರೇಡಿಯೋದಲ್ಲಿ ಕೂಡಾ ಹಾಡಿದ್ದಾರಂತೆ. ನಾನು ಕೇಳ್ಲಿಲ್ಲ ಮಾತ್ರ. ಯಾಕಂದ್ರೆ ನಮ್ಮ ಮನೆಯಲ್ಲಿ ರೇಡಿಯೋ ಇರ್ಲಿಲ್ಲ.

ನಾನು ಅತ್ತೆಗೆ ಕೈಯಲ್ಲಿದ್ದ ಕಡ್ಡಿಪೆಟ್ಟಿಗೆ ತೋರಿಸಿದೆ. ಅವರು ಕೇಳಿದ್ರು, ''ನಮ್ಮೊಟ್ಟಿಗೆ ಬರ್ತೀಯಾ?''

ಅವರೊಟ್ಟಿಗೆ ಹೋಗ್ಬೇಕಂತ ಆಶೆಯಾಯ್ತು. ಅವರ ಮನೆಯಲ್ಲೂ ಸ್ಕೂಟರ್ ಉಂಟಾ ಏನೋ. ನಂಗೆ ಸ್ಕೂಟರಲ್ಲಿ ಕೂತ್ಕೊಂಡು ಹೋಗಲಿಕ್ಕೆ ಆಶೆ. ಒಂದು ಸಲ ಕೂಡಾ ನಾನು ಸ್ಕೂಟರಲ್ಲಿ ಕೂತ್ಕೊಂಡಿರಲಿಲ್ಲ. ಆದ್ರೆ ಎಲ್ಲಿಗೆ ಹೋಗುವುದು ಅವರೊಟ್ಟಿಗೆ?

ನಾನು ಕೇಳಿದೆ ಅವರತ್ರ, ಎಲ್ಲಿಗೆ ಹೋಗುವುದಂತ.

''ಬಾ, ಆಮೇಲೆ ಗೊತ್ತಾಗ್ತದೆ ನಿಂಗೆ'' ಅಂತ ಹೇಳಿದ್ರು ಅತ್ತೆ. ಮಾವ ಮಾತ್ರ ಮಾತೇ ಆಡ್ಲಿಲ್ಲ. ಅವರಿಗೆ ಮಾತು ಕಡಿಮೆ ಇರಬೇಕೂಂತ ಎಣಿಸಿಕೊಂಡೆ. ನನ್ನ ಶೇಷ ಮಾವ ಕೂಡಾ ಹಾಗೇ. ಮಾತು ಕಡಿಮೆ ಅವರಿಗೆ. ಆದರೆ



ಅವರು ಯಾವಾಗಲೂ ನಕ್ಕುಕೊಂಡೇ ಇರುವುದು. ಆದರೆ ಈ ಮಾವನನ್ನು ನೋಡಿದ್ರೆ, ನಮ್ಮ ಶಾಲೆಯ ಆಚಾರ್ ಮಾಸ್ತ ಹಾಗೆ ಕಾಣ್ತದೆ. ಆರನೇ ಕ್ಲಾಸಿನ 'ಬಿ' ಸೆಕ್ಷನ್ನಿನ ಮಾಸ್ತ್ರು ಅವರು. ಬಹಳ ಜೋರು ಅವರು. ಆರನೆ ಕ್ಲಾಸಿಗೆ ಹೋದ ಮೇಲೆ ನಾನು, 'ಎ' ಸೆಕ್ಷನ್ನಿಗೇ ಹೋಗುವುದಂತ ಯೋಚನೆ ಮಾಡಿದ್ದೆ. ಆಚಾರ್ ಮಾಸ್ಟ್ರ ಕ್ಲಾಸಿಗೆ ಹೋದ್ರೆ ಪೆಟ್ಟು ತಿಂದುಕೊಂಡೇ ಇರಬೇಕು. ನನ್ನ ಅಣ್ಣನಿಗೆ ಆಚಾರ್ ಮಾಸ್ತರರ ಕ್ಲಾಸು ಸಿಕ್ಕಿದ್ದು. ಆದ್ರೆ ಅವನಿಗೆ ಹೆಚ್ಚು ಪೆಟ್ಟು ಕೊಡಲಿಲ್ಲಂತೆ. ಯಾಕೆಂತ ಗೊತ್ತಿಲ್ಲ.

ಅತ್ತೆಯೊಟ್ಟಿಗೆ ಹೋಗಬೇಕಂತ ಆಶೆಯಾಯ್ತು. ಆದರೆ ಕಡ್ಡಿಪೆಟ್ಟಿಗೆ ಕೈಯಲ್ಲಿತ್ತಲ್ವಾ. ಅಮ್ಮಾ ಬೇಕಂತ ಹೇಳಿದ್ದಾರಲ್ವಾ? ಕಡ್ಡಿ ಇರದೇ

ಇದ್ರೆ, ಅವರು ಅಡಿಗೆ ಮಾಡುವುದು ಹೇಗೆ? ಅಡಿಗೆ ಬೇಗ ಆಗದೇ ಇದ್ರೆ, ಅಪ್ಪನಿಗೆ ಸಿಟ್ಟು ಬರ್ತದಲ್ವಾ? ಏನು ಮಾಡುವುದು? ಮತ್ತೆ ನಾನು ಹೇಳಿದೆ, ''ಇದನ್ನು ಅಮ್ಮನಿಗೆ ಕೊಡ್ಬೇಕಲ್ವಾ''

''ಹಿಂದೆ ಬಂದಮೇಲೆ ಕೊಟ್ಟರಾಯ್ತು'' ಅಂತ ಅತ್ತೆ ಹೇಳಿದ್ರು.

ಆದ್ರೆ ಮನೆಯಲ್ಲಿ ಬೇಗ ಅಡಿಗೆ ಆಗದೇ ಇದ್ರೆ ಅಪ್ಪನಿಗೆ ಸಿಟ್ಟು ಬರ್ತದಲ್ವಾ. ನಾನು ಅತ್ತೆಯತ್ರ ಹಾಗೇ ಹೇಳಿದೆ.

''ಅಡಿಗೆ ತಡ ಆಗುವುದಿಲ್ವ'' ಅಂತ ಹೇಳಿದ್ರು ಅತ್ತೆ. ಹಾಗಾದ್ರೆ ಪರವಾಯಿಲ್ಲ ಅಂತ ಕಂಡಿತು ನನಗೆ.

ಆದ್ರೆ ನಾನು ನನ್ನ ದೋಸ್ತಿಯರಿಗೆ ಯಾರಿಗೂ ಹೇಳಲೇ ಇಲ್ವಲ್ಲಾ! ಮಧುಕರನಿಗೆ ಹೇಳಿಲ್ಲ. ಅಬ್ದುಲ್ಲನಿಗೆ ಹೇಳಿಲ್ಲ. ಯಾರಿಗೂ ಹೇಳಿಲ್ಲ. ನಾನು ಇರದೇ ಇದ್ರೆ ಕ್ರಿಕೆಟ್ ಟೀಮ್‌ಗೆ ಒಂದು ಜನ ಕಮ್ಮಿಯಾಗ್ತದಲ್ವಾ? ಕಮ್ಮಿಯಾದ್ರೆ, ಅಬ್ದುಲ್ಲನ ತಮ್ಮನನ್ನು ಸೇರಿಸಿಕೊಳ್ಳಬೇಕಾಗ್ತದೆ. ಆದರೆ ಅವನಿಗೆ ಬ್ಯಾಟು ಮಾಡ್ಲಿಕ್ಕೆ ಬರುವುದಿಲ್ಲ. ಯಾವಾಗಲೂ ವಿಕೇಟ್‌ಗೇ ಹೊಡಿಯುವುದು ಅವ. ಅವನನ್ನು ಆಡಲಿಕ್ಕೆ ಬಿಟ್ರೆ ನಮ್ಮ ಟೀಮ್ ಸೋತೇ ಹೋಗ್ತದಲ್ವಾ ಅಂತ ಯೋಚನೆಯಾಯ್ತು.

''ಯಾರಿಗೂ ನಾನು ಹೇಳಿಲ್ಲ'' ಅಂತ ಹೇಳಿದೆ.

''ಚಿಂತಿಲ್ಲ. ಅವರಿಗೆಲ್ಲಾ ಮುಂದೆ ಗೊತ್ತಾಗಿಬಿಡ್ತದೆ'' ಅಂತ ಹೇಳಿದರು ಅತ್ತೆ.

ಅದು ಹೌದು ಅಂತ ಕಂಡಿತು ನನಗೆ. ನಾನು ಆಟಕ್ಕೆ ಬಾರದೇ ಇದ್ರೆ, ಅವರಿಗೆ ಗೊತ್ತಾಗಿಯೇ ಬಿಡ್ತದಲ್ವಾ.

ನನ್ನ ಕೈಯಲ್ಲಿ ಕಡ್ಡಿಪೆಟ್ಟಿಗೆ ಇತ್ತಲ್ವಾ, ಅದನ್ನು ಕಿಸೆಯೊಳಗೆ ಹಾಕೂಂತ ಹೇಳಿದರು ಅತ್ತೆ. ನಾನು ಚಡ್ಡಿ ಕಿಸೆಯೊಳಗೆ ಅದನ್ನು ಹಾಕಿದೆ.

''ನಿಂಗೆ ಪೂರಿ ತುಂಬಾ ಇಷ್ಟ ಅಲ್ವಾ'' ಅಂತ ಹೇಳಿದರು ಅತ್ತೆ. ಅವರು ಅಷ್ಟು ಹೇಳಿದ್ದೇ ತಡ, ನಂಗೆ ಹಸಿವಾಗ್ಲಿಕ್ಕೆ ಶುರುವಾಯ್ತು. ಪೂರಿ ಪಲ್ಯ ತಿನ್ನಬೇಕಂತ ತುಂಬಾ ಆಶೆಯಾಯ್ತು.

ಮತ್ತೆ ನಾನು ಅವರಿಬ್ಬರ ಹಿಂದಿಂದ ನಡ ಕೊಂಡು ಹೋದೆ. ಮೈದಾನದಿಂದ ಕೆಳಗಿಳಿದು, ಪಂಜುರ್ಲಿ ದೇವಸ್ಥಾನಕ್ಕೆ ಹೋಗುವ ದಾರಿ ಯಲ್ಲಿ ಒಂದು ಕಾರು ನಿಂತುಕೊಂಡಿತ್ತು. ಸಣ್ಣ ಕಾರು. ಅಂಬಾಸಿಡರ್ ಕಾರಿಗಿಂತ ಸಣ್ಣದು. ಅದು ಮಾವಂದು ಕಾರಂತ ಗೊತ್ತಾಯ್ತು. ಕಾರಿರ ಬೇಕಾದ್ರೆ, ಒಳ್ಳೇ ಹಣ ಇರಬೇಕೂಂತ ಕಂಡಿತು ನನಗೆ.

ಮಾವ ಡ್ರೈವ್ ಮಾಡಿದರು. ನಾನು ಮತ್ತು ಅತ್ತೆ ಹಿಂದಿನ ಸೀಟಲ್ಲಿ ಕೂತೆವು. ಗಾಳಿಗೆ, ಅತ್ತೆದ್ದು ಸೀರೆ ಪರಪರಾಂತ ಹೇಳ್ತಾಯಿತ್ತು. ಅವರದ್ದು ಮೈಯಿಂದ ಸೆಂಟಿನ ಪರಿಮಳ ಬರ್ತಾಯಿತ್ತು. ಅವರ ಕಿವಿದ್ದು ಬೆಂಡೋಲೆ ನೋಡಿದೆ ನಾನು. ಇಷ್ಟು ಹಣ ಇರಬೇಕಾದ್ರೆ, ಅದು ವಜ್ರದ್ದೇ ಇರಬೇಕಂತ ಮಾಡಿದೆ ನಾನು. ಕಲ್ಲಿದ್ದು ಆಗಿರಲಿಕ್ಕಿಲ್ಲ. ನನ್ನ ಅಮ್ಮನ ಕಿವಿಯಲ್ಲಿದ್ದದ್ದು ಕಲ್ಲಿದ್ದು, ಅದು ಇದರ ಹಾಗೆ ಪಳ ಪಳ ಹೊಳಿಯುವುದಿಲ್ಲ. ಇದು ವಜ್ರವೇ ಇರಬೇಕು ಅಂತ ಮಾಡಿದೆ. ಹಾಗೆ ಕೆಂಡದ ಹಾಗೆ ಹೊಳೀಬೇಕಾದ್ರೆ, ಅದು ವಜ್ರವೇ ಆಗಿರಬೇಕು.

ತುಂಬಾ ದೂರ ಬಂದ ಮೇಲೆ ಮಾವ, ಕಾರನ್ನು ಒಂದು ದೊಡ್ಡ ಹೋಟ್ಲಿನೊಳಗೆ ನಿಲ್ಲಿಸಿದ್ರು. ಆ ಹೋಟ್ಲು ಎಷ್ಟು ದೊಡ್ಡದಿತ್ತೆಂದರೆ, ನಂಗೆ ನಂಬಲಿಕ್ಕೇ ಆಗ್ಲಿಲ್ಲ. ಅಷ್ಟು ದೊಡ್ಡದು. ಇದು ಅರಮನೆಯೇ ಇರಬೇಕೂಂತ ನಾನು ಯೋಚನೆ ಮಾಡ್ತಾಯಿದ್ದೆ.

ಆಮೇಲೆ ನಾವು ಮೂರು ಜನ ಆ ಹೋಟ್ಲಿನೊಳಗೆ ಹೋಗಿ, ಒಂದು ದೊಡ್ಡ ಹಾಲ್‌ಗೆ ಹೋದೆವು. ಅಲ್ಲಿ ಎಷ್ಟು ಬೆಳಕಿತ್ತು ಗೊತ್ತುಂಟಾ? ಅಷ್ಟು ಬೇಗ ಬೆಳಗಾಯಿತಾ ಅಂತ ನಂಗೆ ಗಾಬರಿಯಾಯ್ತು. ದೊಡ್ಡ ದೊಡ್ಡ ಕುರ್ಚಿ ಹಾಕಿದ್ರು. ಎಲ್ಲಿ ನೋಡಿದ್ರು ಬಿಳಿ ಬಿಳಿ ಕಾಣ್ತಾಯಿತ್ತು. ಇದು ಎಂತದಪ್ಪಾ ಅಂತ ಸ್ವಲ್ಪ ಹೆದ್ರಿಕೆ ಆಯ್ತು.

ನಂಗೆ ಹೆದ್ರಿಕೆ ಆದದ್ದು, ಆ ಅತ್ತೆಗೆ ಗೊತ್ತಾಗಿರಬೇಕು. ಅದಕ್ಕೆ ಅವರು ನನ್ನ ಕೈ ಹಿಡಕೊಂಡರು. ಅವರ ಕೈಯಲ್ಲಿ ಎಷ್ಟು ಬಳೆಯಿತ್ತು ಗೊತ್ತುಂಟಾ? ಎಲ್ಲಾ ಚಿನ್ನದ್ದು. ಅಷ್ಟು ಹಣ ಉಂಟಲ್ವಾ ಅಂತ ನಂಗೆ ಕಂಡಿತು. ಹೋಟ್ಲು ಕೂಡಾ ಅವರದ್ದೇ ಏನೋ. ಇದು ಎಂತದು ಅತ್ತೆ ಅಂತ ನಾನು ಕೇಳಿದೆ. ಊಟದ ಕೋಣೆಯುಂತ ಹೇಳಿದ್ರು ಅವರು. ಅಷ್ಟು ದೊಡ್ಡ ಊಟದ ಕೋಣೆಯಾ? ಅಬ್ಬಾ ಅಂತ ಕಂಡಿತು ನನಗೆ.

ಅವರು ಹೇಳಿದ ಹಾಗೇ, ಪೂರಿ ಪಲ್ಯದ ಊಟ ತರಿಸಿದ್ರು. ಎಷ್ಟು ರುಚಿಯಾಗಿತ್ತೆಂದ್ರೆ, ಹೇಳುವುದೇ ಬೇಡ. ಮತ್ತೇನು ಗೊತ್ತುಂಟಾ? ಎಲ್ರಿಗೂ ಐಸ್‌ಕ್ರೀಂ ತರಿಸಿದ್ರು. ಐಸ್‌ಕ್ರೀಂ ಹಾಗಿರಬಹುದಂತ ನಂಗೆ ಗೊತ್ತೇ ಇರಲಿಲ್ಲ. ಅದಕ್ಕಿಂತ ಮೊದಲು ನಾನು ಐಸ್‌ಕ್ರೀಂ ತಿಂದರಲ್ವಾ! ನರಹರಿ ಇದ್ದಾನಲ್ವಾ, ಅವ ಒಮ್ಮೆ ಬೊಂಬಾಯಿಗೆ ಹೋಗಿ, ಅಲ್ಲಿ ಐಸ್‌ಕ್ರೀಂ ತಿಂದು ಬಂದಿದ್ದ. ಅದು ನಂಗೆ ಗೊತ್ತಿತ್ತು. ತುಂಬಾ ರುಚಿಯಾಗಿತ್ತಂತ ಹೇಳ್ತಿದ್ದ. ಆದರೆ ನಾನು ತಿಂದ ಐಸ್‌ಕ್ರೀಂನಷ್ಟು ರುಚಿಯಾಗಿರಲಿಕ್ಕಿಲ್ಲ ಅದು. ನಂಗೆ ಗೊತ್ತುಂಟು.

ಊಟ ಆದ್ಮೇಲೆ ನಾವು ಪುನಾ ಕಾರಿಗೆ ಹೋದೆವು. ಇನ್ನೆಲ್ಲಿಗೆ ಅಂತ ನಾನು ಕೇಳಿದೆ, ಅತ್ತೆಯ ಹತ್ರ.

''ಇಲ್ಲೇ, ಹತ್ತಿರದಲ್ಲಿ'' ಅಂತ ಹೇಳಿದ್ರು ಅತ್ತೆ.

ಏನಿದೆ ಅಲ್ಲಿ? ಅವರ ಮನೆಯಾ ಅಂತ ಯೋಚನೆಯಾಯ್ತು.

''ಅಲ್ಲಿ ನಿಮ್ದು ಮನೆಯಾ'' ಅಂತ ಕೇಳಿದೆ.

''ಅಲ್ಲ. ಒಂದು ಹೊಸ ಸಂಕ ಕಟ್ತಾ ಇದ್ದಾರ ಅಲ್ಲಿ'' ಅಂತ ಹೇಳಿದರು ಅತ್ತೆ.

ಆವಾಗ್ಲೇ ನನಗೆ ಉಳ್ಳಾಲ ಸರಕದ ನೆನಪು ಬಂದದ್ದು. ಹಾಗಾದ್ರೆ ಉಳ್ಳಾಲ ಸಂಕ ಕಟ್ಟುವಲ್ಲಿ ನನ್ನನ್ನು ಕರಕೊಂಡು ಹೋಗ್ತಿದ್ದಾರಾ ಅಂತ ಯೋಚನೆ ಮಾಡಿದೆ. ಯಾಕೆ? ಏನುಂಟಲ್ಲಿ? ಮತ್ತೆ ನಾನು ಅತ್ತೆಯ ಹತ್ತಿರ, ಯಾವ ಸಂಕ, ಉಳ್ಳಾಲ ಸಂಕವಾ ಅಂತ ಕೇಳಿದೆ.

ಅತ್ತೆ ತಲೆಯಾಡಿಸಿದ್ದು ನನಗೆ ಕಾರಿನೊಳಗಿದ್ದ ಕತ್ತಲೆಯಲ್ಲೂ ಕಾಣಿಸಿತು. ಆಗ ನನಗೆ ತುಂಬಾ ಹೆದ್ರಿಕೆ ಶುರುವಾಯ್ತು. ಯಾಕೆ ನನ್ನನ್ನು ಉಳ್ಳಾಲ ಸಂಕ ಕಟ್ಟುವಲ್ಲಿ ಕರಕೊಂಡು ಹೋಗ್ತಿದ್ದಾರೆ? ಬಲಿ ಕೊಡಲಿಕ್ಕಾ?

ಅತ್ತೆಯ ಹತ್ತಿರ ನಾನು ಕೇಳಿದೆ, ''ಯಾಕೆ ಅತ್ತೆ? ಯಾಕೆ ಉಳ್ಳಾಲ ಸಂಕಕ್ಕೆ ಹೋಗುವುದು?'' ಅತ್ತೆ ನನ್ನ ಬದಿಗೆ ತಿರುಗಿದರು. ಮಾತಾಡ್ಲಿಕ್ಕೆ ಬಾರದವರ ತರ ನನ್ನ ಮುಖ ನೋಡಿದರು. ಆಗ ಮಾವ ಹೇಳಿದರು, ''ಯಾಕೇಂತ ಗೊತ್ತಾಗ್ತದ ನಿಂಗೆ. ತಡಿ ಸ್ವಲ್ಪ.''

ಅದೊಂದೇ ಸರ್ತಿ ಮಾವ ಮಾತಾಡಿದ್ದು ನನ್ನ ಹತ್ರ. ಅವರಿಗೂ, ನನ್ನ ಅಪ್ಪನ ಹಾಗೆ ಕೋಪ ಬರ್ತದೆ ಅಂತ ನಂಗಾಗ ಗೊತ್ತಾಯ್ತು.

ಮತ್ತೆ ನಾನು, ಮೆಲ್ಲಗೆ ಸ್ವರದಲ್ಲಿ ಅತ್ತೆಯತ್ರ ಕೇಳಿದೆ, ''ನನ್ನನ್ನ ಬಲಿ ಕೊಡ್ತಾರಾ?''

''ಕೆಟ್ಟದ್ದನ್ನ ಯೋಚನೆ ಮಾಡ್ಬೇಡ ನೀನು'' ಅಂತ ಹೇಳಿದ್ರು ಅತ್ತೆ. ನನಗೆ ಸ್ವಲ್ಪ ಸಮಾಧಾನವಾಯ್ತು. ಅತ್ತೆ ಒಳ್ಳೆಯವರೂಂತ ಎಣಿಸಿಕೊಂಡೆ. ಮಾವ ಕೂಡಾ ಒಳ್ಳೆಯವರಿರಬಹುದು. ಆದ್ರೆ ಅವರಿಗೆ ಕೋಪ ಜಾಸ್ತಿ.

ಮತ್ತೆ ಸ್ವಲ್ಪ ಹೊತ್ತಿನ ನಂತರ ಕಾರು ನಿಂತಿತು. ಎಲ್ಲಾ ಕಡೆ ಕತ್ತಲು. ಎಲ್ಲಾ ಕಡ ತೆಂಗಿನ ಮರ ಇದ್ದ ಹಾಗಿತ್ತು. ಗಾಳಿ ಜೋರಾಗಿ ಬೀಸುತ್ತಾ ಇತ್ತು. ಇದೇನು, ಸಮುದ್ರ ಬದಿಯಾ ಅಂತ ನಾನು ಯೋಚನೆ ಮಾಡಿದೆ.

ನನ್ನ ಕೈಹಿಡಿದುಕೊಂಡು ಅತ್ತೆ, ''ಬಾ, ಬಾ'' ಅಂತ ಹೇಳಿದರು. ನಾನು ಅತ್ತೆಯ ಹಿಂದಿಂದ ನಡೀತಾ ಬಂದೆ. ಕಾಲಿನಡಿ, ಗಟ್ಟಿಕಲ್ಲಿನ ನೆಲ ಹೋಗಿ ಹೊಯ್ಗೆ ನೆಲ ಬಂತು. ಆಮೇಲೆ

ಕೆಸರುಮಣ್ಣು, ಆಮೇಲೆ ನೀರು ಹರಿಯುವ ಶಬ್ದ ಕೇಳಿತು. ಆಗ್ಲೆ ನಂಗೆ ಗೊತ್ತಾಗಿ ಹೋಯ್ತು, ನಾನಿಲ್ಲಿಗೆ, ಉಳ್ಳಾಲ ಸಂಕ ಕಟ್ಟುವಲ್ಲಿಗೆ ಬಂದಿದ್ದೇನೆ ಅಂತ.

ಆಗ ಇಲ್ಲಿ, ನೀವೀಗ ನಿಂತ ಜಾಗದಲ್ಲಿ, ಸ್ವಲ್ಪ ಹಿಂದೆ, ಒಂದು ಚಿಕ್ಕ ಮುಳಿ ಹಾಕಿದ್ದ ಮನೆ ಇತ್ತು. ಆದರ ಹೊರಗೆ ಒಂದು ಪೆಟ್ರೋಮ್ಯಾಕ್ಸ್ ಉರೀತಾ ಇತ್ತು. ಮೂರು ಜನ ಪ್ರಾಯದವರು ಅಲ್ಲಿ, ಸುತ್ತ ಕೂತುಕೊಂಡಿದ್ದರು. ನಾವು ಬಂದ ಶಬ್ದ ಕೇಳಿ ಅವರೆಲ್ಲಾ ಎದ್ದು ನಿಂತರು. ಎಲ್ಲರೂ ಹಣೆಯಲ್ಲಿ ಇಷ್ಟು ದಪ್ಪ ನಾಮ ಹಾಕ್ಕೊಂಡಿದ್ರು. ಒಬ್ಬ, ದೀಪ ಎತ್ತಿಹಿಡಿದುಕೊಂಡ. ಮತ್ತೆ ಮುಂದೆ ಹೋದ. ನಾವೆಲ್ಲಾ ಅವನ ಹಿಂದಿಂದ. ಅವ ಇದೇ ಜಾಗಕ್ಕೆ ಬಂದು, ದೀಪ ಕೆಳಗಿಟ್ಟ. ಒಂದು ಕಾಲ್ದೀಪ ಹಚ್ಚಿದ. ಅತ್ತೆ ನನ್ನ ಕೈ ಹಿಡಿದುಕೊಂಡು ಹೇಳಿದ್ರು,

''ನೀನು ಒಳ್ಳೇ ಹುಡುಗ ಅಲ್ವಾ?''

ಮತ್ತೆ? ಒಳ್ಳೇ ಹುಡುಗನೇ ನಾನು! ಎರಡು ಮೂರು ಸರ್ತಿ ಕದ್ದದ್ದು ಹೌದು. ಎರಡು ಮೂರು ಸರ್ತಿ ಸುಳ್ಳು ಹೇಳಿದ್ದೇನೆ, ಅದು



ಹೌದು. ಶೇಷ ಮಾವ ತಂದುಕೊಟ್ಟ ಚಾಕಲೇಟು ಉಂಟಲ್ವಾ, ಅದನ್ನು ಮನೆಯಿಂದ ಕದ್ದುಕೊಂಡು ಹೋದದ್ದು ನಾನೇ. ಆಮೇಲೆ ಎರಡು ಸರ್ತಿ ಮನೆಯಿಂದ ಗೇರುಬೀಜ ಕದ್ದು, ನಾರಾಯಣ ಶೆಟ್ಟರ ಅಂಗಡಿಗೆ ಮಾರಿದ್ದೇನೆ. ಅಷ್ಟೇ. ಅದು ಬಿಟ್ರೆ ನಾನು ಒಳ್ಳೇ ಹುಡುಗನೇ ಅಲ್ವಾ.

ಹೌದು, ನಾನು ಒಳ್ಳೆ ಹುಡುಗನೇ ಅಂತ ಹೇಳಿದೆ ಅತ್ತೆಗೆ.

ಮತ್ತೆ, ನಿಂತುಕೊಂಡವರಲ್ಲಿ ಒಬ್ಬ ನನ್ನ ಹಣೆಗೆ ಗಂಧ ಹಚ್ಚಿದ. ಎರಡೂ ಕೆನ್ನೆಗೆ ಕುಂಕಮ ಹಚ್ಚಿದ. ಒಂದು ಮಲ್ಲಿಗೆ ಮಾಲೆ ತೆಗೆದು ಅತ್ತೆಯ ಕೈಗೆ ಕೊಟ್ಟ. ಅತ್ತೆ ಅದನ್ನು ನನ್ನ ಕುತ್ತಿಗೆಗೆ ಹಾಕಿದ್ರು.

ನೆಲದ ಮೇಲೆ ಕೂತುಕೋ ಅಂತ ಹೇಳಿದ್ರು ಅತ್ತೆ. ನಾನು ಹಾಗೇ ಮಾಡಿದೆ. ಅತ್ತೆ ತುಂಬಾ ಒಳ್ಳೆಯವರಲ್ವಾ, ಅವರು ಹೇಳಿದ್ದು ಮಾಡದೇ ಇದ್ರೆ ತಪ್ಪಾಗುವುದಿಲ್ವಾ? ಅದಕ್ಕೇ ನಾನು ಹಾಗೇ ಮಾಡಿದೆ. ತಲೆ ಕೆಳಗೆ ಹಾಕೂಂತ ಹೇಳಿದರು ಅತ್ತೆ.

ಯಾಕೆ ಅಂತ ಕಂಡಿತು ನನಗೆ. ಯಾಕೆ, ಮಲಗಲಿಕ್ಕಾ? ಆದ್ರೆ, ನಂಗೆ ನಿದ್ದೆ ಬರ್ತಾ ಇಲ್ವಲ್ಲಾ! ನಾನು ಅತ್ತೆಯ ಹತ್ತಿರ ಕೇಳಿದೆ, ಯಾಕೆ ಅತ್ತೆ, ನಂಗೆ ನಿದ್ದೆ ಬರ್ತಾ ಇಲ್ಲ ಅಂತ.

''ನಿದ್ದೆ ಮಾಡ್ಬೇಕಾಗಿಲ್ಲ, ಕಣ್ಣುಮುಚ್ಚಿ ಕೂತುಕೋ ಸಾಕು'' ಅಂತ ಹೇಳಿದರು ಅತ್ತೆ.

ಯಾಕೆ? ಆಗ ನಂಗೆ, ಬಲಿ ಕೊಡುವುದರ ನೆನಪು ಬಂತು. ಹಾಗಾದ್ರೆ ನನ್ನನ್ನು ಬಲಿಕೊಡ್ತಾರಾ? ಕೆಟ್ಟ ಮಾತು ಆಡ್ಬೇಡ ಅಂತ ಹೇಳಿದ್ದಲ್ವಾ ಅತ್ತೆ! ಆದ್ರು, ಹೆದ್ರಿಕೆ ಆಗ್ಲಿಕ್ಕೆ ಶುರುವಾಯ್ತು. ನಾನು ಕೇಳಿದೆ, ''ನಂಗೆ ನೋವಾಗ್ತದಾ ಅತ್ತೆ?''

''ನಿನ್ನಷ್ಟು ಒಳ್ಳೇ ಹುಡುಗನಿಗೆ ನಾನು ನೋವು ಮಾಡ್ತೇನಾ'' ಅಂತ ಅತ್ತೆ ಹೇಳಿದರು.

''ಮತ್ತೆ, ಯಾಕೆ ಕೂತುಕೊಂಡು ಕಣ್ಣು ಮುಚ್ಚಬೇಕು ನಾನು'' ಅಂತ ಕೇಳಿದೆ.

''ಬಾಲೂ, ನೀನೇನೂ ಯೋಚನೆ ಮಾಡ್ಬೇಡ. ಅಜರಾಮರ ಆಗ್ತಿ ನೀನು'' ಅಂತ ಹೇಳಿದರು ಅತ್ತೆ.

ಹಾಗಂದ್ರೇನು? ನನಗೆ ಗೊತ್ತಿರಲಿಲ್ಲ. ಏನು ಹಾಗಂದ್ರೆ, ಅಂತ ಕೇಳಿದೆ.

"ಅಂದ್ರೆ, ಈ ಭೂಮಿ, ಆಕಾಶ, ಸೂರ್ಯ ಚಂದ್ರ, ನಕ್ಷತ್ರ ಅವೆಲ್ಲಾ ಇರುವ ತನಕವೂ ನೀನು ಇರ್ತೀ. ಶಾಶ್ವತ ಇರ್ತೀ" ಅಂತ ಹೇಳಿದ್ರು ಅತ್ತೆ.

ಅಂದ್ರೆ, ಹೀಗೇ ಇರ್ತೀನಾ? ಹುಡುಗನಾಗಿಯೇ? ಹಾಗೇ ಕೇಳಿದೆ, ಅತ್ತೆಯ ಹತ್ರ.

"ಹೌದು, ಹೀಗೇ ಇರ್ತೀ ಬಾಲೂ" ಅಂತ ಹೇಳಿದರು.

ಅಂದ್ರೆ, ನಾನು ಬೆಳೆಯುವುದೇ ಇಲ್ವಾ? ಅಂದ್ರೆ, ನಂಗೆ ಇಂಜನಿಯರ್ ಆಗ್ಲಿಕ್ಕೆ ಆಗುವುದಿಲ್ಲ. ಜೀಪ್ ಬಿಡಲಿಕ್ಕೆ ಆಗುವುದಿಲ್ಲ. ವಿಮಾನದಲ್ಲಿ ಕೂತುಕೊಂಡು ಹೋಗ್ಲಿಕ್ಕಿಲ್ಲ. ಅದಕ್ಕೆ ಕೇಳಿದೆ ಅತ್ತೆಯ ಹತ್ರ,", ದೊಡ್ಡವನಾದ ಮೇಲೆ ಇಂಜನಿಯರ್ ಆಗ್ಬೇಕಂತ ಮಾಡಿದ್ದೆ."

"ನೋಡು ಬಾಲೂ, ಈ ಭೂಲೋಕದಲ್ಲಿ ಯಾವುದೂ ಶಾಶ್ವತ ಆಗಿ ಉಳಿಯುವುದಿಲ್ಲ. ಆದರೆ ನೀನು ಮಾತ್ರ ಶಾಶ್ವತ ಇರ್ತೀ. ಅದಕ್ಕಿಂತ ಗೌರವವು ಬೇರೇನುಂಟು?"

ನಂಗೆ ಯೋಚನೆಯಾಯ್ತು. ನಾನು ಯೋಚನೆ ಮಾಡುವುದು ಅತ್ತೆಗೆ ಗೊತ್ತಾಯ್ತು. ಅವರು ಹೇಳಿದ್ರು, "ನಿನ್ನಿಂದಾಗಿಯೇ ಇಲ್ಲೊಂದು ಸಂಕ ಬರ್ತ್ತದೆ. ಈಚೆನವರು ಆಚೆ ಹೋಗ್ತಾರೆ. ಆಚೆಕಡೆಯವರು ಈಚೆ ಬರ್ತಾರೆ. ನೀನಿದ್ರೆ ಸಂಕ. ನೀನಿರದೇ ಇದ್ರೆ ಸಂಕವೂ ಇಲ್ಲ, ಭೂಲೋಕವೂ ಇಲ್ಲ... ಏನು ಹೇಳ್ತಿ."

ಹಾಗಾದ್ರೆ ಚಿಂತಿಲ್ಲ ಅಂತ ಕಂಡಿತು ನನಗೆ. ಒಂದು ಸಂಕ ಬಂದ್ರೆ ಕಾರು, ಬಸ್ಸು, ಲಾರಿ ಎಲ್ಲಾ ಹೋಗ್ಲಿಕ್ಕಾಗ್ತದೆ. ಅದು ಎಲ್ರಿಗೂ ಒಳ್ಳೇದಲ್ವಾ ಅಂತ ಕಂಡಿತು.

ಮತ್ತೆ ನಾನು ಅವರು ಹೇಳಿದ ಹಾಗೆ ತಲೆ ಕೆಳಗೆ ಹಾಕಿ ಕೂತ್ಕೊಂಡೆ. ನೋವು ಮಾಡ್ಬೇಡಿ ನಂಗೆ ಅಂತ ಹೇಳಿದೆ. ಇಲ್ಲ, ಮಾಡೋದಿಲ್ಲಾಂತ ಹೇಳಿದ್ರು. ರಕ್ತ ನೋಡಿದ್ರೆ ಸಾಕು, ನಂಗೆ ಮೂರ್ಛೆ ತಪ್ಪುದ ಅಂತ ಹೇಳಿದೆ. ಇಲ್ಲ ನೀನು ರಕ್ತ ನೋಡುವುದಿಲ್ಲಾಂತ ಹೇಳಿದ್ರು ಅತ್ತೆ. ಅವರು ಅಷ್ಟೆಲ್ಲಾ ಹೇಳಿದ ಮೇಲೆ ನನಗೆ ಸಮಾಧಾನವಾಯ್ತು. ಅತ್ತೆ ಒಳ್ಳೆಯವರು ಅಂತ ಎಣಿಸಿಕೊಂಡೆ. ಕಣ್ಣುಮುಚ್ಚಿದಿಯಾ ಅಂತ ಅವರು ಕೇಳಿದ್ರು. ನಾನು ಆ ಕೂಡಲೇ ಕಣ್ಣು ಮುಚ್ಚಿದೆ.



[illegible]






# ಕಣ್ಣಾಮುಚ್ಚಾಲೆ

ಅಂದು, ನಾನು ಮತ್ತು ನನ್ನ ಗೆಳತಿ ಕುಂದಾಪುರದಿಂದ ಹಾನ್‌ಗಲ್‌ಗೆ ತೆರಳಬೇಕಿತ್ತು. ಆಕೆ, ಮೊದಲ ಬಸ್‌ಗೇ ಹೋಗಲಿಕ್ಕಾಗಿ, ನನ್ನನ್ನು ಬಸ್‌ಸ್ಟ್ಯಾಂಡ್‌ಗೆ ಬರಹೇಳಿದ್ದಳು. ಬೆಳಗಿನ 10-30ರ ಬಸ್ ಬಿಟ್ಟರೆ ಮತ್ತೆ 12ರ ತನಕ, ಕುಂದಾಪುರದಿಂದ ಹಾನ್‌ಗಲ್‌ಗೆ ಬಸ್ಸಿಲ್ಲ.

ಸರಿ, ಹತ್ತರ ಸುಮಾರಿಗೆ ಬಸ್‌ಸ್ಟಾಂಡ್‌ಗೆ ಬಂದೆ. ಜಾನಕಿಯನ್ನು ಹುಡುಕಲು ನನ್ನ ಕಣ್ಣುಗಳು ಅಲೆದಾಡಿದವು. 'ಅಗೋ, ಅಲ್ಲೆ ಕೂತಿದ್ದಾಳೆ, ಎತ್ತಲೋ ನೋಡುತ್ತಾ, ಬಸ್‌ಸ್ಟಾಂಡ್‌ನ ಮೂಲೆಯಲ್ಲಿ'. ಆಕೆಯನ್ನು 'ಕಂಡುಹಿಡಿದ' ಹುರುಪಿನಲ್ಲಿ, ಅವಳಿಗೊಂದು ಚಮಕ್ ನೀಡಬೇಕೆಂದು, ಮೆತ್ತಗೆ ನಡೆದು, ಹಿಂದಿನಿಂದ ಕಣ್ಣುಮುಚ್ಚಿದೆ. ಅಷ್ಟೆ. ಕೆನ್ನೆ, ಬೆನ್ನು, ತೋಳು ಹೀಗೆ ಎಲ್ಲೆಂದರಲ್ಲಿ ಪೆಟ್ಟುಬಿತ್ತು. 'ಯಾಕೆ ಹೊಡೀತಿದ್ದೀರಾ' ಎಂದು ನಾನು ವರಲುತ್ತಿದ್ದರೂ, ಮುತ್ತಿಕೊಂಡ ದಾಂಡಿಗರು, 'ಈ ಬೋಳೀಮಗ ಇದ್ದೂರ ಹುಡ್ಗೀರ್ಗೆ ಕಣ್‌ಹಾಕ್ತಾನೆ, ತಟ್ರೋ' ಎಂಬರ್ಥದ ಮಾತುಗಳನ್ನು ಪರಸ್ಪರರಿಗೆ ಹೇಳಿಕೊಂಡು, ಬಿಡುವಿಲ್ಲದೆ ಥಳಿಸಿದರು; ಅಲ್ಲೆಲ್ಲೋ ಇದ್ದ ಜಾನಕಿ ಓಡಿಬಂದು, ಎಲ್ಲರ ಕ್ಷಮೆ ಕೇಳಿ ಬಿಡಿಸುವತನಕ.

ಆಗಿದ್ದ ಅಚಾತುರ್ಯ ಇದು: ಜಾನಕಿಯ ಹಾಗೇ ಕಾಣುತ್ತಿದ್ದ ಬೇರೆ ಯಾರೋ ಹುಡುಗಿಯ ಕಣ್ಣು ಮುಚ್ಚಲು ಹೋಗಿ ಪೆಟ್ಟು ತಿಂದಿದ್ದೆ. ಆಕೆಯ ಹತ್ತಿರ ಹೋಗಿ 'ಸಾರಿ' ಹೇಳಿದೆ. ಈ ಗಲಾಟೆಯಲ್ಲಿ ನಾನು, ಜಾನಕಿ, ನಾನು ಜಾನಕಿ ಎಂದು ಭಾವಿಸಿದ 'ಆಕೆ', ನನ್ನನ್ನು ಥಳಿಸಿದವರು, ಎಲ್ಲಾ ಮೊದಲ ಬಸ್ ತಪ್ಪಿಸಿಕೊಂಡಿದ್ದೆವು. ಹನ್ನೆರಡಕ್ಕೆ ಸರಿಯಾಗಿ ಎರಡನೇ ಬಸ್ ಬಂತು. ಹೊನ್ನಾವರ, ಕುಮಟಾದ ಮಧ್ಯೆ ನಮ್ಮ ಬಸ್ ಹೋಗುತ್ತಿರುವಾಗ, ಅಲ್ಲೊಂದು ಆ್ಯಕ್ಸಿಡೆಂಟ್ ಸಂಭವಿಸಿದ್ದು ಕಾಣಿಸಿತು. ಬಸ್ಸೊಂದು ಮೆಟಡಾರ್‌ಗೆ ಢಿಕ್ಕಿ ಹೊಡೆದ ಪರಿಣಾಮವಾಗಿ, ಏಳು ಜನರು ಸ್ಥಳದಲ್ಲೇ ಸತ್ತಿದ್ದರೆ, ಹಲವರಿಗೆ ತೀವ್ರ ಗಾಯಗಳಾಗಿದ್ದವು. ಮನ ಕಲಕುವ ದೃಶ್ಯ. ರಕ್ತದ ಮಡುವಿನಲ್ಲಿ ಬಿದ್ದಿದ್ದ ಜನರು.

ಜನರ ಗುಸುಗುಸುವಿನಿಂದ ತಿಳಿದು ಬಂದದ್ದಿಷ್ಟು; ಆ್ಯಕ್ಸಿಡೆಂಟ್‌ಗೆ ತುತ್ತಾಗಿದ್ದು ಕುಂದಾಪುರದಿಂದ ನಾವು ಹೊರಡಬೇಕಿದ್ದ ಮೊದಲ ಬಸ್! ನನಗೆ 'ಶಾಕ್' ಆಯಿತು. ನನ್ನನ್ನು ಹೊಡೆದಿದ್ದ ಮಂದಿ ಮತ್ತು 'ಆಕೆ' ಬಂದು, ''ನಮ್ಮನ್ನು ಕ್ಷಮಿಸಿ, ನೀವು ಮಾಡಿದ್ದು ಕೆಟ್ಟದ್ದೋ, ಅಲ್ಲ ಒಳ್ಳೆದೋ, ಸರಿನೋ ಇಲ್ಲ ತಪ್ಪೋ ಗೊತ್ತಿಲ್ಲ; ಆದರೆ ನೀವು ಮಾಡಿದ ಪ್ರಮಾದದಿಂದ ನಿಮ್ಮೊಂದಿಗೆ ನಮ್ಮ ಪ್ರಾಣವೂ ಉಳಿಯಿತು'' ಎಂದರು!



ನಾನಂದು ಮಾಡಿದ 'ಮುದ್ದುತಪ್ಪು' ಹಲವರನ್ನು ಕಾಪಾಡಿತು. ಊರಿಗೆ ತಲುಪಿದ ಮೇಲೆ ನನಗೆ 'ಪೂಜೆ ಮಾಡಿಸಬೇಕೆಂದಿದ್ದ' ಜಾನಕಿ ಹಗುರಾದಳು. □

ಸಿ. ರಾಮಕೃಷ್ಣ ಹಬ್ಬಾರ್
ಬೆಂಗಳೂರು



# ಎಚ್. ಎಸ್. ಮೋಹನ್

# ಚ್ಯುತ

ಗೂಡು ಸೇರಿಕೊಳ್ಳುವಾಗಿನ ಹಕ್ಕಿಗಳ ಚಿಲಿಪಿಲಿ ಶಬ್ದ, ನಿಧಾನವಾಗಿ ಕಡಿಮೆಯಾಗುತ್ತಾ ಹೋಗಿ ಕೊನೆಗೆ ಇಲ್ಲವಾಯಿತು. ಕಣ್ತೆರೆದೆ, ರೂಮಿನ ತುಂಬಾ ಕತ್ತಲು. ಆ ಕತ್ತಲೆ ನನಗೆ ತುಂಬಾ ಪ್ರಿಯವಾದದ್ದೆನಿಸಿತು. ಚಿಕ್ಕಂದಿನಲ್ಲಿ ನಾನು ಕತ್ತಲೆಯನ್ನು ಕಂಡರೆ ಬಹಳ ಭಯಪಡುತ್ತಿದ್ದುದು ನೆನಪಾಯಿತು.

ಚಿಕ್ಕಂದಿನಲ್ಲಿ ಮನುಷ್ಯನಿಗೆ ತಿಳಿವಳಿಕೆ ಬಹಳ ಕಡಿಮೆ, ಹಾಗೆಂದೇ ಅವನು ಕತ್ತಲಿಗೆ ಆಗ ಹೆದರುತ್ತಾನೆನಿಸಿತು. ಈಗ, ಕತ್ತಲು ನನಗೆ ಕೊಡುವಷ್ಟು ಖುಷಿ, ಸಾಂತ್ವನ, ಬೆಳಕು ಕೊಡುವುದಿಲ್ಲವೆನಿಸಿತು. ಬೆಳಕು ಕಂಡರೆ ಮನದ ಮೂಲೆಯಲ್ಲಿ ಹೆದರಿಕೆ ಹುಟ್ಟುತ್ತದೆ, ಅದು ನನ್ನ ಕಣ್ಣನ್ನು ಚುಚ್ಚುತ್ತದೆ.

· ಚಂದ್ರಕಾಂತ ಕುಸನೂರ್

ರೂಮಿನ ಬಾಗಿಲು ತೆರೆದುಕೊಂಡಿತು. ಬಾಗಿಲು ದೂಡಿದ ಗುಲಾಬಿ, ಕತ್ತಲನ್ನು ಕಂಡವಳು, ಗೊಣಗುತ್ತಲೇ ದೀಪ ಹಾಕಿದಳು. 'ಯಾಕ್ರೀ ಕತ್ತಲ್ಲಿ ಕುಳ್ತಿದೀರಿ' ಎಂದವಳು, ನನ್ನ ಉತ್ತರಕ್ಕೆ ಕಾಯದೆ, ಬೂದಿ ತುಂಬಿದ ಆ್ಯಷ್ ಟ್ರೇಯನ್ನು ತೆಗೆದು, ಅದರ ಜಾಗದಲ್ಲಿ ಖಾಲಿ ಆ್ಯಷ್ ಟ್ರೇ ಇರಿಸಿ, ಅದರ ಮೇಲೆ ಕೈ ಸಂಜ್ಞೆಯಿಂದ 'x' ಗುರುತು ಮಾಡಿ, ನನ್ನ ಮುಖದ ಬಳಿ ತನ್ನ ಮುಖ ತಂದು, ಕಣ್ಣಲ್ಲಿ ಕಣ್ಣಿಟ್ಟು ನೋಡಿದಳು. ಅವಳ ಕಣ್ಣುಗಳಲ್ಲಿನ ನಿರಾಶೆ ನನ್ನೊಳಗೆ ತೂರಲೆತ್ನಿಸಿತು. 'ಕಾಫಿ ಬೇಕಾದ್ರೆ ಕುಡೀರಿ' ಎಂಬಂತೆ, ಫ್ಲಾಸ್ಕನ್ನು ನನ್ನ ಮುಂದಿರಿಸಿ, ರೂಮಿನ ಬಾಗಿಲನ್ನು ಮುಂದಕ್ಕೆ ಎಳೆದುಕೊಂಡುಹೋದಳು.

ಬೆಳಕನ್ನು ದೂರಮಾಡುವವನಂತೆ ನಾನು ಕಣ್ಮುಚ್ಚಿಕೊಂಡೆ. ಗುಲಾಬಿಯ ರೂಪ ಕಣ್ಣನ್ನು ತೂರಿಕೊಂಡು ಒಳಗೆ ಬಂದಿತು. ಹಾಂ, ಗುಲಾಬಿ, ನಾನೇ ಇಟ್ಟ ಹೆಸರು, 'ಮಿಸ್ ಇಂಡಿಯಾ' ಆಗಿ ಆಯ್ಕೆಯಾದ ಸುಮತಿಗೆ ನಾನಿಟ್ಟ ಹೆಸರು.

ಅವಳನ್ನು ನಾನು ಮದುವೆಯಾದಾಗ, ನನ್ನ ಯಜಮಾನಿಕೆಯ ಕುರುಹಾಗಿ, ಅವಳ ಹೆಸರನ್ನು ಬದಲಾಯಿಸಿದ್ದೆ. ನನ್ನ ಮಗ ಅಂಶುಮಂತನಿಗಿಂತ ಕೇವಲ ಮೂರು ವರ್ಷ ದೊಡ್ಡವಳಾದ ಗುಲಾಬಿಯನ್ನು ಮದುವೆಯಾದಾಗ, ಮುದುಕರು ಹುಬ್ಬೇರಿಸಿದರೆ, ಯುವಕರು ಹೊಟ್ಟೆಯುರಿಯಿಂದ ಬೆಂದುಹೋಗಿದ್ದರು. ಮಾಲತಿ ಅಳಲೆತ್ನಿಸಿದಾಗ, 'ಸವತಿ ಬಂದ್ಲೂಂತ ಅಳೊ ಆರ್ಡಿನರಿ ಹೆಂಗಸಾಗ್ಬೇಡ ನೀನು' ಎಂದು ಹೇಳಿ ನಕ್ಕಿದ್ದೆ. ಗುಲಾಬಿಯನ್ನು ಮದುವೆಯಾದ ನಂತರವಾದರೂ, ಬೇರೆ ಹುಡುಗಿಯರ ಜೊತೆಗಿನ ನನ್ನ ಫ್ಲರ್ಟೇಶನ್ ಕಡಿಮೆಯಾಗಬಹುದೆಂಬ ಆಸೆಯಿಂದ ಅವಳು ಅಳು ತಡೆದುಕೊಂಡಳು. ಆದರೆ ಆದದ್ದಾದರೂ ಏನು!

ನನ್ನ ಪ್ರಣಯ ಲೀಲೆಗಳು ಕಡಿಮೆಯಾಗಲೇ ಇಲ್ಲ; ನನ್ನನ್ನು, ಮದುವೆಯಾದವರು, ಮದುವೆಯಾಗದವರು, ಹುಡುಗಿಯರು, ಹೆಂಗಸರು ಎಂಬ ಬೇಧವಿಲ್ಲದೆ ಒಲಿದು ಬರುವವರ ಸಂಖ್ಯೆ ಹೆಚ್ಚಾಗತೊಡಗಿದಂತೆ, ಅವೂ ಹೆಚ್ಚಾಗತೊಡಗಿದವು. ನನ್ನ ಪ್ರಣಯ ಲೀಲೆಗಳ ಬಗ್ಗೆ ಹೊಟ್ಟೆಕಿಚ್ಚಿದ್ದ ನನ್ನ ಸ್ನೇಹಿತರನೇಕರು, ನನ್ನ ಹಿಂದೆ, 'ಅವನದು ಬರೀ ಬಡಾಯಿ ಕಣ್ರೋ' ಎಂದು ಆಡಿಕೊಳ್ಳುತ್ತಿದ್ದದ್ದು ನನ್ನ ಕಿವಿಯನ್ನು ತಲುಪುತ್ತಿತ್ತು. ನನ್ನೆದುರಿಗೆ ಅದನ್ನು ಹೇಳಲು ಅವರಿಗೆ ಭಯ, ಎಲ್ಲಿ ನನ್ನ 'ಪಾಪಕೃತ್ಯ'ಗಳಿಗೆ ಅವರನ್ನು ನಾನು ಸಾಕ್ಷಿಯಾಗಿಸಿಬಿಡುತ್ತೇನೊ ಎಂದು.

ನನ್ನಲ್ಲಿ, ಹೆಂಗಸರು ಇಷ್ಟಪಡುವ ಎಲ್ಲ ಗುಣಗಳೂ ಇದ್ದವು. ಐಶ್ವರ್ಯ, ರೂಪ, ಅಂಗಸೌಷ್ಠವ, ಸೋಷಿಯಲ್ ಸ್ಟೇಟಸ್, ಸೆನ್ಸ್ ಆಫ್ ಹ್ಯೂಮರ್, ಹೆಂಡತಿಯ ಬಗ್ಗೆ ಉಡಾಫೆ ಅಥವಾ ಇಂಡಿಫರೆನ್ಸ್, ಡಿಗ್ರಿಗಳು, ವಿದೇಶಕ್ಕೆ ಹೋಗಿ ಬಂದ ಅನುಭವ, ಸಿಗರೇಟ್ ಸೇದುವುದು, ಮಿತವಾಗಿ ಡ್ರಿಂಕ್ಸ್ ತೆಗೆದುಕೊಳ್ಳುವುದು, ರಸಿಕತೆ ಇತ್ಯಾದಿ. ಇವುಗಳ ಮಧ್ಯೆ, ಕಳೆದುಹೋಗಿದ್ದ ಮಾನವೀಯತೆ ಅವರ ಗಮನಕ್ಕೆ ಬರುತ್ತಲೇ ಇರಲಿಲ್ಲ. ನನ್ನ ಅವರ ಸ್ನೇಹ ಮುರಿದುಬೀಳುವವರೆಗೆ, ಇಲ್ಲ ಹಳಸಿಕೊಳ್ಳುವವರೆಗೆ.

ವರ್ತಮಾನಕ್ಕೆ ಬಂದು, ನನ್ನ ದೇಹವನ್ನು ನೋಡಿಕೊಳ್ಳಲೆಂದು ಕಣ್ತೆರೆದೆ. ಈಗಲೂ, ಯಾರಾದರೂ ಮೆಚ್ಚಿಕೊಳ್ಳಬಹುದಾದಂತಹ ದೃಢ ಶರೀರ ನನ್ನದು. ಹುಡುಕಿದರೂ ಒಂದು ಬಿಳಿ ಕೂದಲು ಸಿಗದು. ಕಣ್ಣಿನ ಕೆಳಗೆ ಈಗಷ್ಟೇ ಕಪ್ಪು ಮೂಡತೊಡಗಿದೆ. ನನಗೆ

ಮೂವತ್ತೈದು ವರ್ಷದ ಮಗನಿದ್ದಾನೆಂದರೆ ಯಾರೂ ನಂಬಲಾರರು. ನನಗೆ ತಿಳಿವಳಿಕೆ ಬಂದಂದಿನಿಂದ ಮೊನ್ನೆಯವರೆಗೆ, ಡಾಕ್ಟರ್ ಬಳಿ ನಾನು ಚಿಕಿತ್ಸೆ ಪಡೆದದ್ದಾಗಲೀ, ಯಾವುದೇ ಔಷಧಿ ಸೇವಿಸಿದ್ದಾಗಲೀ, ಇಲ್ಲವೇ ಇಲ್ಲ. ನಿನ್ನೆ ಬೆಳಗಿನಿಂದ, ಮೌನವಾಗಿ ಸಿಗರೇಟ್ ಸೇದುತ್ತಾ, ವಿಸ್ಕಿ ಗುಟುಕರಿಸುತ್ತಾ, ಕುಳಿತ ನನ್ನನ್ನು ಕಂಡು ಗಾಬರಿಯಾಗಿ ಗುಲಾಬಿ, ಡಾಕ್ಟರ್ ಸುಧೀಂದ್ರರವರನ್ನು ಕರೆಸಿದ್ದಳು. ಡಾಕ್ಟರ್ ಬಂದಾಗಲೂ ನಾನು ಮಾತನಾಡದೆ ಮೌನವಾಗಿದ್ದಾಗ, 'ಏನೊ ಷಾಕ್ ಆಗಿರ್ಬೇಕು. ಒಂದೆರ್ಡು ದಿನ ನೋಡಿ, ಇಂಪ್ರೂವ್‌ಮೆಂಟ್ ಇಲ್ವೇ ಇದ್ರೆ, ಯಾರಾದ್ರೂ ಸೈಕಿಯಾಟ್ರಿಸ್ಟ್‌ಗೆ ತೋರಿಸಿ' ಎಂದರವರು ಗುಲಾಬಿಯೊಡನೆ.

ನನ್ನ ಮನಸ್ಸು, ಗುಲಾಬಿಯನ್ನು ನಾನು ಇಷ್ಟಪಡತೊಡಗಿದ ದಿನಗಳ ಬಗ್ಗೆ ಯೋಚಿಸತೊಡಗುತ್ತದೆ...

ಗುಲಾಬಿಯೊಡನೆ ಓಡಾಡಲು ಪ್ರಾರಂಭಿಸಿದ ದಿನಗಳಲ್ಲಿ ನನಗೆ, ಅವಳನ್ನು ಮದುವೆಯಾಗಬೇಕೆಂಬ ಹಂಬಲವಿರಲಿಲ್ಲ, ಹಂಬಲವಿರಲಿ, ಆ ಯೋಚನೆಯೂ ಮನದಲ್ಲಿ ಸುಳಿದಿರಲಿಲ್ಲ. ಕ್ರಮೇಣ ಅವಳ ದೇಹದ ಬಗ್ಗೆ, ಅವಳ ಬಗ್ಗೆ, ನನ್ನಲ್ಲಿ ಪೊಸೆಸಿವ್‌ನೆಸ್ ಡೆವಲಪ್ ಆಯಿತೆನಿಸುತ್ತದೆ. ಇಲ್ಲದಿದ್ದಲ್ಲಿ, ನನ್ನನ್ನು ಮದುವೆಯಾಗುವ ಬಯಕೆ ಹೊಂದಿದ್ದ ಹಲವಾರು ಹುಡುಗಿಯರ ಕೋರಿಕೆಯನ್ನು ತಿರಸ್ಕರಿಸಿದ್ದ ನಾನು, ಗುಲಾಬಿಯ ಆಸೆಗೆ, ಒತ್ತಡಕ್ಕೆ ಯೀಲ್ಡ್ ಆಗುತ್ತಿರಲಿಲ್ಲ. 'ನಿಮ್ಮ ಮಗು ನನ್ನ ಹೊಟ್ಟೆಯಲ್ಲಿದೆ, ನನಗೇನೂ ಬೇಡ, ನನ್ನನ್ನು ಮದುವೆಯಾಗಿ, ಆಮೇಲೆ ನಾನೂ, ನನ್ನ ಮಗು ದೂರ ಹೋಗ್ತೀವಿ' ಎಂದು ಎಲಿಜಾ ಗೋಗರೆದಾಗ, 'ನನ್ನ ಹೃದಯದಲ್ಲಿ ಸೆಂಟಿಮೆಂಟ್ಸ್‌ಗೆ ಜಾಗವಿಲ್ಲ' ಎಂದು ಅವಳನ್ನು ದೂರ ತಳ್ಳಿದ ನಾನು, ಗುಲಾಬಿಯ ಗಂಡನಾದದ್ದಾದರೂ ಹೇಗೆ!? ಗುಲಾಬಿ ಚಿಕ್ಕ ವಯಸ್ಸಿನ ಹುಡುಗಿಯಂದೆ? ನಾನು ಗುಲಾಬಿಯನ್ನು ಮದುವೆಯಾದಾಗ ಯಾರೊ, 'ಇಟ್ ಈಸ್ ದ ಪೀಕ್ ಆಫ್ ಅಚೀವ್‌ಮೆಂಟ್ಸ್' ಎಂದು ಮೆಚ್ಚುಗೆಯಿಂದ ಉದ್ಗರಿಸಿದರಂತೆ. ನಾನಾಗ ಆ ಮಾತು ಕೇಳಿ, ಸಂತೋಷದಿಂದ ಉಬ್ಬಿಹೋಗಿ, ಗುಲಾಬಿಗೆ ಆ ವಿಷಯ ಹೇಳಿ, ಅವಳನ್ನು ತಬ್ಬಿ ಮುದ್ದಾಡಿದ್ದೆ, ಗುಲಾಬಿಯೇ 'ಹೆಲೆನಾ ಆಫ್ ಟ್ರಾಯ್' ಎಂದುಕೊಂಡಿದ್ದೆ. ಆದರೆ ಈಗ ನನಗನಿಸುತ್ತದೆ, ಜೀವನದಲ್ಲಿ ನನ್ನ ಸಾಧನೆಗಳ ಬಗ್ಗೆ ಗ್ರಾಫ್ ಎಳೆದರೆ ಗುಲಾಬಿಯನ್ನು ಮದುವೆಯಾದದ್ದು ಪೀಕ್ ಆದರೆ ನಂತರ, ಅಲ್ಲಿಂದಾಚೆಗೆ, ಡಿಕ್ಲೈನ್!

ಗುಲಾಬಿಯನ್ನು ಮದುವೆಯಾದದ್ದೇ ನನ್ನ ಅವನತಿಗೆ ಕಾರಣ ಎಂದು ನನಗೆ ಎಂದೂ ಅರಿವಾಗಲಿಲ್ಲವೇಕೆ!? ಗುಲಾಬಿಯನ್ನು ನಾನು ಮದುವೆಯಾಗುವವರೆಗೂ, ನನ್ನ ಪ್ರಣಯ ಲೀಲೆಗಳ ಬಗ್ಗೆ ಚಕಾರವೆತ್ತದೆ ಇರುತ್ತಿದ್ದ ಮಾಲತಿಗೆ, ನಂತರ ಧೈರ್ಯ ಬರತೊಡಗಿ, ನನ್ನನ್ನು ಕಂಡೊಡನೆ ಸಿಡುಕುವುದು, ಹಾರಾಡುವುದು, ಅಳುವುದು, ಗೊಣಗುವುದು ನಿತ್ಯದ ಪರಿಪಾಠವಾಗತೊಡಗಿತು. ಮಕ್ಕಳು ನನ್ನ ಕಣ್ತಪ್ಪಿಸಿ ಓಡಾಡತೊಡಗಿದಾಗ, ಮಕ್ಕಳು ನನ್ನ ಬಗ್ಗೆ ತೋರುವ ಪ್ರೀತಿ ಮತ್ತು ಗೌರವದಲ್ಲಿ ಏನೊ ಅರಕೆಯಿದೆಯೆನಿಸತೊಡಗಿತು. ಅವೆಲ್ಲವನ್ನೂ ಗುಲಾಬಿಯ ದೇಹದ ಸನ್ನಿಧಿಯಲ್ಲಿ, ಅದು ನನಗೆ ಉಣಬಡಿಸುತ್ತಿದ್ದ ಅಮಲಿನಲ್ಲಿ ಮರೆಯುತ್ತಿದ್ದೆ. ಆದರೆ ಅದು ನಡೆದದ್ದು ಎಷ್ಟು ದಿನ!? ಗುಲಾಬಿ ಗರ್ಭಿಣಿಯಾಗುವವರೆಗೆ ಮಾತ್ರ. ಗುಲಾಬಿ ಗರ್ಭಿಣಿಯಾದಾಗ ಅವಳೂ ಬದಲಾಗತೊಡಗಿದಂತೆ ಭಾಸವಾಗಿ, ಊಹುಂ, ಅವಳೂ ಹದಿನಾರಾಣೆ ಮಾಮೂಲಿ ಹೆಂಗಸು, ಬಹುಶಃ, ಅವಳೂ ಮಾಲತಿಯ ಜೊತೆ, ಒಂದೇ ಸ್ಕೂಲಿನಲ್ಲಿ, ಒಂದೇ ಬೆಂಚಿನಲ್ಲಿ ಕುಳಿತು ಪಾಠ ಕಲಿತಿದ್ದಿರಬೇಕೆನಿಸಿದಾಗ, ಗುಲಾಬಿ ಮಾಲತಿಯಂತೆಯೇ ಎಂಬ ಭಯ ನಖಶಿಖಾಂತ ನನ್ನನ್ನು ತುಂಬಿಕೊಂಡಾಗ, ಹಳೆಯ ರೊಟೀನ್ ಹೆಚ್ಚಾಗತೊಡಗಿತು.



ನನ್ನ ಆತ್ಮೀಯ ಗೆಳೆಯ, ಐದು ವರ್ಷದ ಹಿಂದೆ ತೀರಿಕೊಂಡ ಗುರುರಾಜ, ಒಂದು ಬಾರಿ ನನ್ನನ್ನು, 'ಮನು, ನಿನ್ನನ್ನು ಪಾಪ ಪ್ರಜ್ಞೆ ಕಾಡಲ್ವ? ನಿನ್ನೀ ಪ್ರಣಯ ಲೀಲೆಗಳು ನಿನಗೆ ಸದಾಕಾಲ ಖುಷಿ ಮತ್ತು ನೆಮ್ದಿ ಕೊಡುತ್ತೇಂದ್ಕೊಂಡಿದೀಯಾ? ನಿನ್ನ ಮಕ್ಕಳ ದೃಷ್ಟೀಲಿ ನಿನ್ನ ಇಮೇಜ್‌ಗೆ ಧಕ್ಕೆ ಬರಲ್ವ?' ಎಂದು ಕೇಳಿದ್ದ. ನಾನಾಗ, 'ಏಯ್ ಗುರು, ಹೈಸ್ಕೂಲ್ ಮಕ್ಳ ತರ ಮಾತಾಡ್ಬೇಡ. ಒಂದು ಗಂಡಿಗೆ ಒಂದೇ ಹೆಣ್ಣು ಅಥವಾ ಒಂದು ಹೆಣ್ಣಿಗೆ ಒಂದೇ ಗಂಡು ಅನ್ನೊ ಸಿದ್ಧಾಂತದಲ್ಲಿ ನನಗೆ ಸ್ವಲ್ಪವೂ ನಂಬಿಕೆಯಿಲ್ಲ. ಅದು, ಕಾಂಪಿಟಿಷನ್ ಎದುರಿಸೋಕ್ಕೆ ಆಗ್ದಿದ್ದೋರು ಡೆವಲಪ್ ಮಾಡಿರೊ ಸಿದ್ಧಾಂತ. ನಮ್ಮ ಪೂರ್ವ ಜರಿಗೂ ಈ ಸಿದ್ಧಾಂತದಲ್ಲಿ ನಂಬಿಕೆಯಿರಲಿಲ್ಲಾನ್ನೋದಕ್ಕೆ ಬೇಕಾದಷ್ಟು ಉದಾಹರಣೆಗಳಿವೆ. ವಿಷ್ಣು ಕೂಡಾ ರಾಮಾವತಾರದಲ್ಲಿ ಏಕಪತ್ನೀವ್ರತಸ್ಥನಾಗಿದ್ರೆ, ಕೃಷ್ಣಾವತಾರ ಎತ್ತಿದಾಗ ಎಷ್ಟು ಮದ್ವೆ ಆದ ಹೇಳು? ನಾನು ಮಾಲತಿಗೆ ಯಾವತ್ತೂ ಅವಳಿಗೆ ಲಾಯಲ್ ಆಗಿರ್ತೀನೀಂತ ಹೇಳಿದ್ದಿಲ್ಲ. ಅಫ್‌ಕೋರ್ಸ್, ಗುಲಾಬೀನ ಮದುವೆಯಾಗುವಾಗ ಅವ್ಳು, 'ರಾಜಾ ಇನ್ಮುಂದಾದ್ರೂ ಬೇರೆ ಹುಡ್ಗೀರ, ಹೆಂಗಸ್ರ ಸಹವಾಸ ಬಿಟ್ಬಿಡಿ' ಅಂತ ಗೋಗರೆದಾಗ ನಾನು, 'ಗುಲಾಬಿ, ಒಂದೇ ಸಲಕ್ಕೆ ಆ ಚಟಾನ ಬಿಡೋದು ಕಷ್ಟ, ಆದ್ರೆ ನಿಧಾನವಾಗಿ ಅದನ್ನ ಬಿಡ್ತಾ ಬರ್ತೀನಿ' ಅಂದಿದ್ದೆ. ಪ್ರಯತ್ನ ಕೂಡಾ ಮಾಡ್ದೆ. ಆದ್ರೆ ಅದು ಸಾಧ್ಯವಾಗ್ಲಿಲ್ಲ. ನನ್ನ ಹಿಡಿತದಲ್ಲಿ ಇಲ್ದಿರೋದಕ್ಕೆ ನಾನು ಹೇಗೆ ಜವಾಬ್ದಾರ ಹೇಳು' ಎಂದು ನಕ್ಕಿದ್ದೆ. ಗುರುರಾಜ ಮುಂದಕ್ಕೆ ಮಾತನಾಡಿರಲಿಲ್ಲ. ನಾನು ಹೇಳಿದ್ದು ಸರಿ ಎಂಬ ಅನಿಸಿಕೆಯಿಂದಲೊ ಇಲ್ಲ ನನಗೆಷ್ಟು ಹೇಳಿದರೂ ಕೋಣನ ಮುಂದೆ ಕಿಂದರಿ ಬಾರಿಸಿದಂತೆ ಎಂಬ ಬೇಸರದಿಂದಲೊ, ತಿಳಿಯಲಿಲ್ಲ ನನಗೆ.

ನಾನು ಯಾವುದಾದರೂ ಪಾರ್ಟಿಗೆ ಹೋದಾಗ, ಯಾರದಾದರೂ ಮನೆಗಳಿಗೆ ಹೋದಾಗ, ಹೆಂಗಸರು ಮೇಲೆಬಿದ್ದು ನನ್ನೊಡನೆ ಮಾತನಾಡುವಾಗ, ಅವರ ಗಂಡಂದಿರಿಗೆ, ಬೇರೆ ಗಂಡಸರಿಗೆ ಹೇಗಾಗುತ್ತಿತ್ತೆಂಬುದು, ಗುಲಾಬಿಯ ಮಗಳು, ಹದಿನೇಳು ತುಂಬಿದ, ಪುಟಿವ ಯೌವ್ವನದ, ತಾಯಿಯ ಪ್ರತಿರೂಪ, ವರ್ಷಾಳೊಡನೆ ಅವಳ ಬಾಯ್‌ಫ್ರೆಂಡ್ಸ್ ಕೈ ಕೈ ಹಿಡಿದುಕೊಂಡು ಓಡಾಡುವಾಗ, ನಮ್ಮ ಮನೆಗೆ ಬಂದ ನನ್ನ ಮಧ್ಯ ವಯಸ್ಕ ಗೆಳೆಯರು ಅವಳ ಮೈ ಮುಟ್ಟಿ ಮಾತನಾಡಿಸುವಾಗ ನನ್ನ ಹೊಟ್ಟೆಯಲ್ಲೇಳುತ್ತಿದ್ದ ಕಿಚ್ಚು, ನನಗೆ ತಿಳಿಯುವಂತೆ ಮಾಡುತ್ತಿತ್ತು. ನನ್ನ ಚಡಪಡಿಕೆ ಕಂಡು ಗುಲಾಬಿ, 'ತುಂಬಾ ಹೊಟ್ಟೆ ಕಿಚ್ಚೂರಿ ನಿಮಗೆ' ಎಂದು ಛೇಡಿಸುವಾಗಲೆಲ್ಲಾ ನನಗೆ ಫ್ರಾಯ್ಡ್‌ನ ಥಿಯರಿ ನೆನಪಾಗುತ್ತಿತ್ತು.

ವರ್ಷಾ, ಅವಳ ಬಾಯ್‌ಫ್ರೆಂಡ್ ವಿನ್ಸೆಂಟ್ ಜೊತೆ ಎಂ.ಜಿ. ರಸ್ತೆಯಲ್ಲಿ ಹೋಗುವಾಗ ನನ್ನನ್ನ ನೋಡಿ, 'ಡ್ಯಾಡಿ ಇವ್ರು, ವಿನ್ಸೆಂಟ್. ನನ್ಫ್ರೆಂಡ್, ನೆಕ್ಸ್ಟ್ ಇಯರ್ ನಾವಿಬ್ರೂ ಮದ್ವೆ ಆಗೋಣಾಂತಿದೀವಿ' ಎಂದಾಗ ನಾನು ಮುಗುಳ್ನಕ್ಕಿದ್ದೆ. ಗುಲಾಬಿ, ವಿಷಯ ತಿಳಿದಾಗ ಸಂತೋಷ

ಪಟ್ಟಿದ್ದಳು. ನನಗೆ, ವರ್ಷಾಗೆ ಇನ್ನೂ ಮದುವೆಯ ವಯಸ್ಸಾಗಿಲ್ಲವೆನಿಸಿದರೂ, ಮನುಷ್ಯ ತನಗೆ ಮಾಡಬೇಕೆನಿಸಿದ್ದನ್ನು ಮುಂದೂಡದೆ, ಆಕೂಡಲೇ ಮಾಡಿಬಿಡಬೇಕೆಂಬ ನಿಲುವನ್ನು ಹೊಂದಿದ್ದ ನಾನು, ವಿನ್ಸೆಂಟ್‌ನ ಬಳಿ, 'ವಿ. ವಿನ್ಸೆಂಟ್ ನಿಮ್ ಪೇರೆಂಟ್ಸ್‌ನ ಒಂದಿನ ಕರ್ಕೊಂಡ್ಬನ್ನಿ, ಮದ್ವೆ ಬಗ್ಗೆ ಮಾತನಾಡೋಣ' ಎಂದೆ. ಆಗ ಗುಲಾಬಿ, 'ರೀ ಅವರಿಗೆ ತಾಯಿ ಮಾತ್ರ ಇರೋದಂತೆ' ಎಂದಿದ್ದಳು.

ನಾನು ಒಂದು ದಿನ ಕಾರಿನಲ್ಲಿ, ಆನಂದ್ ರಾವ್ ಸರ್ಕಲ್ ಬಳಿ ಹೋಗುತ್ತಿದ್ದಾಗ, ಸಿಗ್ನಲ್ ಸಿಕ್ಕಿರಲಿಲ್ಲವಾಗಿ, ಅದಕ್ಕಾಗಿ ಕಾಯುತ್ತಾ, ರಸ್ತೆಯನ್ನು ನೋಡುತ್ತಿದ್ದೆ. ವಿನ್ಸೆಂಟ್ ಒಬ್ಬ ಹೆಂಗಸಿನೊಡನೆ ರಸ್ತೆ ದಾಟುತ್ತಿದ್ದ! ಆಕೆ ಅವನ ತಾಯಿಯಿರಬಹುದೆಂದು ಕುತೂಹಲದಿಂದ ಗಮನಿಸಿದೆ. ಹೌದು ಅವಳು ಎಲಿಜಾ!! ನನ್ನ ಜೀವನ ಸರಳ ರೇಖೆ, ಅದರಲ್ಲಿ ತಿರುವುಗಳಿಲ್ಲ, ಎಂದು ಎಲ್ಲರೊಡನೆ ಹೇಳಿಕೊಳ್ಳುತ್ತಿದ್ದ ನನಗೆ ಆಘಾತವಾಗಿತ್ತು. ಅಲ್ಲಿಂದ ಮನೆಗೆ ಹೋಗಬೇಕಾಗಿದ್ದವನು, ಸೀದಾ ಆಫೀಸಿಗೆ ವಾಪಸ್ಸು ಹೋದೆ. ಅಟೆಂಡರ್ ಸಿದ್ಧಯ್ಯನಿಗೆ ಒಂಬತ್ತು ಗಂಟೆಯವರೆಗೆ ಅಲ್ಲೇ ಇರಲು ಹೇಳಿ, ನನ್ನ ಕ್ಯಾಬಿನ್ನಿಗೆ ಹೋಗಿ ಕುಳಿತು, ಸಿಗರೇಟ್ ಸೇದತೊಡಗಿದೆ. ತಂಬಾಕು ಉರಿಯತೊಡಗಿದಂತೆ, ನನ್ನ ಮನಸ್ಸೂ ಉರಿಯತೊಡಗಿತು.

ಎಲಿಜಾ ಇಲ್ಲಿಗೇಕೆ ಬಂದಳು!? ''ನನ್ನನ್ನು ಮದುವೆ ಆಗಿ, ಆಮೇಲೆ ನಾನೂ, ನನ್ನ ಮಗು ದೂರ ಹೋಗ್ತೀವಿ' ಎಂದಿದ್ದಳು. ಅವಳ ಆ ಕೋರಿಕೆಯನ್ನು ನಾನು ತಿರಸ್ಕರಿಸಿದಾಗ, 'ಆಯ್ತು ಬಿಡಿ. ನಿಮ್ಮಂತಹವರ ಬದುಕಿನ ಅಂಗವಾಗೋದ್ರಲ್ಲಿ ಯಾವ ಅರ್ಥವೂ ಇಲ್ಲಾಂತ ಈಗ ನನಗೆ ಅರಿವಾಯ್ತು' ಎಂದು ಹೇಳಿ ಮುಂಬಯಿಗೆ ಹೋದವಳು, ಅಲ್ಲಿ ಒಮ್ಮೆ, ಗುರುರಾಜನನ್ನು ಕಂಡಾಗ, 'ನನಗೆ ಮಗ ಇದಾನೆ, ಅವನ್ನ ಯಾರೂಂತ ನಿಮಗೂ ಗೊತ್ತು' ಎಂದಿದ್ದಳಂತೆ. ಅಂತಹವಳು ಈಗ್ಯಾಕೆ ಇಲ್ಲಿಗೆ ಬಂದು ಬಿಟ್ಟಿದ್ದಾಳೆ!? ಒಮ್ಮೆ, ನನ್ನೊಡನೆ ಸರಸವಾಡುತ್ತಿರುವಾಗ ಅವಳು, 'ಮನು, ಹೆಂಗಸು ಒಬ್ಬ ಪುರುಷನಲ್ಲಿ, ಅಂದ್ರೆ ತನ್ನ ಗಂಡ, ಬಾಯ್ ಫ್ರೆಂಡ್ ಮತ್ತು ಮಗನಲ್ಲಿ ಏನೇನ್ ಗುಣಗಳು ಇರಬೇಕೂಂತ ಬಯಸ್ತಾಳೊ ಅವುಗಳ ಪ್ರತಿರೂಪ ನೀವು' ಎಂದಿದ್ದಳು. ಈಗ, 'ನೋಡಿ ಮನು, ಆ ಗುಣಗಳಿರೂ ಮಗನ್ನ ಪಡ್ದಿದೀನಿ' ಅಂತ ಜಂಭ ಕೊಚ್ಕೊಳೋಕ್ಕೆ ಇಲ್ಲಿಗೆ ಬಂದಿರಬಹುದಾ?...

ಎಂದೆಲ್ಲಾ ಯೋಚಿಸಿದ ನನಗೆ, ಎಲಿಜಾ ಬೆಂಗಳೂರಿಗೆ ಯಾಕೆ ಬಂದಿದ್ದಾಳೆ ಎಂಬುದು ಮುಖ್ಯವಾಗುವುದಕ್ಕಿಂತ ಅದರ ಪರಿಣಾಮ ಹೆಚ್ಚು ಮುಖ್ಯವೆನಿಸಿತು. ಆ ಅನಿಸಿಕೆಯ ಹಿಂದೆಯೇ ಮೈಯಲ್ಲಿ ನಡುಕವುಂಟಾಯಿತು. 'ಓಹ್, ಏನಾಗ್ಹೋಗಿದೆ ಈಗ! ವಿನ್ಸೆಂಟ್ ನನ್ನ ಮಗ, ವರ್ಷಾ ನನ್ನ ಮಗಳು, ಅವ್ರಿಬ್ರೂ ಮದ್ವೆ



ಯಾಗ್ಬೇಕೂಂತಿದಾರೆ! ನಾನೂ ಒಪ್ಪಿಬಿಟ್ಟಿದೀನಿ! ಈಗ ಈ ಮದ್ವೇನ ತಪ್ಪೋದು ಹೇಗೆ!?... ಮದ್ವೆ ತಪ್ಪೋದು ಕಷ್ಟವಲ್ಲ, ಆದ್ರೆ ಇಷ್ಟರೊಳಗೇ ಆಗಬಾರದ್ದು ಆಗ್ಹೋಗಿದ್ರೆ!! ಆಘಾತದ ಮೇಲೆ ಆಘಾತ! ಓಹ್ ದೇವ್ರೇ!... ಓಹ್ 'ದೇವ್ರೇ' ಅನ್ನೋ ಪದ ಇಲ್ಲೀವರೆಗೆ ನನ್ನ ಮನದಲ್ಲಿ ಸುಳಿದಿದ್ದೇ ಇಲ್ಲ. ಇದೀಗ!? ಏನೂ ಅನಾಹುತ ಆಗ್ದೇ ಇರ್ಲಿ ದೇವ್ರೇ'... ಎಂದು ಗೋಳಾಡುವಾಗ ಎಂದೊ ಒಮ್ಮೆ ಗುರುರಾಜ ಕೇಳಿದ 'ಮನು ನಿನ್ನನ್ನ ಪಾಪಪ್ರಜ್ಞೆ ಕಾಡಲ್ವ?' ಎಂಬ ಪ್ರಶ್ನೆ ನನ್ನ ಮುಂದೆ ನಗುತ್ತಾ ಕುಣಿಯ ತೊಡಗಿತು. ಅದರ ಪರಿಧಿಯಿಂದ ಓಡ ಲೆತ್ನಿಸಲು, ಅಲ್ಮೇರಾದಲ್ಲಿರಿಸಿದ್ದ ವಿಸ್ಕಿ ಬಾಟಲನ್ನು ಹೊರತೆಗೆದು ಕುಡಿಯತೊಡಗಿದೆ. ನನ್ನೊಡನೆ ಸಂಬಂಧವಿರಿಸಿಕೊಂಡಿದ್ದ, ಈಗಲೂ ಸಂಬಂಧ ಹೊಂದಿರುವ, 'ನೀವು ಒಪ್ಪೊದಾದ್ರೆ, ನನ್ ಗಂಡನ್ನ ಬಿಟ್ಬರ್ತೀನಿ ಮನು, ನಾವಿಬ್ರೂ ಎಲ್ಲಾದ್ರೂ ದೂರ ಹೋಗಿಬಿಡೋಣ' ಎನ್ನುವ ಹೆಂಗಸರ ಗಂಡಂದಿರು, ತಮ್ಮ ಹೆಂಡತಿಯರು ಪತಿವ್ರತೆಯರು ಎಂದು ಜಂಭ ಕೊಚ್ಚಿಕೊಳ್ಳು ವಾಗ, ಮನದಲ್ಲೇ, 'ಅಯ್ಯೋ ಪೆಕರ್ಮುಂಡೇವಾ' ಎಂದು ಪರಿಹಾಸ್ಯ ಮಾಡಿ ತಿರಸ್ಕಾರದಿಂದ ನಗುತ್ತಿದ್ದೆ. ಆದರೆ ಈಗ ನನ್ನ ಸ್ಥಿತಿ? ಎಂದು ನನ್ನನ್ನು ನಾನೇ ಪ್ರಶ್ನಿಸಿಕೊಂಡಾಗ ವಿಸ್ಕಿ ಬಾಟಲಿನ ಮೇಲಿನ ನನ್ನ ಹಿಡಿತ ಬಿಗಿಯಾಯಿತು. ಆದರೆ ನನ್ನ ಮನದ ಮೇಲಿನ ನನ್ನ ಹಿಡಿತ!? ·

ವಿಸ್ಕಿ ಬಾಟಲ್ ಖಾಲಿಯಾದ ಮೇಲೆ ಆಫೀಸಿನಿಂದ ಹೊರಟೆ. ಇಡೀ ಬಾಟಲ್ ಮುಗಿಸಿದ ನನ್ನನ್ನು ಕಂಡು ಸಿದ್ಧಯ್ಯ, 'ನಾನೂ ಮನೇ ತನಕ ಬರ್ಲಾ ಸಾರ್?' ಎಂದು ಹೆದರುತ್ತಲೇ ಕೇಳಿದ. ನಾನು, ಅವನ ಕೈಯಲ್ಲಿ ನೂರು ರೂಪಾಯಿಯ ನೋಟೊಂದನ್ನಿರಿಸಿ, 'ನೋ ಪ್ರಾಬ್ಲಮ್, ಎಂಜಾಯ್' ಎಂದು ತೊದಲಿದೆ. ಕಾರನ್ನು ಹೇಗೆ ಬೇಕೊ ಹಾಗೆ ಓಡಿಸತೊಡಗಿದೆ. ಮನೆಯ ಹಾದಿ ಗೊತ್ತಿದ್ದ ಕಾರು ನನ್ನನ್ನು ಮನೆಗೆ ಕೊಂಡೊಯ್ದಿತು.

ನಾನು ಮನೆಯೊಳಗೆ ಹೆಜ್ಜೆಯಿಟ್ಟಾಗ, ಗುಲಾಬಿ ಆತಂಕಕ್ಕೊಳಗಾಗಿದ್ದಂತೆ, ವರ್ಷಾ ಗಾಬರಿಯಾಗಿದ್ದಂತೆ ಕಂಡು, ಕಣ್ಣುಜ್ಜಿಕೊಂಡು ನೋಡಿದೆ. ಆಗ ಗುಲಾಬಿ, 'ರೀ, ವಿನ್ಸೆಂಟ್ ತಾಯಿಗೆ ಹಾರ್ಟ್ ಅಟ್ಯಾಕ್ ಆಗಿದ್ಯಂತೆ, ತುಂಬಾ ಸೀರಿಯಸ್ ಅಂತೆ' ಎಂದಾಗ ವರ್ಷಾ ಅಳತೊಡಗಿದಳು. ನಾನು ತಕ್ಷಣ, 'ಇನ್ನೂ ಯಾಕ್ ನಿಂತಿದೀರಿ, ನಡೀರಿ ಹೋಗೋಣ' ಎಂದು ಅವಸರ ಮಾಡಿದಾಗ, ತಾಯಿ, ಮಗಳಿಗೆ ಆಶ್ಚರ್ಯವಾಯಿತು. 'ವರ್ಷಾ ನೀನು ತುಂಬಾ ಅದೃಷ್ಟವಂತೆ, ಸೆಂಟಿಮೆಂಟ್ಸೇ ಇಲ್ದಿರೊ ನಿಮ್ಮ ಡ್ಯಾಡಿ, ನಿಮ್ಮತ್ತೇನ ನೋಡೋಕ್ಕೆ ಎಷ್ಟ್ ಅರ್ಜೆಂಟ್ ಮಾಡ್ತಿದಾರೆ ನೋಡು' ಎನ್ನುತ್ತಾ ಗುಲಾಬಿ ಮೆಚ್ಚುಗೆಯ ನಗು ನಕ್ಕಾಗ, ನಾನು ಮನಸ್ಸಿನಲ್ಲೇ, 'ಓಹ್ ಗುಲಾಬಿ, ಇದು ನನ್ನ ಜೀವನದ ಪ್ರಶ್ನೆ, ನರಕದಿಂದ ನಾನು ಪಾರಾಗಲು ಉಳಿದಿರುವ ದಾರಿ ಇದೊಂದೇ. ಸಾಯೊ ಹೊತ್ನಲ್ಲಾದ್ರೂ ಎಲಿಜಾ, ವಿನ್ಸೆಂಟ್‌ಗೆ, 'ಇವ್ರೇ ನಿಮ್ತಂದೆ ವಿನ್ಸೆಂಟ್' ಅಂತ ಹೇಳಬಹುದೇನೋ ಎಂಬ ಆಸೆಯಿಂದ ನಾನಲ್ಲಿಗೆ ಹೊರಡೋಕ್ಕೆ ಅರ್ಜೆಂಟ್ ಮಾಡ್ತಿದೀನಿ. ಓ ಎಲಿಜಾ, ನನಗಾಗಿ ಅಲ್ಲ, ನಿನಗಾಗಿ ಅಲ್ಲ, ನನ್ನ ಮಕ್ಕಳಿಗಾಗಿ, ನಿನ್ನ ಮಗನಿಗಾಗಿ ಬದುಕುಳಿ. ನನ್ನನ್ನು ನರಕದಿಂದ ಪಾರುಮಾಡು' ಎಂದು ಮೌನವಾಗಿ ಅಂಗ ಲಾಚಿದೆ. ಕಾರ್ ಡ್ರೈವ್ ಮಾಡುವಾಗ ಚಳಿ ಯಲ್ಲೂ ಬೆವರತೊಡಗಿದೆ. ಗುಲಾಬಿ ಹಿತವಾಗಿ ನನ್ನ ಮುಖವನ್ನು ಒರೆಸುತ್ತಾ, 'ಯಾಕೆ ಇಷ್ಟೊಂದ್ ಗಾಬ್ರಿಯಾಗ್ತೀರಿ!? ಏನೂ ಆಗಲ್ಲ' ಎಂದು ಸಾಂತ್ವನ ಹೇಳಿದಳು.

ನಾವು ಆಸ್ಪತ್ರೆಗೆ ಹೋಗುವಷ್ಟರಲ್ಲಿ ಎಲಿಜಾ ಕೊನೆಯುಸಿರೆಳೆದಿದ್ದಳು. ದೇವರಿಗೆ ನನ್ನ ಮೊರೆ ಮುಟ್ಟಿರಲಿಲ್ಲ. 'ದೇವ್ರಿಗೆ ಒಂದ್ ನಮಸ್ಕಾರ

ಹಾಕ್ರೀ' ಎಂದು ಮಾಲತಿ ಹೇಳಿದಾಗಲೆಲ್ಲಾ 'ನನಗೂ ದೇವರಿಗೂ ಯಾವ ಸಂಬಂಧವೂ ಇಲ್ಲ' ಎಂದು ನಕ್ಕುಬಿಡುತ್ತಿದ್ದೆ! ಸಂಬಂಧ ಇಲ್ಲದವನ ಕೋರಿಕೆಯನ್ನು ಅವನು ಈಡೇರಿಸುವುದಾದರೂ ಹೇಗೆ!?

ನಾನು ಎಲಿಜಾಳ ಹೆಣದೊಡನೆ ವಿನ್ಸೆಂಟ್ ಮನೆಗೆ ಹೋದೆ. ಹೆಣದ ಬಗ್ಗೆಯಾಗಲೀ, ವಿನ್ಸೆಂಟ್ ಬಗ್ಗೆಯಾಗಲೀ, ನನಗ್ಯಾವ ಸಹಾನುಭೂತಿ, ಮರುಕ ಅಥವಾ ಅಟ್ಯಾಚ್ಮೆಂಟ್ ಇರಲಿಲ್ಲ. ನಾನು ಅಲ್ಲಿಗೆ ಹೋದ ಉದ್ದೇಶವೇ ಬೇರೆ. ನಾನೇ ವಿನ್ಸೆಂಟ್‌ನ ತಂದೆ ಎಂಬ ದಾಖಲೆಯನ್ನೇನಾದರೂ ಎಲಿಜಾ ಇಟ್ಟಿರಬಾರದೇಕೆ ಎಂಬ ಯೋಚನೆ ಅಲ್ಲಿಗೆ ಹೋಗಲು ನನ್ನನ್ನು ಪ್ರೇರೇಪಿಸಿತ್ತು. ಪ್ರವಾಹದಲ್ಲಿ ಕೊಚ್ಚಿಹೋಗುತ್ತಿದ್ದ ನಾನು, ಮರದ ದಿಮ್ಮಿಯೊಂದನ್ನು ಎದುರುನೋಡುತ್ತಿದ್ದೆ. ವರ್ಷಾ, 'ಲುಕ್ ಹಿಯರ್ ಡ್ಯಾಡಿ' ಎಂದು ನನ್ನನ್ನು ಕರೆದಾಗ, ಅವಳೆಡೆಗೆ ಗಕ್ಕನೆ ದೃಷ್ಟಿ ಹರಿಸಿದೆ. 'ಇವ್ರೇ ವಿನ್ಸೆಂಟ್ ಅವ್ರ ಡ್ಯಾಡಿ. ತೀರ್ಕೊಂಡು ಎರ್ಡ್ ವರ್ಷ ಆಯ್ತಂತೆ' ಎನ್ನುತ್ತಾ ಒಬ್ಬ ಧಡಿಯನ ಫೋಟೋ ತೋರಿಸಿದಳು. ಆಗ, ಅತ್ಯಾಶೆಯಿಂದ, ನನ್ನ ಅಲ್ಲಿಯವರೆಗಿನ ಊಹೆಗಳೆಲ್ಲಾ ಸುಳ್ಳಾಗಲಿ ಎಂದು ಹಾರೈಸುತ್ತಾ ವಿನ್ಸೆಂಟ್ ಕಡೆ ನೋಡಿದೆ. ಅವನ ಸುರುಟಿಕೊಂಡ ಬಲಗಿವಿಯನ್ನು ನೋಡುತ್ತಿದ್ದಂತೆ ನನ್ನ ಕೈ, ಅಪ್ರಯತ್ನವಾಗಿ, ನನ್ನ ಬಲಗಿವಿಯನ್ನು ಮುಟ್ಟಿತು. ವರ್ಷಾ ಅದನ್ನು ಗಮನಿಸಿಬಿಟ್ಟಾಳೆಂಬ ಹೆದರಿಕೆಯಿಂದ, ಥಟ್ಟನೆ ಕೈಯನ್ನು ಕಿವಿಯಿಂದ ದೂರ ಸರಿಸಿದೆ.

ಮನುಷ್ಯ-ಮನುಷ್ಯನ ನಡುವೆ ಇರುವ ಸಂಬಂಧಗಳು ಸುಳ್ಳು ಎಂದು ಯಾವಾಗಲೂ ಮಾಲತಿಯೊಡನೆ, ಗುರುರಾಜನೊಡನೆ ವಾದಿಸುತ್ತಿದ್ದ ನಾನು, ವಿನ್ಸೆಂಟ್, ನನ್ನ-ಎಲಿಜಾಳ ಸಂಬಂಧದ ಫಲ ಎಂಬುದು ತಿಳಿದಾಗಿನಿಂದ ವರ್ಷಾ-ವಿನ್ಸೆಂಟ್ ನಡುವಣ ಸಂಬಂಧದ ಬಗ್ಗೆ ಯಾಕೆ ಬಹಳ ಉದ್ವಿಗ್ನನಾಗುತ್ತಿದ್ದೇನೆ ಎಂದು ನನ್ನನ್ನು ನಾನೇ ಕೇಳಿಕೊಂಡೆ. ಆದರೆ ಅದಕ್ಕೆ ಉತ್ತರ ಸಿಗಲಿಲ್ಲ. ಸಂಬಂಧಗಳಿಂದಲೇ ಮನುಷ್ಯನ ನಾಶ ಎಂಬ ನನ್ನ ಹಳೇ ಸಿದ್ಧಾಂತ ನೆನಪಿಗೆ ಬಂದು, ಅದು ಎಂದೆಂದಿಗೂ ಸತ್ಯವೆನಿಸಿ, ಸಂಬಂಧಗಳು ಎಂಬ ಸುಳಿನಿಂದಾಚೆಗೆ ಬರಲು ನನಗೆ ಸಾಧ್ಯವಾಗುತ್ತಿಲ್ಲವೇಕೆಂದು ತಳಮಳಿಸಿದೆ. ಮನುಷ್ಯ ಮಾಡಿಕೊಂಡ ಸಂಬಂಧಗಳು ಅವನನ್ನೇ ನುಂಗಿ ನೀರು ಕುಡಿಯುವ ಬ್ಲಾಕ್‌ಹೋಲ್‌ಗಳೆನಿಸಿತು. 'ಈ ಸಂಬಂಧಾನ್ನೊ ಅನಿಷ್ಟವನ್ನು ಯಾವ ಬಡ್ಡಿಮಕ್ಳು ಸೃಷ್ಟಿಮಾಡಿ ನಮ್ಮ ತಲೆಯೊಳಗೆ ಭದ್ರವಾಗಿ ನೆಟ್ಟಿರೊ' ಎಂದು ನೂರು ಸಲ ಬೈದೆ. ಸಂಬಂಧಗಳ ತಲೆಬಿಸಿಯಿಲ್ಲದ ಬೇರೆ ಜೀವಿಗಳು ಮನುಷ್ಯನಿಗಿಂತ ಹೆಚ್ಚು ಸುಖಿಗಳೆನಿಸಿತು.

ನಾನು ಗುಲಾಬಿಯ ಬಳಿ, 'ವರ್ಷಾ ವಿನ್ಸೆಂಟ್‌ನ ಮದ್ವೆ ಆಗೋದ್ಬೇಡ' ಎಂದಾಗ, ಅವಳು ಗರಬಡಿದವಳಂತೆ, 'ಯಾಕ್ರೀ!?' ಎಂದು ಕೇಳಿದಾಗ, ನಾನು ಉತ್ತರ ಕೊಡುವ ಸಾಹಸ ಮಾಡಲಿಲ್ಲ. ಆಗ ಅವಳು, 'ಸಾರಿ ಮನು, ಇದುವರೆವಿಗೆ ನಾನು ಯಾವತ್ತೂ ನಿಮ್ಮ ಇಚ್ಛೆಗೆ ವಿರುದ್ಧವಾಗಿ ಹೋಗಿಲ್ಲ. ಆದ್ರೆ ಈ ವಿಷಯದಲ್ಲಿ ನಾನು ನಿಮ್ಮ ಪರ ನಿಲ್ಲೋಲ್ಲ. ಆ ಎಳೇ ಹೃದಯಗಳನ್ನು ಒಡೆಯೊ ಕೆಲ್ಸ ಖಂಡಿತ ನನ್ನಿಂದ ಮಾಡೋಕ್ಕೆ ಸಾಧ್ಯವಿಲ್ಲ. ನಿಮ್ಮ ಮಗ್ಳಿಗೆ ನೀವು ಬೇರೇನೂ ಮಾಡ್ಬೇಡಿ, ಅವ್ಳು ತನಗಿಷ್ಟ ಬಂದ್ಹಾಗೆ ಬದ್ಕೋಕ್ಕೆ ಬಿಡಿ' ಎಂದಿದ್ದಳು ದೃಢವಾಗಿ. ನಾನು ಅವಳನ್ನು ಪರಿಪರಿಯಾಗಿ ಬೇಡಿಕೊಂಡಾಗ, 'ಹಾಗಿದ್ರೆ ನಿಮ್ಮ ಮಗ್ಳಿಗೆ ನೀವೇ ಹೇಳಿ' ಎಂದು ಹತಾಶಳಾಗಿ ನುಡಿದು ಅಳತೊಡಗಿದಳು. ಅವಳ ಅಳುವಿಗೆ, ನನ್ನಲ್ಲಿ ಕನಿಕರದ ಅಲೆಯೆಬ್ಬಿಸುವ ಶಕ್ತಿಯಿರಲಿಲ್ಲ.

ಎಲಿಜಾ ಸತ್ತ ಎಂಟು ದಿನಗಳ ನಂತರ, ಬಹಳ ಕಷ್ಟಪಟ್ಟು, ವರ್ಷಾಳೊಡನೆ ಏಕಾಂತದಲ್ಲಿ ಮಾತನಾಡಿದೆ. 'ವಿನ್ಸೆಂಟ್ ಮತ್ತು ನಿನ್ನ ನಡುವೆ ಪ್ರೀತಿ ಬಿಟ್ಟು ಬೇರೆ ಏನಾದ್ರೂ ಆಗಿದ್ಯಾ ವರ್ಷಾ?' ಎಂದು ನಾನವಳನ್ನು ಕೇಳುವಾಗ,

ನನ್ನೆದೆಯ ಬಡಿತ ನಿಮಿಷಕ್ಕೆ ನೂರರ ಗಡಿಯನ್ನು ಸುಲಭವಾಗಿ ದಾಟಿಬಿಟ್ಟಿತ್ತು. 'ಬೇರೇನೂ ಆಗಿಲ್ಲ ಡ್ಯಾಡಿ, ಆದ್ರೆ ಈ ಪ್ರಶ್ನೆ ನಿಮ್ ಬಾಯಿಂದ ಬರ್ತಿರೋದನ್ನ ನೋಡಿ, ನನಗೆ ಆಶ್ಚರ್ಯ ವಾಗ್ತಿದೆ!' ಎಂದಾಗ ಅವಳ ಆಶ್ಚರ್ಯ ಹಾರಿ ಹೋಗುವಷ್ಟು ಜೋರಾಗಿತ್ತು ನನ್ನ ನಿಟ್ಟುಸಿರು. ನನ್ನ ತಲೆಯ ಮೇಲಿದ್ದ ಹಿಮಾಲಯ ಪರ್ವತ ವನ್ನು ತೆಗೆದು ಪಕ್ಕಕ್ಕಿಟ್ಟ ಹಾಗಾಗಿತ್ತು. 'ಸದ್ಯ, ನನ್ನ ಅದೃಷ್ಟ ಪೂರ್ತಿಯಾಗಿ ಖಾಲಿಯಾಗಿಲ್ಲ' ಎಂದು ಸಮಾಧಾನ ಹೊಂದಿದೆ. ನನ್ನ ಮುಖದಲ್ಲಿ ಸಮಾಧಾನದ ಛಾಯೆ ದಟ್ಟವಾಗಿರುವುದನ್ನು ಕಂಡು ವರ್ಷಾಳಿಗೆ ಆಶ್ಚರ್ಯವಾಯಿತು. ಅದೇ ಸರಿಯಾದ ಸಮಯವೆಂದುಕೊಂಡು, ಅವಳು ವಿನ್ಸೆಂಟ್ ಜೊತೆ ಮದುವೆಯಾಗುವ ಆಸೆಯನ್ನು ಬಿಟ್ಟುಬಿಡಬೇಕೆಂದೆ. ಅವಳು ಕೆರಳಿದಳು, ಕೂಗಾಡಿ ದಳು. ನಾನು, ಅವಳ ಮೇಲೆ ರೇಗುವುದಕ್ಕೆ ಬದಲಾಗಿ, ಆರಡಿ ದೇಹವನ್ನು ಮೂರಡಿ ಮಾಡಿಕೊಂಡು, ನಾನು ಹೇಳಿದಂತೆ ಕೇಳ ಬೇಕೆಂದು ಅಂಗಲಾಚಿ ಬೇಡಿಕೊಂಡೆ. ನನ್ನ ಕೋರಿಕೆಗೆ ಕಾರಣ ಹೇಳಬೇಕೆಂದು ಪಟ್ಟುಹಿಡಿ ದಳು. ನಾನು ಅಸಹಾಯಕನಾಗಿ, ವಿಧಿಯಿಲ್ಲದೆ, ಸತ್ಯಸಂಗತಿಯನ್ನು ಅವಳಿಗೆ ತಿಳಿಸಿದೆ. ನನ್ನ ಮಾತುಗಳು ಮುಗಿಯುತ್ತಿದ್ದಂತೆಯೇ, ವರ್ಷಾ, ಜೋರಾಗಿ ಚೀರಿದಳು. 'ಡ್ಯಾಡಿ ನೀವೇನೂಂತ ನಂಗೆ ತುಂಬಾ ಚೆನ್ನಾಗಿ ಗೊತ್ತಿದೆ. ನಿಮ್ಮ ಬಗ್ಗೆ ನನಗೆ ಸ್ವಲ್ಪವೂ ಗೌರವವಿಲ್ಲ. ನೀವು ಎಲ್ಲಾ ರೀತಿಯ ಹಲ್ಕ ಕೆಲ್ಸ ಮಾಡಿದ್ರಿ, ಈಗ ಯು ವಾಂಟ್ ಟು ಪೊಸೆಸ್ ಯುಅರ್ ಡಾಟರ್. ಅದಕ್ಕೇ ನೀವು ಈ ಕಥೆ ಹೇಳ್ತಿದೀರಿ. ನೀವು, ನಿಮ್ಮ ಆಸೆಗಳನ್ನು ಪೂರೈಸ್ಕೊಳೋಕ್ಕೆ, ಯಾವ ಮಟ್ಟಕ್ಕೆ ಬೇಕಾದ್ರೂ ಇಳಿತೀರೀಂತ ನಿಮ್ಮ ಫ್ರೆಂಡ್ ಗುರುರಾಜ್ ನನ್ಹತ್ರ ಒಂದಿನ ಹೇಳಿದ್ರು, ಅದು ನಿಜ. ನೀವೇನೇ ಹೇಳಿದ್ರೂ, ನಾನು, ವಿನ್ಸೆಂಟ್ ಮದ್ವೆ ಆಗೇ ಆಗ್ತೀವಿ. ನೀವ್ಹೇಳೋದು



ನಿಜವಾಗಿದ್ದಿದ್ರೆ, ವಿನ್ಸೆಂಟ್ ಅಮ್ಮ ಬೇರೆ ಯಾರ್ನೊ ಅವನ ತಂದೇಂತ ಯಾಕ್ಹೇಳ್ತಿದ್ರು?' ಎಂದು ಅಬ್ಬರಿಸಿದಳು. 'ನಿಮ್ಮಮ್ಮನ ಹತ್ರ ಈ ವಿಷಯ ಹೇಳ್ಬೇಡ' ಎಂದು ಗೋಗರೆದೆ. 'ಈ ಭೂಮಿ ಮೇಲಿರೊ ಯಾವ ಪ್ರಾಣಿಯೂ ನಿಮ್ಮ ಮಾತ್ನ ನಂಬಲ್ಲ' ಎಂದಳು, ಕಣ್ಣೀರೊರೆಸಿಕೊಳ್ಳುತ್ತ.

ಎರಡು ದಿನ ಎಡಬಿಡದೆ ಯೋಚಿಸಿದೆ. ವರ್ಷಾ ಮನೆಯಿಂದಾಚೆಗೆ ಹೋಗಿರಲಿಲ್ಲ. ಗುಲಾಬಿ, ಆ ಬಗ್ಗೆ ನನ್ನ ಬಳಿ, ಕಾರಣವೇನಿರ ಬಹುದೆಂದು ಕೇಳಿದಳು ನನಗಾಗ, ವರ್ಷಾ, ಗುಲಾಬಿಯ ಬಳಿ ಯಾವ ವಿಷಯವನ್ನೂ ಹೇಳಿಲ್ಲವೆಂದು ಸಮಾಧಾನವಾಯ್ತು. ಇದ್ದಕ್ಕಿ ದ್ದಂತೆ, ಲುಂಗಿ ಷರಟಿನಲ್ಲಿಯೇ ಕಾರ್ ಹತ್ತಿದೆ. ನಾನು ಆ ಅವಸ್ಥೆಯಲ್ಲಿ ಆಫೀಸಿಗೆ ಹೋಗುತ್ತಿರು ವುದನ್ನು ಕಂಡು ಗುಲಾಬಿಗೆ ಆಶ್ಚರ್ಯವಾಯಿತು. ನಾನು ಆಫೀಸಿನಲ್ಲಿ ನನ್ನ ಛೇಂಬರ್‌ನಲ್ಲಿ ಕುಳಿತು ಸಿಗರೇಟ್ ಬೂದಿ ಮಾಡುತ್ತಾ ಯೋಚಿಸಿದೆ. ಕೈ ಯಾಂತ್ರಿಕವಾಗಿ ಯಾವುದೊ ಒಂದು ನಂಬ ರನ್ನು ಡಯಲ್ ಮಾಡಿತು. ಬಾಯಿ ತನ್ನ ಕೆಲಸ ವನ್ನು ಮಾಡಿತು. ಆ ಕಡೆಯಿಂದ 'ಅರ್ಧ ಗಂಟೆ ಯಲ್ಲಿ ಬರ್ತೀನಿ ಸಾರ್' ಎಂಬ ಉತ್ತರ ಬಂದಿತು.

ಭೂಗತ ಜಗತ್ತಿನ ದೊರೆ, ಬೇಬಿಯ ಶಿಷ್ಯ, ನನ್ನ ಮುಂದೆ ನಿಂತು, 'ಯಾರು ಸಾರ್, ಏನಾಗ್ಬೇಕು, ಎಷ್ಟ್ ಕೊಡ್ತೀರಿ, ಯಾವಾಗ ಮಾಡ್ಬೇಕು' ಎಂದು ಪ್ರಶ್ನೆಗಳನ್ನು ಕೇಳಿದ. ನಾನು ತಕ್ಷಣವೇ ಉತ್ತರಿಸಲಾಗದೆ ಅವನಿಗೊಂದು ಸಿಗರೇಟ್ ಕೊಟ್ಟೆ. ಅವನದನ್ನು ಸೇದಿ ಮುಗಿಸಿದ. ನಾನವನಿಗೆ ಎರಡು ಲಕ್ಷ ನಗದು ಮತ್ತು ಒಂದು ಕಾಗದದ ತುಂಡನ್ನು ಕೊಟ್ಟೆ. ಆ ಚೀಟಿಯಲ್ಲಿದ್ದ ವಿವರಗಳನ್ನು ಓದಿಕೊಂಡು ಅವನು, ಸಂತೋಷ ದಿಂದ, 'ಯೋಚಿಸಬೇಡಿ ಸಾರ್ ಎಲ್ಲವನ್ನೂ ಸಾಂಗೋಪಾಂಗವಾಗಿ ಮಾಡ್ತೀನಿ' ಎಂದ. ನಾನು ಆಗಲೂ ಮೌನಿ. ಅವನಿಗೇನನ್ನಿಸಿತೊ, ಏನೊಂದೂ ಮಾತನಾಡದೆ, ಹೊರಟುಬಿಟ್ಟ. ಅಳಲೆತ್ನಿಸಿದೆ, ಸಾಧ್ಯವಾಗಲಿಲ್ಲ.

ಪೇಪರ್‌ನಲ್ಲಿ ವಿನ್ಸೆಂಟ್‌ನ ಫೋಟೊ, ಆ್ಯಕ್ಸಿಡೆಂಟ್‌ನಲ್ಲಿ ಅವನು ಸತ್ತ ಸುದ್ದಿಯೊಂದಿಗೆ ಅಚ್ಚಾಗಿದ್ದನ್ನು ಕಂಡು ವರ್ಷಾ, ಸೀದಾ ನನ್ನ ರೂಮಿಗೆ ಬಂದು, ನೇರವಾಗಿ ನನ್ನ ಮುಖಕ್ಕೆ ಉಗಿದು, 'ಥೂ ನಿನ್ನ ಜನ್ಮಕ್ಕಿಷ್ಟು, ನೀನೂ ಒಬ್ಬ ಮನುಷ್ಯನಾ?' ಎಂದು ನನ್ನ ಮಾತಿಗೂ ಕಾಯದೆ ತನ್ನ ರೂಮಿಗೆ ವಾಪಸ್ಸಾದಳು.

...... ವಿನ್ಸೆಂಟ್ ಸತ್ತು, ವರ್ಷಾ ಮನೆಯಿಂದ ಕಾಣೆಯಾಗಿ ನಾಲ್ಕು ಮತ್ತು ಮೂರು ದಿನಗಳಾಗಿವೆ. ಮನೆಗೆ ಲೆಕ್ಕವಿಲ್ಲದಷ್ಟು ಜನ, ಬಂಧು-ಮಿತ್ರರು ಬಂದು ಹೋಗಿದ್ದಾರೆ. ನಾನು ಯಾರ ಬಳಿಯೂ ಒಂದು ಮಾತೂ ಆಡಿಲ್ಲ, ಗುಲಾಬಿಯೊಡನೆ ಮಾತನಾಡುವಾಗ ಮಾಲತಿ, 'ನಿನ್ನತ್ರಾನೂ ಒಂದ್ಮಾತು ಆಡಿಲ್ವ!?' ಎಂದದ್ದು ನನ್ನ ಕಿವಿ ತಲುಪಿತ್ತು. ಮನೆಗೆ ಬಂದ ಎಷ್ಟೊ ಜನ, ನನಗೆ ಕೇಳಬಾರದೆಂದು, ಪಿಸಿಪಿಸಿ ಮಾತನಾಡುತ್ತಾರೆ. ಡಿ.ಸಿ.ಪಿ. ಆಗಿರುವ ನನ್ನ ಹಿರೀಮಗ ಅಂಶುಮಂತ, ಗುಲಾಬಿಯ ಬಳಿ, 'ಚಿಕ್ಕಮ್ಮ, ವರ್ಷಾ ಬಗ್ಗೆ ಇನ್ನೂ ಏನೂ ಗೊತ್ತಾಗಿಲ್ಲ' ಎಂದದ್ದಾಗಲೀ, ಪ್ರಖ್ಯಾತ ಮನಃಶಾಸ್ತ್ರಜ್ಞ ಬಾಲಗೋವಿಂದ್, 'ನಿಮ್ಮ ಹಸ್ಬೆಂಡ್ ಯಾಕ್ಹೀಗೆ ಮೌನವಾಗಿದಾರೇಂತ ಹೇಳೋದು ಕಷ್ಟ. ಅವರನ್ನು ನನ್ನ ನರ್ಸಿಂಗ್ ಹೋಂಗೆ ರೆಗ್ಯುಲರ್ರಾಗಿ ಕರ್ಕೊಂಡ್ಬನ್ನಿ' ಎಂದದ್ದಾಗಲೀ ನನ್ನನ್ನು ಮಾತನಾಡುವಂತೆ ಮಾಡುವಲ್ಲಿ ಸೋಲುತ್ತವೆ. ನನ್ನ ಕಣ್ಣಿನ ಭಾಷೆ ಯಾರಿಗೂ, ಕಡೆಗೆ ಗುಲಾಬಿಗೂ, ಅರ್ಥವಾಗುವುದೇ ಇಲ್ಲ.



ಕತ್ತಲು ನನಗೆ ಕೊಡುವಷ್ಟು ಖುಷಿ, ಸಾಂತ್ವನ, ಬೆಳಕು ಕೊಡುವುದಿಲ್ಲವೆನಿಸಿತು. ಬೆಳಕು ಕಂಡರೆ ಮನಸ್ಸ ಮೂಲೆಯಲ್ಲಿ ಹೆದರಿಕೆ ಹುಟ್ಟುತ್ತದೆ, ಅದು ನನ್ನ ಕಣ್ಣನ್ನು ಚುಚ್ಚುತ್ತದೆ.

— [signature]



# ಕಾಗದದ ದೋಣಿ









# ಗುರುವಂದನೆ

'ಕಾಗದದ ದೋಣಿ' ಸರಭರ ಹರಿದಾಡುತ್ತಾ, ತಟ ತಲುಪುವ ಸಾಧ್ಯತೆ ನಿಮಗೆ ಬಹಳ ಆಪ್ಯಾಯಮಾನವಾಗಿದೆ ಎಂದು ಅತಿ ಶೀಘ್ರವೇ ಗೊತ್ತಾಗಿದೆ. ಬಗೆ ಬಗೆಯ ಚಿತ್ತಾರದ, ಚೈತನ್ಯ ಚಿಮ್ಮುವ, ಸಣ್ಣ ಪುಟ್ಟ, ಗಂಭೀರ, ಲಘುವಾದ, ತಿಳಿಹಾಸ್ಯದ, ತಪ್ಪೊಪ್ಪಿಗೆಯ, ರಸಾರ್ದ್ರ, ರೊಮ್ಯಾಂಟಿಕ್ 'ದೋಣಿಗಳು' ನಮ್ಮ ಕಚೇರಿಗೆ ಬಂದು ಇದೊಂದು 'ಸರ್ವ ಋತು ಬಂದರು' ಆಗಿಬಿಟ್ಟಿದೆ.

ಈ ಪತ್ರಗಳ ರಾಶಿಯಲ್ಲಿ, ಎಂದೋ ಪಾಠ ಹೇಳಿ ಮರೆಯಾದ 'ಗುರುಗಳಿಗೆ' ಬರೆದ ಪತ್ರಗಳದ್ದೇ ಮೇಲುಗೈ ಎಂಬ ಅಂಶ ಮನಗಂಡಾಗ ಹೃದಯ ತುಂಬಿಬಂತು. ಶಾಲೆ, ಕಾಲೇಜಿನ ದಿನಗಳಲ್ಲಿ ಎಲ್ಲರ ಮನಸ್ಸಿನಲ್ಲಿ ಅಚ್ಚೊತ್ತುವ ಮೂರ್ತಿ, ಕೈ ಹಿಡಿದು ನಡೆಸಿ, ಮಾರ್ಗದರ್ಶನ ನೀಡಿದ ಗುರುಗಳದ್ದು. ಕ್ಲಾಸಿನ ಒಳ ಹೊರಗೆ ಶಿಷ್ಯವೃಂದದ ಕ್ಷೇಮವನ್ನು ಕಾಪಿಡುವ ಟೀಚರ್, ಸರ್, ಮೇಷ್ಟ್ರದ್ದು!

ಕಲಿಕೆಗೆ ಕಂಪ್ಯೂಟರ್ರೇ ಬರಲಿ, ಮತ್ತೇನೇ ಅನ್ವೇಷಣೆಗೊಳ್ಳಲಿ, ಉದಾತ್ತ ಧ್ಯೇಯಗಳನ್ನೊಳಗೊಂಡ ಅಧ್ಯಾಪಕ ವೃತ್ತಿಯ ಘನತೆ, ಗೌರವ ತಿಲಮಾತ್ರವೂ ಕಡಿಮೆಯಾಗಿಲ್ಲ ಎನ್ನುವುದಕ್ಕೆ ಇಲ್ಲಿರುವ ಪತ್ರಗಳೇ ರುಜುವಾತು.

ಕಾಲದ ತೆರೆಗಳ ಹಿಂದೆ ಎಲ್ಲೆಲ್ಲೋ ಮರೆಯಾಗಿರುವ ನೆಚ್ಚಿನ ಗುರುಗಳಿಗೆ ಬರೆದಿರುವ ಈ 'ಕಾಗದದ ದೋಣಿ'ಗಳನ್ನು, ಈ ಸಲ, ಕಲೆಹಾಕಿ ಕೊಡುತ್ತಿದ್ದೇವೆ. ಇದು ಸೆಪ್ಟೆಂಬರ್ ಐದರ Teachers' day ಗೆ, ಆ ಮೂಲಕ ಗುರು-ಶಿಷ್ಯ ಸಂಬಂಧಕ್ಕೆ ನಮ್ಮ ಕಾಣಿಕೆ.

# ನೆನಪಿನ ಅಲೆಗಳ ಮೇಲೆ...



ಪ್ರೀತಿಯ ಸರ್,

ಇನ್ನೂ ಮೊನ್ನೆ ಮೊನ್ನೆಯಷ್ಟೇ, ನಾನು ತುಂಡುಲಂಗ ಹಾಕಿಕೊಂಡು, ನನ್ನ ಹನ್ನೆರಡನೇ ವಯಸ್ಸಿನಲ್ಲಿ ನಾನು ಬರೆದ ಎರಡು ಕಾದಂಬರಿ(!) ಗಳನ್ನು ಅವಚಿಕೊಂಡು, ಅಂಜುತ್ತಾ, ಅಳುಕುತ್ತಾ ನಿಮ್ಮನ್ನು ಭೇಟಿ ಮಾಡಿದ್ದು. ಈಗಾಗಲೇ ನಾನು ಸೀರೆಯುಟ್ಟ ಗೃಹಿಣಿ. ನೀವು ಕಡಲು ತೀರದ ಮಂಗಳೂರಲ್ಲಿ. ನಾನು ಬಯಲು ಸೀಮೆಯಲ್ಲಿ. ನಮ್ಮ ನಡುವೆ ಅದೆಷ್ಟೋ ವರ್ಷಗಳು ಮತ್ತು ವಿಸ್ತಾರ ಭೂಮಿಯ ಅಂತರ...

ಅಂದು ಆಶುಭಾಷಣ ಸ್ಪರ್ಧೆಯಲ್ಲಿ ಗೆದ್ದು, ನಿಮ್ಮ ಕೈಯಿಂದ ಬಹುಮಾನ ಪಡೆವಾಗ ಭಾವಾವೇಶದಿಂದ ಕೈ ನಡುಗಿ, ಕಪ್ ಬಿದ್ದಿತ್ತು. ಅದು ಭಯವಲ್ಲ. ಒಂದು ಬಗೆಯ ಅಸೀಮ ಗೌರವ. ಹಿಮಾಲಯದ ತಪ್ಪಲಲ್ಲಿ ಹುಟ್ಟಿ, ಬೆಟ್ಟವನ್ನೇ ಬೆರಗಿನಿಂದ ನೋಡುವ ಪುಟ್ಟ ಹೂಗಿಡದಂತೆ ನಾನಿದ್ದೆ.

ಕ್ರಮೇಣ ನೀವು ನನ್ನನ್ನು ಆಪ್ತವಲಯಕ್ಕೆ ಎಳೆದುಕೊಂಡಿರಿ. ನಿಮ್ಮ ನಡೆ, ನುಡಿ, ನಗುನಗುತ್ತ ಬಾಳುವ ರೀತಿ, ಹಾಸ್ಯಪ್ರಜ್ಞೆ, ಆಳವಾದ ಚಿಂತನೆ, ಸ್ನೇಹಪೂರ್ಣ ಅಂತರಂಗ ಒಂದೊಂದೂ ನನಗೆ ಆದರ್ಶವಾಗಿದ್ದವು. ಒಳಿತು ಕೆಡುಕುಗಳ ತೀವ್ರ ತುಮುಲವಿದ್ದ ಆ ಸಣ್ಣ ವಯಸ್ಸಿನಲ್ಲಿ, ನನಗೆಷ್ಟೋ ಬಾರಿ, ನಿಮಗೂ ಅರಿವಿಲ್ಲದೆ ಮಾರ್ಗದರ್ಶಕರಾಗಿದ್ದಿರಿ. ನನ್ನ ಸ್ಥಾನದಲ್ಲಿ ನೀವಿದ್ದಿದ್ದರೆ ಏನು ಮಾಡುತ್ತಿದ್ದಿರಿ? ಎಂದು ಯೋಚಿಸಿಕೊಂಡು ನನ್ನ ನಡವಳಿಕೆಯನ್ನು ತಿದ್ದಿಕೊಳ್ಳುತ್ತಿದ್ದೆ! ನಿಮ್ಮ ಸಾಂಸಾರಿಕ ಸಂಬಂಧ, ನಿಮ್ಮ ಮಗುವನ್ನು ಬೆಳೆಸುತ್ತಿದ್ದ ರೀತಿ ಎಲ್ಲವನ್ನೂ ನಾನು ಸೂಕ್ಷ್ಮವಾಗಿ ಗಮನಿಸುತ್ತಿದ್ದೆ. ವಿಭಿನ್ನ ಅಭಿರುಚಿ, ಅಭಿಪ್ರಾಯಗಳ ಪತ್ನಿಯೊಂದಿಗೆ, ನಿಮ್ಮ ಸಾಮರಸ್ಯದ ಸುಂದರ ಬದುಕು ನನಗೆ ತುಂಬ ಮೆಚ್ಚುಗೆಯಾಗಿತ್ತು. ಇಂದು ನನ್ನ ಪುಟ್ಟ ಮಗಳೊಂದಿಗೆ ಆಡುವಾಗ, ಅಂದು ನೀವು, ನಿಮ್ಮ ಮಗನನ್ನು ಬೆಳೆಸುತ್ತಿದ್ದ ರೀತಿಯೆಲ್ಲ ಕಣ್ಣ ಮುಂದೆ ಬಂದು ನಿಲ್ಲುತ್ತದೆ.

ನಿಮ್ಮ ವ್ಯಕ್ತಿತ್ವದ ಸಮ್ಮೋಹಿನಿಗೆ ಒಳಗಾಗಿದ್ದ ನಾನು ಒಂದು ದಿನ ಕೇಳಿದ್ದೆ. 'ನೀವು ಮಾಡಿದ್ದೆಲ್ಲ ಸರಿ ಎನಿಸುತ್ತಲ್ಲ, ನಿಮ್ಮ ಬಗ್ಗೆ ನನಗ್ಯಾಕೆ ಸರ್ ಇಷ್ಟೊಂದು ಗೌರವ?' ನೀವು ಹೇಳಿದ್ದಿರಿ. ' ನೀನಿನ್ನೂ ನನ್ನಂತಹ ಜಾಸ್ತಿ ಜನರನ್ನು ನೋಡಿಲ್ಲ. ಮುಂದೆ ನೀನು ಬೆಳೆದ ಹಾಗೆ ನನಗಿಂತಲೂ ಬುದ್ಧಿವಂತರು, ವಿಚಾರವಂತರು ಸಿಕ್ಕಿದಾಗ ನಿನ್ನ ಮೇಲೆ ನನ್ನ ಪ್ರಭಾವ ಕಡಿಮೆ ಆಗುತ್ತೆ' ಅಂತ.

ನಿಮ್ಮನ್ನು ಭೇಟಿಯಾಗಿ ಎಷ್ಟೋ ವರ್ಷಗಳಾಗಿವೆ. ಆದರೂ, ನಗುವಾಗ ನಿಮ್ಮ ಕಣ್ಣು ಮಿಂಚುತ್ತಿದ್ದುದು, ಬೆನ್ನ ಹಿಂದೆ ಕೈಕಟ್ಟಿಕೊಂಡು ನೀವು ಓಡಾಡುತ್ತಿದ್ದ ರೀತಿ, ನಿನ್ನೆ ಮೊನ್ನೆ ನೋಡಿದಂತಿದೆ. ಈಗ ನೀವು ಹೇಗಿರಬಹುದು? ಕೂದಲು ಬೆಳ್ಳಗಾಗಿರಬಹುದೆ? ಮುಖ ಸುಕ್ಕಾಗಿರಬಹುದೆ? ಎಂದೆಲ್ಲ ಕಲ್ಪಿಸಿಕೊಳ್ಳಲು ನನಗೆ ಯಾವಾಗಲೂ ಮೋಜೆನಿಸುತ್ತದೆ.

ಕಾಲ ಪ್ರವಾಹದಲ್ಲಿ ನನ್ನ ನೆನಪೇ ನಿಮ್ಮ ಪಾಲಿಗೆ ಮಾಸಿರಬಹುದು. ನನಗೆ ಬೇಸರವಿಲ್ಲ. ಅದು ಸಹಜ. ಆದರೆ ಈ ಪತ್ರ ನಿಮ್ಮ ಕಣ್ಣಿಗೆ ಬಿದ್ದರೆ ನೀವು ಖಂಡಿತ ನನ್ನ ಗುರುತಿಸುವಿರಿ.



'ಪಂಚವಟಿ' ಗಾಂಧೀನಗರ, ತುರುವೇಕೆರೆ

ರೇಖಾ ಕುಂದಾರು

# ವಿದ್ಯೆಗೆ ನೀರುಣಿಸಿ ತಂಪೆರೆದವರು

ಪ್ರೀತಿಯ ಗುರುಗಳಿಗೆ,

ಒಂದಕ್ಷರ ಕಲಿಸುವವರೂ ಗುರುವಂತೆ. ಅಂದಮೇಲೆ, ನನ್ನ ಜೀವನ ಪರ್ಯಂತ ನೆನಪಿಟ್ಟುಕೊಳ್ಳುವಂಥ ಕೆಲಸ ಮಾಡಿದ ನಿಮ್ಮನ್ನು ಮರೆಯುವುದಕ್ಕಾಗುವುದೇ? ನನ್ನ-ನಿಮ್ಮ ಬಾಂಧವ್ಯದ ದಿನಗಳು, 1986-88ರ ಸಮಯ. ಅಪ್ಪ ನನ್ನನ್ನು ಶಾಲೆಗೆ ಸೇರಿಸಿ ಅದಾಗಲೇ ಎರಡು ವರ್ಷವಾಗಿರಬೇಕು. ಆದರೆ ಶಾಲೆ ನನಗೆ ದೂರದೂರವಾಗಿಯೇ ಇತ್ತು. ಅಪ್ಪನ ಜೊತೆಗೆ, ತಲೆಗೊಂದು ಬಟ್ಟೆ ಸುತ್ತಿಕೊಂಡು, ಅಯ್ಯನವರ ಮನೆಗೆ ಸೊಪ್ಪು ಹೊರಲು ಹೋಗುತ್ತಿದ್ದೆ. ಶಾಲೆ-ಪಾಠ ಎಂಬಂತಹ ಯೋಚನೆಗಳು ನನಗಿರಲಿಲ್ಲ,

ಅದೊಂದು ದಿನ, ನಾನು ಆಗಷ್ಟೆ ಸೊಪ್ಪಿನ ಹೊರೆಯನ್ನು ಹೊತ್ತುಹಾಕಿ, ಮುಖದಲ್ಲಿದ್ದ ಬೆವರನ್ನು ಒರೆಸಿಕೊಂಡು ಕೂತಿದ್ದೆ.... ಅಷ್ಟರಲ್ಲಿ ನಿಮ್ಮ ಆಗಮನ ನಮ್ಮ ಮನೆಯಂಗಳದಲ್ಲಾಯಿತು.... ಆಶ್ಚರ್ಯ... ದುಗುಡ.... ಭಯ ಎಲ್ಲವೂ ನನ್ನನಾವರಿಸಿತ್ತು. ಸೊಪ್ಪು ಹೊತ್ತ ದೇಹದ ದಣಿವು ಎಲ್ಲಿ ಹಾರಿತ್ತೋ, ಏನೋ. ನಾಲ್ಕೈದು ಪರಿಚಿತ ವಿದ್ಯಾರ್ಥಿಮಿತ್ರರು ನಿಮ್ಮ ಜೊತೆಗಿದ್ದರು. ಕೈಯಲ್ಲಿ ಕೋಲು ಮಿನುಗುತ್ತಿತ್ತು. ನಿಮ್ಮ ನೋಡಿದ ನಾನು ಅದ್ಧೇಗೆ ಒಳ ಓಡಿದೇನೋ.... (ಈಗ ನಗು ಬರುತ್ತದೆ.) ಅಪ್ಪ ನಿಮ್ಮನ್ನು ಒಳ ಕರೆದು ಹಾಲು ಕಾಯಿಸಿಕೊಟ್ಟಿದ್ದು ನೆನಪಿದೆ. ನೀವು ನನ್ನಪ್ಪನ ಹತ್ತಿರ ಏನೇನೋ ಮಾತನಾಡಿದ್ರಿ, ಹತ್ತು ನಿಮಿಷ ಥರಥರ ನಡುಗುತ್ತಲೇ ನಿಂತ ನನ್ನನ್ನು, ಅವ್ವ ಜೋರಾಗಿ ಕರೆದಳು. ನಾನು ನಡುಗುತ್ತಲೇ ನಿಮ್ಮೆದುರು ಬಂದು ನಿಂತೆ. ನಾನು ತಪ್ಪದೇ ಶಾಲೆಗೆ ಹೋಗಬೇಕೆಂಬ ವಿಷಯ ತೀರ್ಮಾನವಾಯ್ತು. ಆ ದಿನ, ನಿಮ್ಮ ಮುಖದಲ್ಲಿ ಮಂದಹಾಸ, ಗೆಲುವು ಸಾಧಿಸಿದ ಆತ್ಮವಿಶ್ವಾಸ ತುಳುಕುತ್ತಿತ್ತು.

ಹೀಗೆ, ನನ್ನ ವಿದ್ಯೆ ಮಧ್ಯದಾರಿಯಲ್ಲಿ ಕೊನೆಗೊಳ್ಳುತ್ತದೆ ಎನ್ನುವ ಹಂತದಲ್ಲಿ ನಮ್ಮನೆಗೇ ಬಂದು, ನನ್ನ ಕುಂಟುವ ವಿದ್ಯೆಗೆ ನೀರುಣಿಸಿ ತಂಪೆರೆದವರು ನೀವು.

ಅಂದು ಹೇಳದಿದ್ದ, ಹೇಳಲಿಕ್ಕೂ ಬುದ್ಧಿ ತಿಳಿಯದ, ಕೃತಜ್ಞತೆಯ, ಅಭಿಮಾನದ, ಅಕ್ಕರೆಯ ವಿಷಯಗಳನ್ನು ಈ ದೋಣಿಯ ಮೂಲಕ ಹರಿಯಬಿಡುತ್ತಿದ್ದೇನೆ, ತಲುಪಿಯೇ ತಲುಪುತ್ತದೆ ಎಂಬ ನಿರೀಕ್ಷೆಯಲ್ಲಿ......

ಹೊಸನಗರ (ತಾ), ಶಿವಮೊಗ್ಗ (ಪೋ)-577 518 ಸೀತಾರಾಮ್ ಕಾರಗಡಿ



# ನಿಮ್ಮ 'ಹೈಸ್ಕೂಲ್ ವಾಹಿನಿ'ಯ ಪುಟ್ಟ ಹನಿ

ಪ್ರೀತಿಯ ರಗಟೆ ಸರ್,

ಹೃತ್ಪೂರ್ವಕ ವಂದನೆಗಳು.

ನಾನು ನಿಮ್ಮಿಂದ ದೂರಾಗಿ ಸುಮಾರು ಒಂದು ದಶಕ ಸಮೀಪಿಸುತ್ತಲಿದೆ. ನಿಮ್ಮ ಹೈಸ್ಕೂಲ್ ವಾಹಿನಿಯಲ್ಲಿ ನನ್ನಂಥ ಸಾವಿರಾರು ವಿದ್ಯಾರ್ಥಿಗಳು ಅಧ್ಯಯನಗೈದು, ಮುಂದಕ್ಕೆ ಹರಿದುಹೋಗಿದ್ದಾರೆ. ಅಂತಹದರಲ್ಲಿ, ನನ್ನಂತಹ ಪುಟ್ಟ ವಾಃಕಣವೆಲ್ಲಿ ನಿಮ್ಮ ಗಮನಕ್ಕೆ ಬಂದೀತು? ಆದರೆ ನೀವು ಮಾತ್ರ, ನನ್ನ ದೃಷ್ಟಿಯಲ್ಲಿ, ಎಂದೆಂದೂ ಆರಾಧಿಸಲ್ಪಡುವ ದಿವ್ಯಮೂರ್ತಿ.

ಬೀದರಿನ ಚಿದಂಬರಾಶ್ರಮದ ಹೈಸ್ಕೂಲ್‌ನಲ್ಲಿ, ಎಂಟರಿಂದ ಹತ್ತನೇ ತರಗತಿವರೆಗೂ ನಿಮ್ಮ ಸಾನಿಧ್ಯದಲ್ಲಿ ಪಳಗಿದ ವಿದ್ಯಾರ್ಥಿ ನಾನು. 'ರಗಟೆ ಸರ್' ಅಂದರೆ ನಮ್ಮಲ್ಲಿ ಎಲ್ಲಿಲ್ಲದ ಆದರ. ಅದರಲ್ಲೂ ನೀವು ಹೇಳುವ ಹಿಂದೀ ವಿಷಯವೆಂದರೆ, ಕೇಳಲು ಹೊಸ ಹುಮ್ಮಸ್ಸು ಉಕ್ಕಿ ಬರುತಿತ್ತು. ನೀವು ತರಗತಿಯಲ್ಲಿ ಹೇಳಿಕೊಡುವ ಪಾಠ ನಮಗೆಲ್ಲ ಸದಾ ಆದರ್ಶಪ್ರಾಯವಾಗಿದ್ದವು. ನಮ್ಮ ಬದುಕಲ್ಲಿದ್ದ ತಿಮಿರನ್ನು ಅಳಿಸುವ ಹೊಂದೀವಿಗೆಯಂತಾಗಿದ್ದವು.

ಸಂತ ಕಬೀರದಾಸ. ತುಳಸಿದಾಸ, ಮೀರಾಬಾಯಿ, ಸೂರದಾಸರ 'ದೋಹೆ'ಗಳ ಪಾಠ ಮಾಡುವಾಗ, ದೋಹೆಯ ಒಂದೊಂದು 'ಪದ'ದ ವಿಭಿನ್ನ ಅರ್ಥ ತಿಳಿಸಿ, ಆಗಮಿಕ ಮತ್ತು ಲೌಕಿಕ ಬದುಕಿನ ಮರ್ಮ ತಿಳಿಸಲು ನೀವು ಹೇಳುವ ಕಥೆಗಳು ಹೃದಯಸ್ಪರ್ಶಿಯಾಗಿರುತ್ತಿದ್ದವು. ನಮ್ಮಲ್ಲಿ ಆಧ್ಯಾತ್ಮಿಕ ಮನೋಭಾವನೆ ಬೆಳೆಸುವಲ್ಲಿ ಪ್ರೇರಣೆ ನೀಡುತ್ತಿದ್ದವು.

ನನ್ನ ಸಹಧ್ಯಾಯಿ ಸ್ನೇಹಿತರಾದ ವಿನಾಯಕ, ಮಂಜು, ಕಲ್ಯಾಣಿ ಹಾಗೂ ನನ್ನನ್ನು ನೀವು ಯಾವತ್ತೂ ಆತ್ಮೀಯವಾಗಿ ಬೈಯ್ಯುತ್ತಿದ್ದುದು ನೆನೆದರೆ, ಇನ್ನೂ ನಿಮ್ಮ ಸನಿಹದಲ್ಲಿದ್ದ ಅನುಭವ ನನಗೆ. ನಿಮ್ಮ ಧ್ವನಿ, ನಿಮ್ಮ ಶೈಲಿ ಎಲ್ಲವೂ ನನ್ನ ಹೃನ್ಮನ ತುಂಬಿವೆ. ಸರ್.... ಒಮ್ಮೆ ನಾನು 'ಮೇರಾ ನಯಾ ಬಚ್‌ಪನ್' ಕವನ ಕಂಠಪಾಠ ಮಾಡದಿದ್ದಾಗ, ನೀವು, 'ಏನ್ಲೇ, ಬರ್ತಾ ಬರ್ತಾ, ರಾಯರ ಕುದುರೆ ಕತ್ತೆಯಾಗಿತ್ತಂತೆ' ಎಂದದ್ದು, ಈಗಲೂ, ನಾನು ತಪ್ಪು ಮಾಡಿದಾಗಲೆಲ್ಲ ಜ್ಞಾಪಕಕ್ಕೆ ಬರುತ್ತದೆ.

ನಾನು ಹತ್ತನೇ ತರಗತಿಯಲ್ಲಿದ್ದಾಗ, ನಮಗೆ ಬೀಳ್ಕೊಡುಗೆ ಸಮಾರಂಭ ಏರ್ಪಡಿಸಿದ್ದರು. ಅಂದು ನೀವು, ಭಾಷಣ ಮಾಡುವಾಗ, ಮಧ್ಯದಲ್ಲಿ ಕಣ್ತುಂಬಿ, ಇಡೀ ತರಗತಿಗೆ ಸ್ತುತಿಸಿ, ನಮಗೆ ಸಂಬೋಧಿಸುವಾಗ 'ಲೇ' ಎಂಬ ಪದದಲ್ಲಿ ಅತೀ ಆತ್ಮೀಯತೆ ಸೇರಿದೆ ಎಂದು ಹೇಳುವುದರೊಂದಿಗೆ ನಿಮ್ಮ ಮಾತು ಮುಗಿಸಿದಾಗ ನನ್ನ ಮೈಮನ ನವಿರೆದ್ದಿತು.

ಸರ್, ನಿಮ್ಮೊಂದಿಗಿನ ಒಂದೆರಡು ನೆನಪು ತೇಲಿಬಿಟ್ಟಿರುವೆ. ನಿಮ್ಮ ತಟಕ್ಕೆ ಬಂದರೆ ನನ್ನಲ್ಲೂ ಕೊಂಚ ತೃಪ್ತಿ.

ಗಡಿಗೌಡಗಾಂವ-585 416, ಬಸವಕಲ್ಯಾಣ ತಾಲ್ಲೂಕು

ಬಸವರಾಜ ಡಿ.ಬಿರಾದಾರ



# ದೇವರ ಹಿಪ್ಪರಣಿಯಿಂದ ಗುಜರಾತ್‌ತನಕ

ಪೂಜ್ಯ ಬಥಕುಣಕಿ ಗುರುಗಳಿಗೆ,

ನಿಮ್ಮ ಶಿಷ್ಯೆ ಕಾವೇರಿ ನಾಯಕ ಮಾಡುವ ನಮಸ್ಕಾರ ಮತ್ತು ಸವಿನೆನಹುಗಳು.
ನಾನು, ದೇವರ ಹಿಪ್ಪರಣಿಯ ಕನ್ನಡ ಶಾಲೆಯಲ್ಲಿ, ಅದೇ ಆಗ 5ನೇ ಕ್ಲಾಸಿನಲ್ಲಿ ಕಾಲಿರಿಸಿದ್ದೆ. ಆ ವೇಳೆಗೆ ನೀವು ಅಲ್ಲಿಗೆ ಮುಖ್ಯ ಗುರುಗಳಾಗಿ ಬಂದಿದ್ದಿರಿ. ಆಗ ನೀವಲ್ಲಿಗೆ ಬಂದದ್ದು ನನ್ನ ಪುಣ್ಯವೇ ಸರಿ. ಯಾಕೆಂದರೆ, ನಾನು 5ನೇ ಕ್ಲಾಸಿನಲ್ಲಿ ಓದುತ್ತಿದ್ದರೂ, ನನಗಾಗ ಮಗ್ಗಿ ಹೇಳಲು ಬರುತ್ತಿರಲಿಲ್ಲ. ಅಷ್ಟೇ ಅಲ್ಲ, ಕೂಡುವ ಮತ್ತು ಕಳೆಯುವ ಲೆಕ್ಕ ಸಹ ಬರುತ್ತಿರಲಿಲ್ಲ. ಹೀಗಾಗಿ, ನನ್ನ ಕೆಲವು ಗೆಳತಿಯರು ನನ್ನನ್ನು ನೋಡಿ ನಗುತ್ತಿದ್ದರು.

ಮುಂದೆ, ನನಗೊಬ್ಬಳಿಗೇ ಅಲ್ಲ, ನನ್ನಂಥ ಅನೇಕ ದಡ್ಡ ವಿದ್ಯಾರ್ಥಿನಿಯರನ್ನು ಎಲ್ಲರಿಗಿಂತ ಮೊದಲ ಸಾಲಿನಲ್ಲಿ ಕೂಡಿಸಿಕೊಂಡು ಗಣಿತ ಹೇಳಿಕೊಟ್ಟಿರಿ. ಜಾಣರಿಗೆ ಕಲಿಸಿ ಮುಂದೆ ತರುವುದು ಮಹತ್ವವಲ್ಲ. ದಡ್ಡರನ್ನು ಜಾಣರನ್ನಾಗಿಸಿ, ಅವರು ಮುಂದೆ ಬರುವಂತೆ ಮಾಡಿದ ನಿಮ್ಮ ಕಾರ್ಯ ನಿಜವಾಗಿಯೂ ಶ್ಲಾಘನೀಯ.

ನೀವು ಹೇಳಿಕೊಟ್ಟ ಅಭ್ಯಾಸದ ಫಲವಾಗಿ, ಮುಂದೆ ನಾನು ಪ್ರತಿಯೊಂದು ಕ್ಲಾಸಿನಲ್ಲಿ ಗಣಿತದಲ್ಲಿ ಹೆಚ್ಚು ಅಂಕಗಳನ್ನು ಗಳಿಸಿದ್ದಲ್ಲದೇ, ಶಾಲೆಗೆ ಮೊದಲ ಸ್ಥಾನ ಪಡೆದು ಪಾಸಾಗುವಂತಾಯಿತು. ನಮ್ಮ ಶಾಲೆಯಲ್ಲಿ 7ನೇ ಕ್ಲಾಸಿನಲ್ಲಿ 1,2, ಮತ್ತು 3ನೇ ರ‍್ಯಾಂಕ್ ಪಡೆದವರನ್ನು ಭಾರತ ಸರ್ಕಾರ ಗ್ರಾಮೀಣ ವಿದ್ಯಾರ್ಥಿಗಳಿಗಾಗಿ ನಡೆಸುತ್ತಿದ್ದ ಶಿಷ್ಯವೇತನ ಪರೀಕ್ಷೆಗೆ ಕಳುಹಿಸಿದಿರಿ. ಅಲ್ಲಿಯೂ ಉತ್ತೀರ್ಣಳಾದ ನನಗೆ, ಪಿ.ಯು.ಸಿ. 2 ವರ್ಷಗಳವರೆಗೆ ಶಿಷ್ಯವೇತನ ದೊರೆತಾಗ ನಾನು ಸ್ಮರಿಸಿಕೊಂಡಿದ್ದು ನಿಮ್ಮನ್ನು, ನೀವು ನೀಡಿದ ವಿದ್ಯಾದಾನವನ್ನು.

ಮುಂದೆ ನಾನು 10ನೇ ಕ್ಲಾಸಿನಲ್ಲಿರುವಾಗಲೇ ನೀವು ರಿಟೈರ್ಡ್ ಆಗಿ ನಿಮ್ಮ ಊರಿಗೆ ಹೋದಿರಿ. ನಂತರ ನಾನು ನಿಮ್ಮನ್ನು ಭೆಟ್ಟಿಯಾಗಲೇ ಇಲ್ಲ. ಇಂದು ನಾನು ಎಂ.ಎ. ಓದುತ್ತಿದ್ದು, ಮದುವೆಯಾಗಿ ಗುಜರಾತಿನಲ್ಲಿ ವಾಸಿಸುತ್ತಿದ್ದರೂ ಸಹ, ನನ್ನ ವಿದ್ಯೆಗೆ, ವಿದ್ಯಾರ್ಥಿ ಜೀವನಕ್ಕೆ ಭದ್ರ ಬುನಾದಿ ಹಾಕಿಕೊಟ್ಟ ನಿಮ್ಮನ್ನು ಮಾತ್ರ ಸದಾ ನೆನಪಿಸಿಕೊಳ್ಳುತ್ತಿರುತ್ತೇನೆ.

ಈಗ ತಾವು ಯಾವ ಊರಿನಲ್ಲಿ ಇದ್ದಿರೋ, ಏನೋ, ಒಂದೂ ಗೊತ್ತಿಲ್ಲ. ಇದು ನಿಮ್ಮನ್ನು ತಲುಪಲಿ, ನನ್ನ ಹೃತ್ಪೂರ್ವಕ ನಮಸ್ಕಾರಗಳನ್ನು ನೀವು ಸ್ವೀಕರಿಸುವಂತಾಗಲಿ ಎಂದು ಆಶಿಸುತ್ತ ಪತ್ರ ಮುಗಿಸುವೆ.



ಸಾ.ಕಾವೇರಿ. ನಾಯಕ
ಎ.ಜಿ. ದೇಶಪಾಂಡೆ ಹೌಸ್, ಪೋಸ್ಟ್ ಬಾಗಲಕೋಟೆ

# ಅಗಲಿದ ಆತ್ಮೀಯ ಚೇತನ





ಮಾನ್ಯ ರಾ.ಯ. ಧಾರವಾಡಕರ ಸರ್,

ನಾನು ಹಳ್ಳಿಗಾಡಿನಲ್ಲಿ, ಕುಂಟುತ್ತ ಓದಿ, ಬಿ.ಎ. ಭಾಗ-1ರ ಬಾಹ್ಯ ಪರೀಕ್ಷೆಯಲ್ಲಿ ನೂರಕ್ಕೆ ಮೂವತ್ತರಷ್ಟು ಮಾರ್ಕು ಪಡೆದು, ಮುಂದಿನ ಓದಿಗೆ ಧಾರವಾಡಕ್ಕೆ ಬಂದಾಗ, ಯಾವ ಘನಂದಾರಿ ಕಾಲೇಜುಗಳಲ್ಲಿಯೂ ಪ್ರವೇಶ ಸಿಗದಾದಾಗ, ಅತ್ತೂ-ಕರೆದೂ ನಿಮ್ಮನ್ನ ಬೇಡಿಕೊಂಡಾಗ, ನೀವು ನನಗೆ ಪ್ರವೇಶ ನೀಡಿದ್ದಿರಿ.

ಹಳ್ಳಿಯಲ್ಲಿ, ಅನೇಕ ಅನಾನುಕೂಲಗಳ ಮಧ್ಯೆಯೂ, ಬಾಹ್ಯ ಪರೀಕ್ಷೆಯನ್ನ ಇಂಗ್ಲಿಷ್ ಮಾಧ್ಯಮದಲ್ಲಿ ಓದಿ ಪಾಸಾಗಿದ್ದ ನಾನು, ಕಾಲೇಜು ಸೇರಿದ ತಕ್ಷಣ, ಹಸಿರು ಕಂಡ ಜಾನವಾರದಂತೆ ಓದಿ, ಇಡೀ ಕಾಲೇಜಗೆ ಬಿ.ಎ. ಭಾಗ IIರಲ್ಲಿ ಪ್ರಥಮಸ್ಥಾನ ಪಡೆದೆ. ಆಗ ನೀವು ನನ್ನನ್ನ ನಿಮ್ಮ ಚೇಂಬರಿಗೆ ಕರೆಸಿದಿರಿ. ಮತ್ತು 'ಬಿ.ಎ. ಅಂತಿಮ'ಕ್ಕಾಗಿ ಚೆನ್ನಾಗಿ ಓದಲು ಹೇಳಿದಿರಿ. ಅಂದಿನಿಂದಲೇ ನನಗೆ ನಿಮ್ಮ ಜತೆ ಹೆಚ್ಚಿನ ಸಲುಗೆ ಬೆಳೆಯಿತು. ನಾನು ಹೆಚ್ಚಿನ ಓದಿಗಾಗಿ ಹಂಬಲಿಸುತ್ತಿರುವುದನ್ನು ಅರಿತ ನೀವು, ನಿಮ್ಮ ಮನೆಗೆ ಯಾವಾಗ ಬೇಕಾದರೂ ಬರಲು ನನಗೆ ತಿಳಿಸಿದಿರಿ. ನಾನು, ನೀವು 'ಬಿ.ಎ. ಅಂತಿಮ'ದಲ್ಲಿ ಕಲಿಸುತ್ತಿದ್ದ 'ಕೇಶಿರಾಜನ ಶಬ್ದಮಣಿ ದರ್ಪಣ'ವನ್ನು ಅತ್ಯಂತ ಆಸ್ಥೆಯಿಂದ ಅಭ್ಯಸಿಸುತ್ತಿದ್ದೆ. ಅದೇ ಸಮಯದಲ್ಲಿ, ನಿಮ್ಮ ಪಿ.ಎಚ್.ಡಿ. ಮಹಾಪ್ರಬಂಧ ಸಿದ್ಧಗೊಂಡಾಗ, ನಾನು, ಅದರಲ್ಲಿ ನಿಮ್ಮ ಒಂದು ದಾಖಲೆಯನ್ನು ತಪ್ಪೆಂದು ಸಿದ್ಧಪಡಿಸಿದಾಗ, ನೀವೆಷ್ಟು ಪ್ರಾಂಜಲವಾಗಿ ಒಪ್ಪಿಕೊಂಡಿರಿ. ಅದನ್ನು ತಕ್ಷಣ ಮಾರ್ಪಾಡುಗೊಳಿಸಿದಿರಿ.

ನಾನು ಬಿ.ಎ. ಅಂತಿಮ ಪರೀಕ್ಷೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಮೂರನೇ ಸ್ಥಾನ ಪಡೆದೆ. ನಿಮಗೆ ಬಹಳ ಸಂತಸವಾಯ್ತು. ಆದರ ನನ್ನದೇ ದುರ್ದೈವ ಎನ್ನಬೇಕು, ನಾನು ಎಂ.ಎ. ಅಂತಿಮ ಪರೀಕ್ಷೆಯಲ್ಲಿ ದ್ವಿತೀಯ ದರ್ಜೆಯಲ್ಲಿ ಪಾಸಾದೆ. ನಿರುದ್ಯೋಗಿಯಾದೆ. ಆಗೆಲ್ಲ ನಿಮ್ಮ ಸಲಹೆ ಇದ್ದೇ ಇತ್ತು.

ನೀವು, 'ಕರ್ನಾಟಕ ಆಡಳಿತ ಭಾಷಾ ಆಯೋಗದ' ಸದಸ್ಯರಾಗಿ ಬೆಂಗಳೂರಿನಲ್ಲಿ ಇದ್ದಾಗಲೂ ಸಹ, ನಿಮ್ಮಿಂದ ನನಗೆ ಸಮಾಧಾನಕರ ಪತ್ರಗಳು ಬರುತ್ತಿದ್ದವು. ನಾನು ಅದೇ ಸಮಯದಲ್ಲಿ ಕನ್ನಡದ ಮೊದಲ ನಾಟಕ, 'ಮಿತ್ರ ವಿಂದಾ ಗೋವಿಂದ' ಕುರಿತು ಬರೆದ ಲೇಖನವನ್ನ ನೀವು ಎಲ್ಲಿಯೋ ಓದಿ, ನನಗೊಂದು ಪತ್ರ ಬರೆದಿದ್ದಿರಿ.

ಕಡೆಗೆ, ನಾನು ಕಂದಾಯ ಇಲಾಖೆ ಸೇರಿದೆ. ನನ್ನ ಕಚೇರಿಯ ಕೆಲಸದಲ್ಲಿ ಎಲ್ಲವನ್ನೂ ಮರೆತೆ. ನಿಮ್ಮನ್ನೂ ಸಹ! ಸುಮಾರು ಹನ್ನೆರಡು ವರ್ಷಗಳು ಕಳೆದ ನಂತರ, ಪರಸ್ಪರ ಭೇಟಿ ಆದರೆ ಎಣ್ಣೆಯಲ್ಲಿ ಮುಖ ನೋಡಬೇಕಾದಷ್ಟು ಸಮಯ ಕಳೆದ ನಂತರ, ನಾನು ಪೂರ್ತಿ ಮರೆತೇಹೋದ ನಂತರ, ನೀವು ನನ್ನ ಮನೆಯನ್ನ ಹುಡುಕಿಕೊಂಡು, ನನ್ನ ಮನೆ ಬಾಗಿಲಿಗೇ ಒಂದು ದಿನ ಬಂದೇ ಬಿಟ್ಟಿರಲ್ಲ! ನನಗೆ ನಂಬಲೇ ಆಗಲಿಲ್ಲ. ಕಣ್ಣಲ್ಲಿ ನೀರು ಬರುವದೊಂದೇ ಬಾಕಿ. ನೀವು ನನ್ನ ಕುಶಲ ಕೇಳಿದಿರಿ. ಹೆಂಡತಿ

ಮಕ್ಕಳನ್ನು ಮಾತನಾಡಿಸಿದಿರಿ, ನಿಮಗೆ ದೀರ್ಘದಂಡ ಹಾಕಿದ ನನ್ನ ಮಕ್ಕಳಿಗೆ, 'ನಿಮ್ಮ ತಂದೆಯಂತೆ ಜಾಣರಾಗಿರಿ. ಆದರೆ ದುರ್ದೈವಿಗಳಾಗದಿರಿ' ಅಂತಾ ಆಶೀರ್ವದಿಸಿದಿರಿ. ನಿಮ್ಮ ದೃಷ್ಟಿಯಲ್ಲಿ ನಾನು ದುರ್ದೈವಿಯೇ ಆಗಿದ್ದೆ. ಕನ್ನಡದ ಪ್ರಾಧ್ಯಾಪಕನಾಗಿ, ನಾನು ಕನ್ನಡದ ಕೆಲಸ ಮಾಡಬಹುದೆಂದು ನೀವು ನಿರೀಕ್ಷಿಸಿದ್ದಿರಿ. ಆದರೆ ನಾನೋ ಒಬ್ಬ ಕಾರಕೂನನಾಗಿ ಕಂದಾಯ ಇಲಾಖೆಯಲ್ಲಿ ಕೊಳೆಯುತ್ತಿದ್ದೆ.

ಮುಂದೆ ಆಕಸ್ಮಿಕವೋ ಎಂಬಂತೆ, ನೀವು ಇಲ್ಲಿಗೇ, ನಿಮ್ಮ ಮಗನ ಮನೆಯಲ್ಲಿ ಇರಬಂದಿರಿ. ಅನಾರೋಗ್ಯದಿಂದ ಹಾಸಿಗೆ ಹಿಡಿದಿರಿ. ನಿಮ್ಮ ಸೇವೆಯನ್ನು ಸಾಧ್ಯವಿದ್ದಷ್ಟೂ ಮಾಡುವ ಭಾಗ್ಯ ನನ್ನದಾಯಿತು. ಆಗಲೇ ನಿಮಗೆ ರಾಜ್ಯೋತ್ಸವ ಪ್ರಶಸ್ತಿ ಬಂದಿತು. ಆ ಕಾರ್ಯಕ್ರಮ ನಿಮ್ಮ ಮನೆಯಲ್ಲಿಯೇ ನಡೆಯಿತು. ಆಗ ತೆಗೆಸಿದ ಭಾವಚಿತ್ರ ಇನ್ನೂ ನನ್ನ ಹತ್ತಿರ ಇದೆ.

ನಿಮ್ಮ ಚೇತನ ಇಂದಿಗೂ ನನ್ನ ದಾರಿದೀಪ!

ನರಗುಂದ ಕಂಪೌಂಡ್ ವಿಸ್ತೀರ್ಣ, ಬಾಗಲಕೋಟೆ **ಚಿದಂಬರ ಇನಾಮದಾರ**

# ಸರ್, ಹೀಗೇಕೆ ಮಾಡಿದಿರಿ?

ಸರ್,

ಬಾಲ್ಯವೆಂದರೆ ಶಾಲೆ, ಆಟ, ಪಾಠ, ಗೆಳೆಯರು ಇದೇ ಒಂದು ಲೋಕವಲ್ಲವೇ? ನಾನೂ ಹಾಗೇ ಈ ಒಂದು ಲೋಕದಲ್ಲೇ ಮುಳುಗಿರುತ್ತಿದ್ದೆ. ಸಾಮಾನ್ಯವಾಗಿ ಯಾರನ್ನೂ ತೀರಾ ಹಚ್ಚಿಕೊಳ್ಳದ, ಯಾರನ್ನೂ ಅತಿಯಾಗಿ ದ್ವೇಷಿಸದ ಸ್ವಭಾವ ನನ್ನದು. ಆದರೂ, ಓದಿನಲ್ಲಿ, ಆಟದಲ್ಲಿ ಒಂದು ಗ್ರೂಪ್ ಇದ್ದೇ ಇತ್ತು. ಹಾಗೆ ಎರಡರಲ್ಲೂ ಜೊತೆಯಾಗಿ ಕೆಲವೇ ಹುಡುಗರಿದ್ದೆವು.

ಆಗಿನ ಒಂದು ವಿಚಿತ್ರವೆಂದರೆ, ಹುಡುಗಿಯರೊಂದಿಗೆ ಮಾತಾಡುತ್ತಿರಲಿಲ್ಲ. ಇದನ್ನೇ ಕೆಲವರು ಸೊಕ್ಕು ಎಂದೂ ಭಾವಿಸಿದ್ದರು. ಅದರಲ್ಲೂ ಒಂದು ಬಗೆಯ ಡೈಲೆಮ್ಮಾ ಇತ್ತು. ಕೆಲವು ಹುಡುಗಿಯರ ತಂದೆ-ತಾಯಿಗಳು, ನನ್ನ ತಂದೆ-ತಾಯಿಗಳಿಗೆ ಪರಿಚಯದವರು. ಆದರೂ, ಆ ಹುಡುಗಿಯರು, ತಮ್ಮ ಮನೆಯವರೊಂದಿಗೆ ನಮ್ಮಲ್ಲಿ ಬಂದಾಗ, ನಾಚಿಕೆ, ಸಂಕೋಚದಿಂದ ನಾನೇ ಮನೆಬಿಟ್ಟು ಹೊರಗಡೆ ಬಂದುಬಿಡುತ್ತಿದ್ದೆ. 'ಅವನ ಮನೆಗೆ ಆ ಹುಡುಗಿ ಬಂದಿದ್ದಳು' ಎಂದು ಕೀಟಲೆಯೂ ನಡೆಯುತ್ತಿತ್ತು. ಈಗ ನೆನೆಸಿಕೊಂಡರೆ, ನಗು ಹಾಗೂ ಸಿಟ್ಟು ಬರುತ್ತದೆ.

ಹೀಗಿರುವಾಗ ಒಂದು ಸಲ ಏನಾಯಿತೆಂದರೆ, ಪೀರಿಯಡ್ ಅಟೆಂಡೆನ್ಸ್ ರೆಜಿಸ್ಟರ್ ಮಾಯವಾಗಿತ್ತು. ಆಗ ನೀವು ಹುಡುಗಿಯೊಬ್ಬಳನ್ನು ಕ್ಲಾಸ್ ಮಾನಿಟರ್ ಮಾಡಿದ್ದಿರಿ. ಪೀರಿಯಡ್ಡೊಂದು ಮುಗಿದು ಇನ್ನೊಂದು ಪ್ರಾರಂಭವಾಗುವಾಗ ಯಾರಾದರೂ ಚಕ್ಕರ್ ಹೊಡೆಯುತ್ತಾರಾ ಎಂದು ಪರೀಕ್ಷಿಸಲು ಅದನ್ನು ಇಡಲಾಗಿತ್ತು. ನಾವುಗಳು, ಯಾವ ಕ್ಲಾಸ್‌ಗೂ ಚಕ್ಕರ್ ಹೊಡೆಯುತ್ತಲೇ ಇರಲಿಲ್ಲವಾದ್ದರಿಂದ, ಆ ಬಗ್ಗೆ ಗಮನ ಕೂಡ ಹರಿಸಿರಲಿಲ್ಲ.

ಒಂದು ದಿನ ಇದ್ದಕ್ಕಿದ್ದಂತೆ ಆ ಅಟೆಂಡೆನ್ಸ್ ರೆಜಿಸ್ಟರ್ ಹಾಜರಾಯ್ತು. ಅದು ಎಲ್ಲಿಗೆ ಹೋಗಿತ್ತು, ಯಾರು ಹೊತ್ತೊಯ್ದಿದ್ದರು, ಮತ್ತೆ ಯಾಕೆ ತಂದಿಟ್ಟರು, ಏನೂ ಗೊತ್ತಾಗಲಿಲ್ಲ. ಮರುದಿನ, ನನ್ನ ಗೆಳೆಯ ಪ್ರಮೋದ್‌ನನ್ನು ಎದ್ದುನಿಲ್ಲಿಸಿದಿರಿ. ಅವನಿಗೆ, 'ಇದೆಲ್ಲಾ ನೀನೇ ಮಾಡಿದ್ದು, ತಪ್ಪು ಒಪ್ಪಿಕೊ' ಎಂದು

ಕ್ಕೆ ಮೇಲೆ ಬೆತ್ತದಿಂದ ಹೊಡೆದಿರಿ. ಆಮೇಲೆ, ಇದ್ದಕ್ಕಿದ್ದಂತೆ, ನನ್ನನ್ನು ಏಳಲು ಹೇಳಿದಿರಿ. ಯಾವಾಗಲೂ ಕ್ಲಾಸಿಗೆ ಮೊದಲ ಸ್ಥಾನದಲ್ಲಿದ್ದ ನಾನು, ಪಾಠ್ಯ ಪ್ರಶ್ನೆಗಳ ಉತ್ತರ ಹೇಳಲು ಮಾತ್ರ ಎದ್ದು ನಿಲ್ಲುತ್ತಿದ್ದೆ. ಈಗ, ಇಂಥ ಸಂದರ್ಭದಲ್ಲಿ ನಿಲ್ಲಿಸಿದ್ದು ದುಃಖವನ್ನುಂಟುಮಾಡಿತ್ತು. ಆಮೇಲೆ, ನೀವು ಪ್ರಮೋದನಿಗೆ ಪ್ರಚೋದನೆ ನನ್ನದೆಂದು ಆರೋಪಿಸಿದಿರಿ. ಇದೆಲ್ಲಾ ನನಗೆ ಒಂದೂ ಅರ್ಥವಾಗುತ್ತಿರಲಿಲ್ಲ. ಏಟು ತಿಂದ ಪ್ರಮೋದ ಹೌದೆಂದು ಒಪ್ಪಿಕೊಂಡ. ನಾನೇ ತಪ್ಪು ದಾರಿ ಹಿಡಿಸುವ ಗುರು ಎಂದು ಜರೆದು, ನನ್ನ ಎಳೆಮನದ ಮೇಲೆ ಬರೆ ಎಳೆದುಬಿಟ್ಟಿರಿ!

ಆನಂತರದ ಘಟನೆಗಳು, ನನ್ನ ಕೆಟ್ಟ ಸಂದೇಹವನ್ನು ಮತ್ತಷ್ಟು ಬಲಪಡಿಸಿದವು. ಆ ನನ್ನ ಗೆಳೆಯ ನಿಮ್ಮ ಜಾತಿಯವನೇ ಆಗಿದ್ದ. ಅವನು ನಿಮ್ಮಲ್ಲಿ ಟ್ಯೂಷನ್‌ಗೂ ಸೇರಿಕೊಂಡ. ಯಾರು ನನ್ನವರು, ಯಾರು ನನ್ನವರಲ್ಲ ಎಂಬ ಪ್ರಶ್ನೆಗೆ ನನ್ನಲ್ಲಿ ಉತ್ತರವೇ ಸಿಗುತ್ತಿರಲಿಲ್ಲ. ಸ್ವಲ್ಪ ದಿನಗಳ ನಂತರ ನಾನೂ ನಿಮ್ಮಲ್ಲಿ ಟ್ಯೂಷನ್‌ಗೆ ಸೇರಿಕೊಂಡೆ. ಆಮೇಲೆ ಕೆಲ ಸಮಯದ ನಂತರ ನಿಲ್ಲಿಸಿದೆ. ನಿಮ್ಮ ಬುದ್ಧಿಶಕ್ತಿಗೆ ನಾನೂ ತಲೆಬಾಗಿದ್ದೆ, ಅಪಾರ ಗೌರವ ಹೊಂದಿದ್ದೆ. ವಿಜ್ಞಾನ, ಸಾಹಿತ್ಯ ಎರಡೂ ಅಪೂರ್ವವಾಗಿ ಮೇಳೈಸಿದ ನಿಮ್ಮಲ್ಲಿ ಇಂಥ ಬುದ್ಧಿ ಏಕೆ ಮನೆ ಮಾಡಿತೊ?

ಹೈಸ್ಕೂಲ್ ಕೊನೆಯ ವರುಷ ನಮ್ಮಲ್ಲಿ, 'ಉತ್ತಮ ವಿದ್ಯಾರ್ಥಿ' ಪ್ರಶಸ್ತಿ ಕೊಡುವ ವಾಡಿಕೆ ಇತ್ತು. ನನ್ನ ಮತ್ತು ಪ್ರಮೋದನ ಹೆಸರು ಚರ್ಚೆಗೆ ಬಂದು, ಕೊನೆಯಲ್ಲಿ ಅವನಿಗೆ ಪ್ರಶಸ್ತಿ ಕೊಡಲಾಗಿತ್ತು. ನಾನು ಹೋಗಿ ಪ್ರಮೋದನನ್ನು ಅಭಿನಂದಿಸಿದ್ದೆ. ಆದರೆ ಅದೇ ಛಲದಲ್ಲಿ ಓದಿ, ಕೇಂದ್ರಕ್ಕೆ ಪ್ರಥಮ ಸ್ಥಾನ ಗಳಿಸಿದೆ.

"ಶಸ್ತ್ರಗಳಿಂದ ಮಾಡಿದ ಗಾಯಗಳೂ ಕಾಲಾಂತರದಲ್ಲಿ ವಾಸಿಯಾಗಬಲ್ಲವು. ಆದರೆ ಮಾತಿನಿಂದ ಮಾಡಿದ ಗಾಯಗಳು ವಾಸಿಯಾಗಲಾರವು" ಎಂದು ಕೇಳಿದ್ದೆ. ಚಿಕ್ಕವಯಸ್ಸಿನಲ್ಲಿ ಗುರುಗಳು (ಶಿಕ್ಷಕರು!) ಎನ್ನಿಸಿಕೊಂಡವರು ಮಾಡುವ ಆಘಾತದಿಂದ ಹೊರಬರಲು ಎಷ್ಟೋ ವರ್ಷಗಳೇ ಬೇಕಾಗುತ್ತವೆ.

ಮಕ್ಕಳ ಭವಿಷ್ಯ ರೂಪಿಸಬೇಕಾದ ನೀವು ಹೀಗೇಕೆ ಮಾಡಿದಿರಿ?

109, ಸಬರಮತಿ ಬ್ರಿಡ್ಜ್, ಇಲವಾಲ, ಮೈಸೂರು

ನರಹರಿ

# ಇಬ್ಬರು ಚಂದ್ರರ ನಡುವೆ ತಣ್ಣನೆ ದಾರಿಯಲ್ಲಿ

ಪ್ರೀತಿಯ ಚಂದ್ರಮ,



ದಿನದ ಧಡಕಿಯ ಸುಸ್ತಿನಲ್ಲೇ ಕಳೆದುಹೋಗುವ ಎಷ್ಟೋ ಸಂಜೆಗಳು ಈಗೀಗ, ನನ್ನ ಪಾಲಿಗೆ ಸಾಮಾನ್ಯವಾಗಿವೆ. ಆದರೆ ನಿನ್ನೆ ಸಂಜೆಯ ಗಳಿಗೆಗಳು ಅಪೂರ್ವ, ಅದ್ಭುತ. ಪ್ರಿಯ ಮಿತ್ರಾ,.... ಏಕಕಾಲಕ್ಕೆ ಇಬ್ಬರು ಚಂದ್ರರನ್ನು ಕಂಡ ನನ್ನ ಸುದೈವಕ್ಕೆ, ಪ್ರಾಯಶಃ, ಎಲ್ಲರೂ ಅಸೂಯೆ ಪಡಬೇಕು! ಸಮೀರವಾಡಿಯಿಂದ ಮಹಾಲಿಂಗಪುರದವರೆಗಿನ ಆ ದಾರಿ, ಆ ರಾತ್ರಿ, ತಣ್ಣನೆಯ ಸೂಸು ಗಾಳಿ, ತೂನೆದಾಡುತ್ತಿದ್ದ ಗಿಡಮರಗಳು ಮತ್ತು ನೀನು...... ನನ್ನ ಅದ್ಭುತ ಗುರುವಿನ ಮಾತುಗಳಿಗೆ ನನ್ನೊಂದಿಗೆ ತಲೆಯಾಡಿಸುತ್ತಲೇ ಇದ್ದಿರಿ ಅಲ್ಲವೇ?



ಹ್ಞಾಂ! 'ಮಾತು ಮತ್ತು ಸಂಗೀತ'ದ ಕುರಿತು ನಮ್ಮ ಸರ್, ಶ್ರೀ ಸಿದ್ಧರಾಜ ಪೂಜಾರಿಯವರು ಆ ಹೈಸ್ಕೂಲಿನ ಕಟ್ಟಡದಲ್ಲಿ, ನಿರರ್ಗಳವಾಗಿ ಮಾತಾಡುತ್ತಲೇ ಇರುವಾಗ, ಬಾನ ಬಯಲಲ್ಲಿ ನಿಂತ ನೀನು, ಒಂದೀಟು ಒಳಗೆ ಇಣುಕುತ್ತ, ಖುಶಿಪಡುತ್ತ, ನನ್ನ ಏಕಾಗ್ರತೆಗೆ ಭಂಗ ತರುತ್ತಿದ್ದೆಯಲ್ಲ. ನನ್ನ ಬಗ್ಗೆ ಹೊಟ್ಟೆಕಿಚ್ಚೇ ನಿನಗೆ? ಎಲ್ಲ ತಲೆದೂಗುವಂತೆ ಮಾತಾಡುವುದೇನು ಸಾಮಾನ್ಯ ಮಾತೇ? ಅದು ನನ್ನ ಅಸಾಮಾನ್ಯ ಗುರುವಿಗೆ ಮಾತ್ರ ಸಾಧ್ಯ. ಅವರ ಹೃದಯದಾಳದಿಂದ ಹೊರಬಿದ್ದ ಒಂದೊಂದು ಮಾತೂ ಚಿರಂಜೀವಿ. ಅಸಂಖ್ಯಾತ ಹೃದಯಗಳಲ್ಲಿ ಮಾರ್ದನಿಗೊಳ್ಳಬಲ್ಲ, ಅನಂತ ಮೌನದಲ್ಲಿ ಲೀನವಾಗುವ ಮಾತುಗಳವು! ಇನ್ನವರ ಸಂಗೀತ, ಅದರ ಚಮತ್ಕಾರ.... ನಿನಗೇನು ಹೇಳಲಿ? ಅದೊಂದು ಹುಚ್ಚು ಹೊಳೆ, ಆ ಸ್ವರಗಳ ಪ್ರವಾಹದಲ್ಲಿ ಎಲ್ಲ ಸ-ಹೃದಯಗಳೂ ಕೊಚ್ಚಿ ಹೋಗಬೇಕು. ಅಂದ ಹಾಗೆ, ನಾನು, ಸಭಾಂಗಣದಿಂದ ಹೊರಬಂದಾಕ್ಷಣ, ನಿನ್ನ ಕಂಡೆ, ನೀನು ಕೂಡ 'ಜನ ಸಮ್ಮೋಹಿನಿ' ರಾಗದ ಅವರದೇ ಗೀತೆ 'ಎಲ್ಲಿ ಹೋದಿರಿ ಮನದ ಓ ಮಧುರ ಭಾವಗಳೇ' ಗುನುಗುನಿಸತೊಡಗಿದ್ದೆಯಲ್ಲವೇ? ನನ್ನ ನೋಡಿ, ಕಣ್ಣು ಮಿಟುಕಿಸಿ ನಕ್ಕು, ಎತ್ತರೆತ್ತರ ಮರಗಳ ನಡುವೆ ಮರೆಯಾದೆ.

ಅದೆಲ್ಲ ಇರಲಿ, ದಾರಿಯಲ್ಲಿ ಸರ್ ನಿನಗೊಂದು ಮಾತು ಹೇಳಿದರು ನೆನಪಿದೆಯಾ? 'ಜಗದ ಜಂಜಡಗಳಲ್ಲೇ ಮುಳುಗಿರುವ ಈ ಜನರ ನಡುವೆ ಹುಟ್ಟಿ, ಬೆಳ್ದಿಂಗಳ ಸೂಸುವ ಚಂದ್ರನೇ ನಿನ್ನದು ವ್ಯರ್ಥ ಪ್ರಯತ್ನ' ಎಂದು.

ನೀನು ಮಾತ್ರ, 'ನಿಮಗೆ, ನಿಮ್ಮಂತಹ ಜೀವಗಳಿಗೆ ಮುದ ನೀಡುತ್ತಿರುವೆನಲ್ಲ, ಈ ರಾತ್ರಿಯ ನೀರವತೆಯಲ್ಲಿ ನಿಮ್ಮ ಮಾತುಗಳಿಗೆ ಕಿವಿಯಾಗಿರುವೆನಲ್ಲ- ಅಷ್ಟೇ ಸಾಕು ನನಗೆ' ಎಂಬಂತೆ ಹಿಂಬಾಲಿಸತೊಡಗಿದೆ. ಬಹುಶಃ ನನ್ನಂತೆಯೇ ನಿನ್ನ ಹೃದಯವೂ ತುಂಬಿ ಬಂದಿತ್ತು.

**ವಿಭಾ ಅರವಿಂದ ತಿರಕಪಡಿ**

**ಮಹಾಲಿಂಗಪುರ**

# ನಮ್ಮ ಹಿಂದಿ ಪಂಡಿತರು

**ಮಾನ್ಯ ಶ್ರೀ ರೇವಣ್ಣಯ್ಯ ಅವರಿಗೆ,**

ನಾನು ನಮ್ಮ ಹಳ್ಳಿಯ ಶಾಲೆಯಲ್ಲಿನ ಓದು ಮುಗಿಸಿ, ಹೈಸ್ಕೂಲಿಗೆ ಸೇರಿದೆ. ನಮ್ಮ ಹಳ್ಳಿಯ ಶಾಲೆಯಲ್ಲಿ ಆಗ ಹಿಂದಿ ಭಾಷೆಯನ್ನು ಹೇಳಿಕೊಡುತ್ತಿರಲಿಲ್ಲ. ಹೈಸ್ಕೂಲಿಗೆ ಸೇರಿದಾಗ ತುಂಬಾ ತೊಂದರೆ ಅನುಭವಿಸಿದೆ. ಹಿಂದಿ ಪಾಠವಿದ್ದಾಗ, ಪ್ರಶ್ನೋತ್ತರ ಸಮಯದಲ್ಲಿ, ಇತರೆ ಹುಡುಗರಿಂದ ಕಪಾಳಕ್ಕೆ ಹೊಡೆಸಿಕೊಳ್ಳುವುದು ಸಾಮಾನ್ಯ ವಿಷಯವಾಯಿತು. ಯಾಕಾದರೂ ಹೈಸ್ಕೂಲು ಸೇರಿದೆನೋ ಎನ್ನುವಷ್ಟು ಮನಸ್ಸು ಉದ್ವೇಗದಿಂದ ಕುದಿಯಿತು.

ನೀವು ತುಂಬಾ ಖಂಡಿತವಾದಿಗಳು. ಆದರೆ ಅಷ್ಟೇ ಒಳ್ಳೆಯವರು. ಹಿಂದಿ ಭಾಷೆ ಸರಿಯಾಗಿ ಬಾರದ ವಿದ್ಯಾರ್ಥಿಗಳನ್ನು, ಮನೆಗೆ ಕರೆಸಿಕೊಂಡು, ಫ್ರೀಯಾಗಿ ಪಾಠ ಹೇಳಿಕೊಟ್ಟಿರಿ. ಮನೆಯಲ್ಲಿ ನಮ್ಮನ್ನೆಲ್ಲಾ, ನಿಮ್ಮ ಮಕ್ಕಳಂತೆಯೇ ತುಂಬಾ ಅಕ್ಕರೆಯಿಂದ ನೋಡಿಕೊಂಡಿರಿ. ಪಾಠ ಮಾಡುವಾಗ ಎಷ್ಟು ಕಠೋರರರೋ, ಪಾಠ ಮುಗಿದಾಗ ಅಷ್ಟೇ ಶಾಂತಿ, ಸಹನೆ ತುಂಬಿರುತಿತ್ತು, ನಿಮ್ಮ ಮುಖದಲ್ಲಿ. ಹೊರಗೆ ಬಂದಾಗ, ಹೆಗಲ ಮೇಲೆ ಕೈ ಹಾಕಿ, ಸ್ನೇಹಿತರಂತೆ ಮಾತನಾಡಿಸುತ್ತಿದ್ದಿರಿ.





ಇಡೀ ತರಗತಿಯಲ್ಲೇ ಹಿಂದಿ ಭಾಷೆಯಲ್ಲಿ ಜಾಣ ವಿದ್ಯಾರ್ಥಿ ಯೆಂದರೆ, ಗೌಡ. ಹಿಂದಿ ತರಗತಿಯಲ್ಲಿ ಅವನಿಂದ ನಾನು ಕಪಾಳಕ್ಕೆ ಹೊಡೆಸಿಕೊಳ್ಳದ ದಿನವೇ ಇಲ್ಲ. ಒಂದು ದಿನ ನೀವು ಪಾಠ ಹೇಳಿ, ವಿದ್ಯಾರ್ಥಿ ಗಳನ್ನು ಪ್ರಶ್ನೆ ಕೇಳಿದಿರಿ. ಗೌಡನ ಸರದಿ ಬಂದಿತು. ತಪ್ಪು ಉತ್ತರ ಹೇಳಿದ. ಆಗ ಗೌಡನ ಪಕ್ಕದಲ್ಲೇ ಇದ್ದ ನನಗೆ ಉತ್ತರ ಹೇಳಲು, ನನ್ನ ಕಡೆ ಬೆಟ್ಟು ಮಾಡಿದಿರಿ. ನಾನು ಸರಿ ಉತ್ತರ ಹೇಳಿದೆ. ನಿಮಗೆ ಸಂತೋಷವಾಗಿ, ''ಎಲೆ ಮೆಣಸಿನ ಕಾಯಿ, ಇಷ್ಟು ದಿನ ಗೌಡನ ಕಡೆಯಿಂದ ಹೊಡೆಸಿ ಕೊಂಡಿದ್ದೆ, ಈಗ ನಿನಗೆ ಛಾನ್ಸ್ ಬಂದಿದೆ. ಚೆನ್ನಾಗಿ ಬಾರಿಸಲೆ'' ಎಂದಿರಿ!

ಶಿವಶರಣಯ್ಯ ನನ್ನ ತರಗತಿಯ ವಿದ್ಯಾರ್ಥಿ. ಅವನು ಒಂದು ವಾರ ತರಗತಿಗೆ ಚಕ್ಕರ್ ಹೊಡೆದಿದ್ದ. ಅಂದು, ಸೋಮವಾರ ಸಾಯಂಕಾಲ, ಕೊನೆಯ ಪಿರೇಡ್ ಹಿಂದಿ. ಶಿವಶರಣಯ್ಯ ತರಗತಿಯ ಬಾಗಿಲಲ್ಲಿ ಬಂದು ನಿಂತ. ಶಿವಶರಣಯ್ಯನ ನಿಕ್ಕರಿನ ಉಬ್ಬಿದ ಜೇಬನ್ನು ನೋಡಿ, ''ಸ್ವಾಮಿ, ನಿನ್ನ ನಿಕ್ಕರಿನ ಜೇಬಿನಲ್ಲಿ ಏನಿದೆ ತೆಗೆ ನೋಡೋಣ'' ಎಂದಿರಿ. ಅವನು ''ಏನಿಲ್ಲ ಸರ್'' ಅಂದ. ಅವನು ಸುಳ್ಳು ಹೇಳಿದ್ದಕ್ಕೆ ಸಿಟ್ಟು ಮಾಡಿಕೊಂಡು, ಅವನ ಕೈ ಹಿಡಿದು ಮುಂದಕ್ಕೆಳೆದು, ಅವನ ನಿಕ್ಕರಿನ ಜೇಬಿಗೆ ಕೈ ಹಾಕಿ ತೆಗೆದೇಬಿಟ್ಟಿರಿ. ಒಂದು ಕಟ್ಟು ಬೀಡಿ, ಒಂದು ಕಡ್ಡಿ ಪೊಟ್ಟಣ!

ಕಟ್ಟಿನಿಂದ ಒಂದು ಬೀಡಿಯನ್ನು ತೆಗೆದು, ಕಡ್ಡಿ ಪೊಟ್ಟಣವನ್ನು ಶಿವಶರಣಯ್ಯನ ಕೈಗೆ ಕೊಟ್ಟು, ಬೀಡಿ ಹಚ್ಚುವಂತೆ ಹೇಳಿದಿರಿ. ಅಖಂಡ ಧೈರ್ಯದಿಂದ ಶಿವಶರಣಯ್ಯ ಬೀಡಿಗೆ ಬೆಂಕಿ ಹಚ್ಚೇ ಬಿಟ್ಟ. 'ಶಿವಶರಣಯ್ಯ ಸತ್ತ' ಅಂದುಕೊಂಡೆವು ನಾವು.

ನೀವು ಶಿವಶರಣಯ್ಯನಿಗೆ ಬೈಯಲಿಲ್ಲ, ಬಡಿಯಲಿಲ್ಲ. ''ಶಹಬ್ಬಾಸ್ ಶಿವಶರಣಯ್ಯ, ಶಹಬ್ಬಾಸ್'' ಎಂದು ಬಲವಾಗಿ ಟೇಬಲ್ ಕುಟ್ಟಿದಿರಿ. ಶಿವಶರಣಯ್ಯ ಹೆದರಿಬಿಟ್ಟ. ನಿಕ್ಕರೆಲ್ಲಾ ನೆಂದು, ಜಲ, ಬಳ ಬಳ ನೆಲಕ್ಕಿಳಿಯಿತು. ನಡುಗುತ್ತಾ ನಿಂತುಬಿಟ್ಟ. ಮಾತನಾಡಲಿಕ್ಕೆ ಬಾಯಿಯೇ ಬರಲಿಲ್ಲ. ಬಾಯಿಂದ ಒಂದೇ ಸಲ ಬಂದದ್ದು ಹೊಗೆ ಮಾತ್ರ, ಅದರ ಜೊತೆಗೆ ಬೀಡಿ ಕೆಳಗೆ ಬಿತ್ತು.

ನಿಮ್ಮಂಥವರನ್ನು ಇಂದಿನ ವಾತಾವರಣದಲ್ಲಿ ಭೂತಗನ್ನಡಿ ಹಚ್ಚಿ ಹುಡುಕಿದರೂ ಸಿಗುವುದು ತುಂಬಾ ವಿರಳ.

ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್, ನಿ. ಕೊಟ್ಟೂರು

ಎಂ. ಈಶ್ವರಪ್ಪ ಮತ್ತಿಹಳ್ಳಿ

# ನಿಮ್ಮ ಮಾತು ಇನ್ನಷ್ಟು ಕೇಳಿಸಿಕೊಂಡಿದ್ದರೆ...

ಪ್ರೀತಿಯ ಎಲ್.ಪಿ. ಸರ್‌ಗೆ,

ಎಂಟು ವರ್ಷಗಳ ಹಿಂದೆ, ಪಿ.ಇ.ಎಸ್. ಕಾಲೇಜಿನಲ್ಲಿ ನಾನು, ಗಿರಿ, ಸೂರಿ, ಸತೀಶ, ಸೋಮ ಮತ್ತು ಮಧು ನಿಮ್ಮ ಶಿಷ್ಯರಾಗಿದ್ದೆವು.



ನಾನು ನಿಮ್ಮನ್ನು ಮೊಟ್ಟಮೊದಲ ಬಾರಿಗೆ ನೋಡಿದ್ದು, ಕಾಲೇಜಿನ ಪ್ರಾರಂಭೋತ್ಸವದ ದಿನ. ಪ್ರಿನ್ಸಿಪಾಲರು ನಿಮ್ಮನ್ನು ಪರಿಚಯಿಸಿದಾಗ, ವಿನಯವಾಗಿ ಕೈಮುಗಿದು ನೀವು ಪರಿಚಯಿಸಿಕೊಂಡಿರಿ. ಅದಾದ ಎರಡನೇ ದಿನಕ್ಕೇ, ನೀವು ನಮ್ಮ ಕ್ಲಾಸಿಗೇ ಬಂದಿರಿ. ಬಂದ ಮೊದಲ ದಿನವೇ ಇಂಪ್ರೆಸ್ಸಿವ್ ಆಗಿದ್ದಿರಿ. ಇಡೀ ಕ್ಲಾಸನ್ನು ಪರಿಚಯ ಮಾಡಿಕೊಂಡಿರಿ. ಇಡೀ ಕ್ಲಾಸಿಗೆ ಗ್ರಾಮೀಣ ಪ್ರದೇಶದಿಂದ ಬಂದ ಹುಡುಗ ನಾನಾಗಿದ್ದೆ. ಬಹುಶಃ ಅದಕ್ಕೇ ಇರಬೇಕು, ಈ ಹಳ್ಳಿ ಹುಡುಗನನ್ನು ಬಹಳ ಬೇಗ ರಿಸೀವ್ ಮಾಡಿಕೊಂಡಿರಿ. ನನಗೆ ಇಂಗ್ಲಿಷ್‌ನ ಬಗ್ಗೆ ಇನ್‌ಫಿರೀಯಾರಿಟಿ ಕಾಂಪ್ಲೆಕ್ಸ್ ಇತ್ತು. ನಿಮಗದು ಅರ್ಥವಾಗಿತ್ತು. ಅಂಥದ್ದೊಂದು ಭಾಷಾಪರಿಮಿತಿಯಿಂದ, ನನ್ನೊಂದಿಗೆ, ಹಲವಾರು ಹುಡುಗರನ್ನು ಹೊರಗೆ ತಂದಿರಿ. ಆವಾಗ ನಾನು ತೀರಾ ಅಮಾಯಕನಾಗಿದ್ದೆ.

ಮುಂದೆ ಕೆಲವೇ ದಿನಗಳಲ್ಲಿ, ಮೇಲಿನ ಎಲ್ಲರೂ ಸೇರಿಕೊಂಡೆವು. ಈ ಬಾರಿ ಅಮಾಯಕತ್ವದ ಜಾಗದಲ್ಲಿ ಬೇರೊಂದು ಬಂದು ನೆಲೆಸಿತ್ತು. ಒಂದೇ ವರ್ಷದಲ್ಲಿ, ನಮ್ಮದೊಂದು ಚಿಕ್ಕ ಗ್ಯಾಂಗ್, ನಿಬ್ಬೆರಗಾಗುವಷ್ಟು ಬೆಳೆದುಬಿಟ್ಟಿತ್ತು. ನಮ್ಮ ವರ್ತನೆಗಳು ಬದಲಾಗಿದ್ದವು. ಇಡೀ ಕಾಲೇಜಿನ ರಂಪಾಟಗಳಿಗೆ ಕಾರಣರಾಗಿಬಿಡುತ್ತಿದ್ದೆವು. ಆ ಹೊತ್ತು, ನೀವೇ, ತಮ್ಮಂದಿರಂತೆ ಕುಳ್ಳಿರಿಸಿ, ನಮಗೆ ಬುದ್ಧಿ ಹೇಳಿದಿರಿ. ಹೇಳುವ ಸಹನೆ ನಿಮಗಿತ್ತಾದರೂ, ಕೇಳುವ ಸಹನೆ ನಮಗೆ ಇರಲೇ ಇಲ್ಲ. ನಾವ್ಯಾರೂ ನಿಮ್ಮ ಮಾತು ಕೇಳಲೇ ಇಲ್ಲ. ಆದರೂ ನೀವು ನಮ್ಮ ಕೈಬಿಡಲಿಲ್ಲ. ಕೈ ಹಿಡಿದು ನಡೆಸಿದರೂ ನಡೆಯದೇ ಹೋದವರು ನಾವೇ. ಅಷ್ಟೊತ್ತಿಗಾಗಲೇ ಪ್ರತಿ ಕ್ಲಾಸ್‌ನಿಂದ ನಮ್ಮ ಮೇಲೆ ದೂರು ಹೋಗುತಿತ್ತು, ತಪ್ಪದೇ. ಎಲ್ಲ ಕ್ಲಾಸ್‌ನಲ್ಲೂ ಕಂಟ್ರೋಲ್ ಮಾಡಲು ಅಸಾಧ್ಯವೆನಿಸುವ ಕೋಪ ತರಿಸಿಬಿಡುತಿದ್ದೆವು. ಒಮ್ಮೊಮ್ಮೆ ನಿಮಗೂ ಹಾಗೆ ಮಾಡಿಬಿಡುತ್ತಿದ್ದೆವು. ಅಷ್ಟರಲ್ಲೇ ಆದ ಘಟನೆ. ಆವತ್ತು ನೀವು ಲೈಬ್ರರಿಯಿಂದ ಬರುತ್ತಿದ್ದಿರಿ, ನಾನು ಮತ್ತು ಸೂರಿ ಲೈಬ್ರರಿ ಕಡೆಗೆ ಹೋಗುತ್ತಿದ್ವಿ. ನಮ್ಮನ್ನು ಕರೆದುಕೊಂಡು ಕುವೆಂಪು ಸಭಾಂಗಣದೊಳಗೆ ಹೋದಿರಿ. ಅಲ್ಲಿ ನೀವು ಹೇಳಿದ ಹತ್ತು ನಿಮಿಷದ ಮಾತುಗಳು ನನ್ನನ್ನು, ಸೂರಿಯನ್ನು ಆಳವಾಗಿ ತಟ್ಟಿದವು.



ಮುಂದೆ ನನ್ನನ್ನು ಮತ್ತು ಸೂರಿಯನ್ನು ಬಿಟ್ಟು ಇಡೀ ಗ್ಯಾಂಗ್ ಫೇಲಾಗಿತ್ತು. ಆನಂತರ ನಾನು ನಿಮಗೆ ಸಿಗಲೇ ಇಲ್ಲ. ಒಂದು ವರ್ಷದ ಹಿಂದೆ, ಸೂರಿ ಅಪಘಾತದಲ್ಲಿ ತೀರಿ ಹೋದ ಮಾತು ಕೇಳಿದೆ. ನಿಜಕ್ಕೂ ನಿಮ್ಮ ಮಾತು ಕೇಳಿ ನಾವಿಬ್ಬರು ಬದಲಾಗಿದ್ದೆವು. ಅಂಥದ್ದೊಂದು ತಿರುವು ಕೊಟ್ಟ ನಿಮ್ಮನ್ನು, ಕುವೆಂಪು ಸಭಾಂಗಣವನ್ನು ಯಾವತ್ತಿಗೂ ಮರೆಯಲಾರೆ.

ಮಧು ಸತ್ತು ಹೋದ ದಿನ ನೀವೂ ಬಂದಿದ್ರಿ. ನನಗೆ ಅಳು ತಡೆಯಲಾಗಲೇ ಇಲ್ಲ. ನೀವು ಅಳುತ್ತಿದ್ದಿರಿ. ಆವತ್ತು ನಿಮ್ಮನ್ನು ತಬ್ಬಿಕೊಂಡು ಅತ್ತುಬಿಟ್ಟಿದ್ದೆ. ಅತ್ತು ಅತ್ತು ಕಣ್ಣೀರು ಬತ್ತಿಹೋಗಿತ್ತು. ತೀರಾ ನೀವೇ, ಹೋಗುವಾಗ, ಧೈರ್ಯಹೇಳಲು ಬಂದಿರಿ. ಆದರೆ ನಿಮ್ಮಿಂದ ಏನೂ ಹೇಳಲಾಗಲೇ ಇಲ್ಲ.

ನಿಮ್ಮ ಮಾತು ಇನ್ನಷ್ಟು ಕೇಳಿಸಿಕೊಂಡಿದ್ದರೆ, ಇನ್ನೂ ಚೆನ್ನಾಗಿ ಬದುಕಬಹುದಿತ್ತು. ಇವತ್ತು ಒಬ್ಬೊಬ್ಬರು ಒಂದೊಂದು ದಾರಿಯಲ್ಲಿದ್ದೇವೆ. ಎಡವಿದ್ದು ಎಲ್ಲಿ ಎಂಬುದು ಸ್ಪಷ್ಟವಾಗಿ ಗೊತ್ತು. ಇದೊಂದು ಪತ್ರ ಒಪ್ಪಿಸಿಕೊಳ್ಳಿ.

ನಂ. 29, ಯಾರಂಡಹಳ್ಳಿ, ಆನೇಕಲ್ ತಾಲೂಕು - 562 105

**ಲಕ್ಷ್ಮೀಕಾಂತ್ ಆರ್. ರೆಡ್ಡಿ**

# ಸ್ಮೃತಿ ಪಟಲದಲ್ಲಿ ಹಸಿರಾಗಿ ಉಳಿದ ಮೂರ್ತಿ

**ಪ್ರಿಯ ರಾಮಚಂದ್ರ ಕೋಟಿಮನೆ ಸರ್,**

ನಿಮ್ಮ ಹೆಸರು ರಾಮಚಂದ್ರ ಕೋಟಿಮನೆ ಎಂದಿದ್ದರೂ, ನಿಮ್ಮ ಶಿಷ್ಯಕೋಟಿಗೆಲ್ಲಾ ನೀವು 'ಸಂಸ್ಕೃತ ಮಾಷ್ಟ್ರು' ಎಂದೇ ಪರಿಚಿತ. ಚಿಕ್ಕದೊಂದು ಅನಾರೋಗ್ಯದ ನೆಪ ಹೇಳಿ, ಆಜನ್ಮಪರ್ಯಂತ, ಕಟ್ಟಾ ಬ್ರಹ್ಮಚಾರಿ ಆಗಿ ಉಳಿದ ನೀವು, ನಿಮ್ಮ ಬದುಕನ್ನು ಮೀಸಲಿಟ್ಟಿದ್ದು ವಿದ್ಯಾದಾನಕ್ಕಾಗಿ, ಸಂಸ್ಕೃತದ ಸೇವೆಗಾಗಿ. ಸಂಸ್ಕೃತದಲ್ಲಿ ಪಿ.ಎಚ್.ಡಿ., ಕಾವ್ಯ ಸೃಷ್ಟಿ, ಈಗ ಸಂಸ್ಕೃತ ಗುರುಕುಲದ ಸ್ಥಾಪನೆ.

ಸುಮಾರು ಎರಡು ದಶಕಗಳ ಹಿಂದಿನ ಮಾತು. ಚೆನ್ನೇನಹಳ್ಳಿಯ (ಜನಸೇವಾ ವಿದ್ಯಾಕೇಂದ್ರದ) ಸೂರ್ಯೋದಯದ ಹಿನ್ನೆಲೆಯಲ್ಲಿ, ಎದೆ ಸೆಟೆಸಿ ನಿಂತು, ಕ್ರೌಂಚಿನ ಕಂಠದಲ್ಲಿ ಸುಪ್ರಭಾತ, ಗಾಯತ್ರಿ, ವೇದಘೋಷಗಳನ್ನು ಹೇಳಿಸುತ್ತಿದ್ದ ಹುರಿಮೀಸೆಯ ಆ ಪುಟಾಣಿ ಮೂರ್ತಿ ಇಂದಿಗೂ ನನ್ನ ಸ್ಮೃತಿಪಟಲದಲ್ಲಿ ಅಚ್ಚ ಹಸಿರಾಗಿ ಉಳಿದಿದೆ. ಬ್ರಾಹ್ಮಿ ಮುಹೂರ್ತದಲ್ಲೇ ಎದ್ದು, ತಣ್ಣೀರ ಸ್ನಾನ ಮಾಡಿ, ದೇಶಭಕ್ತಿಯ ಗೀತೆಗಳನ್ನು ಹಾಡುತ್ತ ನೀವು ಬರುತ್ತಿದ್ದರೆ, ನಮ್ಮ ಮೈಯಲ್ಲಿ ಮಿಂಚಿನ ಸಂಚಾರವಾಗುತ್ತಿತ್ತು.

ಎಂದೂ ಮಾಸದ ಮಂದಹಾಸ, ಬತ್ತಲಾರದ ಚಿರಂತನ ಉತ್ಸಾಹ, ತನ್ಮಯಗೊಳಿಸುವ ಪಾಠ ಪ್ರವಚನ, ನಮ್ಮೊಳಗೊಂದಾಗಿ, ನಮ್ಮ ಸಮಸ್ಯೆಗಳನ್ನು ಅರಿತು ಮಾರ್ಗದರ್ಶನ ನೀಡಲು ಮುಂದಾಗುತ್ತಿದ್ದ ಆ ಅಪರಿಮಿತ ವಾತ್ಸಲ್ಯ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ನಮ್ಮನ್ನು ಅದ್ದಿ, ಮುಳುಗಿಸಿ ಏಳಿಸುತ್ತಿದ್ದ ಚಿಂತನಶೀಲತೆ.... 'ಗುರು' ಎಂಬ ಶಬ್ದಕ್ಕೆ ಸಂಪೂರ್ಣ ಅರ್ಥ ಸಿಗುವ ಪರಿಪೂರ್ಣ ವ್ಯಾಖ್ಯಾನ ನಿಮ್ಮ ವ್ಯಕ್ತಿತ್ವ.



ಇಡೀ ಪ್ರಪಂಚವೇ ನಿದ್ರಾದೇವಿಯ ವಶವಾಗಿರುವಾಗ, ಆ ವಿಲಕ್ಷಣ ನೀರವತೆಯಲ್ಲಿ ನೀವು ನಮಗಾಗಿ ಹಾಡುತ್ತಿದ್ದ ಲತಾ ಮಂಗೇಷ್ಕರರ 'ಹೇ ಮಾಲಿಕ್ ತೆರೆ ಬಂಧೆ ಹಂ' ಹಾಡು ನನ್ನ ಕಿವಿಗಳಲ್ಲಿನ್ನೂ ಧ್ವನಿಸುತ್ತಲೇ ಇದೆ. ಹಾಗೆಯೇ ನಿಮ್ಮೊಡನೆ ಕಳೆದ ಆ ಅಮೂಲ್ಯ ದಿನಗಳೂ ಕೂಡ.

**ಕಂಪ್ಲಿ ಅಂಚೆ-583132, ಬಳ್ಳಾರಿ ಜಿಲ್ಲೆ**

**ಬಸಪ್ಪ**

# ಮುದ್ದು ಸುನೀತಾಳ ಹಳೇ ಹಟಮಾರಿತನ!

ಪ್ರೀತಿಯ ಮುಕ್ತಾ,

ನಿಮ್ಮ ಮಗಳು ಸುನೀತಾ ನನ್ನನ್ನು ಪ್ರೀತಿಯಿಂದ ಕರೆಯುತ್ತಿದ್ದಂತೆ, ಅವಳ 'ಮ್ಯೂಸಿಕ್ ಮೇಡಂ' ನಾನು. ನಿಮಗೆ ನೆನಪಿದೆಯೇನು? ಒಂದು ವೇಳೆ ನೀವು ಮರೆತರೂ ನಿಮ್ಮ ತಪ್ಪಿಲ್ಲ. ಎಷ್ಟಾದರೂ ಇದು ಹದಿಮೂರು ವರ್ಷಗಳ ಹಿಂದಿನ ವಿಷಯ ತಾನೇ.

ಮುಂಬಯಿಯ ಕಾರ್ಡಿನಲ್ ಗ್ರೇಶಿಯಸ್ ರೋಡಿನಲ್ಲಿದ್ದ 'ಬಿ' ಎಪಾರ್ಟ್‌ಮೆಂಟಿನಲ್ಲಿ ನೀವು ಇದ್ದಾಗಿನ ವಿಷಯ. ಇದಿರಿನಲ್ಲಿಯೇ ಇದ್ದ 'ಎ' ಎಪಾರ್ಟ್‌ಮೆಂಟ್‌ನಲ್ಲಿದ್ದ ನಮ್ಮ ಫ್ಲಾಟಿನಲ್ಲಿ ನಾನು, ಮಕ್ಕಳಿಗೂ, ಹಿರಿಯರಿಗೂ ಹಿಂದುಸ್ಥಾನೀ ಶಾಸ್ತ್ರೀಯ ಸಂಗೀತವನ್ನು ಹಲವು ವರ್ಷಗಳಿಂದ ಕಲಿಸುತ್ತಿದ್ದೆನಲ್ಲ... ಬೆಳಿಗ್ಗೆ 9.30 ಗಂಟೆಗೆ ನಿಮ್ಮ ಬ್ಯಾಂಕಿನ ನೌಕರಿಗಾಗಿ ಮನೆಬಿಡುತ್ತಿದ್ದ ನೀವು, ಮರಳಿ ಸಂಜೆ 5.30 ಗಂಟೆಗೆ ಬರುತಿದ್ದಿರಿ. ಸುನೀತಾ ಆಗಿನ್ನೂ 5 ವರ್ಷದವಳಷ್ಟೆ. ಅದೇ ವರ್ಷ ಆಕೆಯನ್ನು ಕಾನ್ವೆಂಟಿಗೆ, ಕೆ.ಜಿ. ಕ್ಲಾಸಿಗೆ ಸೇರಿಸಿದ್ದಿರಿ. ಬೆಳಿಗ್ಗೆ 7 ಗಂಟೆಗೆ ಕಾನ್ವೆಂಟಿಗೆ ಹೊರಟ ಆಕೆ, ಮನೆಗೆ ಮರಳುವಾಗ ಸಂಜೆಯ ನಾಲ್ಕುಗಂಟೆಯಾಗುತ್ತಿತ್ತು. ನೀವು ಮನೆಗೆ ಮರಳುವ ತನಕದ ಒಂದೂವರೆ ತಾಸನ್ನು ಒಬ್ಬಳೇ ಕಳೆಯಲು ತುಂಬಾ ಬೇಸರಪಡುತ್ತಾಳೆ ಎಂದಿದ್ದಿರಿ, ನನ್ನ ಬಳಿ. ಹಾಗಾಗಿ ವಾರದ ಐದು ದಿನಗಳು ಸುನೀತಾಗೆ ನಾನು ಸಂಗೀತ ಪಾಠಗಳನ್ನು ಹೇಳಿಕೊಡಬೇಕೆಂತಲೂ, ದುಬಾರಿ ಫೀಸು ಕೊಡುವದಾಗಿಯೂ ಹೇಳಿದಿರಿ.'ಸುನೀತಾ ನನ್ನ ಮೊಮ್ಮಗಳಂತೆಯೇ, ನಾಳೆಯಿಂದ ಕಳುಹಿಸಿಕೊಡಿರಿ, ಆದರೆ ಫೀಸುಗೀಸು ಎಂತ ಮಾತೆತ್ತಕೂಡದು', ಎಂದೆ ನಾನು.

'ನೋಡಿ ಆಂಟಿ, ನಮ್ಮ ಸುನೀತಾ ನಿಜವಾಗಿಯೂ ತುಂಬಾ ಬುದ್ಧಿವಂತೆ, ಗ್ರಹಣ ಶಕ್ತಿಯೂ ಭಾರೀ ಒಳ್ಳೆಯದಿದೆ ಆಕೆಗೆ. ಒಂದೇ ತೊಂದರೆಯೆಂದರೆ ಆಕೆ ತುಂಬಾ 'ಹಟಮಾರಿ' ಇದ್ದಾಳೆ. ಸಂಗೀತ ಕಲಿಸುವಾಗ ಹಟಮಾಡಿದರೆ, ಒಂದಿಷ್ಟು ಹೇಸದೆ ಫೂಟ್ ರೂಲರಿನಿಂದ ಕೈಗೆ ಸರೀ ಪೆಟ್ಟು ಕೊಡಿ. ನಾನು ನಿಮ್ಮನ್ನು ಏನೂ ಅನ್ನುವದಿಲ್ಲ' ಎಂದಿರಿ ನೀವು. 'ಅಂತಹ ಪ್ರಸಂಗವೇ ಬರಲಿಕ್ಕಿಲ್ಲ' ಎಂದಿದ್ದೆ ನಾನು.

ಮರುದಿನ ಸಂಜೆ, 4.30 ಗಂಟೆಗೆ ಸರಿಯಾಗಿ, ಸುನೀತಾ ನಮ್ಮಲ್ಲಿ ಹಾಜರಾಗಿದ್ದಳು. ನಾನು ಬಿಲಾವಲ್ ಥಾಟಿನಲ್ಲಿ ಸಪ್ತಸರಗಳನ್ನು ಹಾರ್ಮೋನಿಯಂನಲ್ಲಿ ಬಾರಿಸಿ, ಸ್ವತಃ ಹಾಡಿತೋರಿಸಿದೆ. ಮತ್ತು ಅದೇ ರೀತಿ, ಆಕೆಗೂ ಹಾಡಲು ಹೇಳಿ, ಹಾರ್ಮೋನಿಯಂನಲ್ಲಿ ಬಾರಿಸುತ್ತಾ ಹೋದಂತೆ, ಸುನೀತಾ, ಒಂದಿಷ್ಟು ಅಪಸ್ವರವನ್ನೂ ಹಾಡದೆ, ಸಲೀಸಾಗಿ ಆರೋಹಣವನ್ನು ಹಾಡಿದಳು. ಆಮೇಲೆ ಅದೇ ರೀತಿಯಲ್ಲಿ ಅವರೋಹಣವನ್ನೂ ಚಾಚೂತಪ್ಪದೆ ಹಾಡಿದಾಗ, ಆಕೆಯ ಗ್ರಹಣಶಕ್ತಿಗೆ ನಾನು ಮನಸೋತೆ. ಕಂಠವೂ ತುಂಬಾ ಮಧುರವಾಗಿತ್ತು, ಹಾಡುವಾಗಿನ ಮುಖಭಾವವೂ ಆಕರ್ಷಕವಾಗಿತ್ತು. ಸುನೀತಾಗೆ ಸಂಗೀತ ದೇವಿಯ ಸಂಪೂರ್ಣ ಅನುಗ್ರಹವಿತ್ತು ಎಂಬುದಕ್ಕೆ ಸಂಶಯವಿರಲಿಲ್ಲ. ಸಂಗೀತದ 'ಥಿಯರಿ' ಭಾಗದಲ್ಲಿ ಬರುವ, ರಾಗಗಳ ಲಕ್ಷಣ, ತಬ್ಲಾತಾಲಗಳು, ಇನ್ನಿತರ ಹಲವು



ವಿಷಯಗಳನ್ನು ಇತರರು ನೋಟ್‌ಬುಕ್‌ನಲ್ಲಿ ಬರಕೊಂಡು ಬಾಯಿಪಾಠ ಮಾಡುತ್ತಿದ್ದರಾದರೆ, ಸುನೀತಾ, ಕೇಳಿ ತಿಳಕೊಳ್ಳುವ ಗ್ರಹಣಶಕ್ತಿಯಿಂದ ಎಲ್ಲವನ್ನೂ ಆ ಪುಟ್ಟ ತಲೆಯಲ್ಲಿ ಸಂಗ್ರಹಿಸಿಕೊಂಡಿದ್ದಳು. ತರಗತಿಯಲ್ಲಿ, ವಿದ್ಯಾರ್ಥಿಗಳಿಗೆ, ಥಿಯರಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ನಾನು ಕೇಳಿದಾಗಲೆಲ್ಲಾ, ಅವರು ಆಲೋಚಿಸಿ ಉತ್ತರಕೊಡುವಷ್ಟರಲ್ಲಿ, ಸುನೀತಾ, ಪಟಕ್ಕನೆ ತಪ್ಪದೆ ಉತ್ತರಿಸುತ್ತಿದ್ದಾಗ ನನಗೆ ತುಂಬಾ ಆಶ್ಚರ್ಯವಾಗುತ್ತಿತ್ತು. ಆಕೆಯೆಂದರೆ ನನಗೆ ತುಂಬಾ ಮುದ್ದು. ಆಕೆಯ ಕಲಾನೈಪುಣ್ಯತೆಗಾಗಿ ಆಕೆಯನ್ನು ಹೊಗಳುತ್ತಿದ್ದೆ.

ಅದೊಂದು ಸಂಜೆ, ನಾನು ಜೀವಮಾನದಲ್ಲಿ ಮರೆಯಲಾಗದ ಸಂಜೆ.... ಯಮನ್ ರಾಗದ ಆರೋಹಣ, ಅವರೋಹಣಗಳನ್ನು ಹಾಡಲು ಹೇಳಿ, ಎಲ್ಲರಿಂದಲೂ ಹಾಡಿಸಿದೆ. ಈಗ ಸುನೀತಾಳ ಸರದಿ. 'ಸರಿಗಮಪಧನಿಸ' ಎಂತ ಹಾಡಿದಳು. ಶುದ್ಧ ತಪ್ಪು... ನನ್ನ ಕಿವಿಗಳನ್ನು ನನಗೇ ನಂಬಲಾಗಲಿಲ್ಲ. 'ಅಧ್ಯಾಕಮ್ಮ ತಪ್ಪಾಗಿ ಹಾಡುತ್ತೀ' ಎಂದೆ. ಪುನಃ ಹಾಡಲು ಹೇಳಿದಾಗ ಪುನಃ ಅದೇ ರೀತಿ ತಪ್ಪಾಗಿ ಹಾಡಿದಳು. ಇದೇನು ಅವಲಕ್ಷಣ, ವಕ್ರರಾಗಗಳನ್ನೂ ಒಂದಿಷ್ಟು ತಪ್ಪದೆ ಹಾಡುತ್ತಿದ್ದವಳಿಗೆ ಈ ಸರಳವಾದ ರಾಗವನ್ನು ಹಾಡುವದೇನೂ ಕಠಿಣವಲ್ಲ.... ಇದು ಉದ್ದೇಶಪೂರ್ವಕವಾಗಿ ಆಕೆ ಮಾಡುವ ತಪ್ಪು ಎಂದ ನನಗೆ ನಿಶ್ಚಿತವಾಗಿ ತಿಳಿಯಿತು. ಆಕೆಯ ಅಮ್ಮ ಹಿಂದೆ ನನ್ನ ಬಳಿ ಹೇಳಿದ 'ಹಟಮಾರಿತನ' ಇರಬಹುದು. ನನ್ನ ಬಲಗೈಯ್ಯಲ್ಲಿ ಫೂಟ್‌ರೂಲರನ್ನು ಹಿಡಿದು, 'ನಿನ್ನ ಬಲಗೈ ಹಸ್ತವನ್ನು ಮುಂದೆ ಚಾಚು.... ಮತ್ತು ಈಗ ಹಾಡು.... ತಪ್ಪಾದರೆ ಸರೀ ಪೆಟ್ಟು ಕೊಡುತ್ತೇನೆ' ಎಂದೆ. ತನ್ನ ಪುಟ್ಟ ಹಸ್ತವನ್ನು ಮುಂದೆ ನೀಡುತ್ತಾ, ಈಗಲೂ, ಸುನೀತಾ ಮೊದಲಿನಂತೆ ತಪ್ಪಾಗಿ ಹಾಡಿದಳು. ನನ್ನಿಂದ ಸಹಿಸಲಾಗಲಿಲ್ಲ. ಕೈಯ್ಯಲ್ಲಿ ಹಿಡಿದ ಫೂಟ್‌ರೂಲರಿನಿಂದ, ಸುನೀತಾಳ ಹಸ್ತಕ್ಕೆ, ಎಲ್ಲಾ ಶಕ್ತಿ ಉಪಯೋಗಿಸಿ ಒಂದು ಪೆಟ್ಟು ಕೊಟ್ಟೆ. 'ಈಗ ಪುನಃ ಹಾಡು' ಎಂದೆ. ಕೂಡಲೇ ಸರಿಯಾಗಿ ಹಾಡಿದಳು. ಆ ಕೂಡಲೇ ನಾನು ನಿದ್ರೆಯಿಂದ ಎಚ್ಚೆತ್ತಂತಾಗಿದ್ದೆ. ಸುನೀತಾಳತ್ತ ನೋಡಿದೆ. ಕಣ್ಣುಗಳನ್ನೂ ಮಿಟುಕಿಸದೆ, ನನ್ನ ಮುಖದತ್ತಲೇ ನೋಡುತ್ತಿದ್ದಳು. ನೀಡಿದ ಹಸ್ತವನ್ನೂ ಹಿಂದಕ್ಕೆಳೆದಿರಲಿಲ್ಲ. ಅವಳ ಮುಖದಲ್ಲಿ, ನಾನು ನೋವಿನ ಛಾಯೆಯಾಗಲೀ, ನಾಚಿಕೆಯಾಗಲೀ, ದುಃಖವಾಗಲೀ ಏನನ್ನೂ ನಾನು ಕಾಣದಾದೆ.

ಮರುದಿನ, ಈ ಘಟನೆಯನ್ನು ನಿಮ್ಮ ಬಳಿ ಹೇಳುವಾಗ, ನನಗೆ ಅಳುಬಂದು, ಮಾತನಾಡಲು ಆಗಿರಲಿಲ್ಲ. 'ಹಾಗೆ ಹೊಡೆದರೆ ತಾನೇ ಸುನೀತಾ ಸರಿಯಾಗುವುದು. ಅಷ್ಟಕ್ಕೆ ಯಾಕೆ ಬೇಸರಿಸುತ್ತೀರಾ?' ಎಂದು ನೀವು ನನ್ನನ್ನು ಸಮಾಧಾನಪಡಿಸಿದ್ದಿರಿ. ಮುಂದೆ ಸುನೀತಾ ನನ್ನ ಬಳಿ ಮೂರುವರ್ಷಗಳು ಸಂಗೀತಾಭ್ಯಾಸ ಮಾಡಿದಳು. ಮುಂದೆಂದೂ ಅವಳು ಉದ್ದೇಶಪೂರ್ವಕವಾಗಿ ತಪ್ಪು ಮಾಡಲಿಲ್ಲ. ನಂತರ ನಾವು ಮುಂಬಯಿಯಿಂದ ಮಂಗಳೂರಿಗೆ ನೆಲೆಸಲು ಬಂದೆವು. ಒಂದೆರಡು ಬಾರಿ ನಿಮಗೆ ಪತ್ರವನ್ನೂ ಬರೆದಿದ್ದೆ. ಪತ್ರಗಳು ಮರಳಿ ಬಂದವು. ನೀವು ಸ್ಥಳ ಬದಲಾಯಿಸಿರಬಹುದೆಂತ ಭಾವಿಸಿದೆ.

ಈಗ ಸುನೀತಾ ಹದಿನೆಂಟು ವರ್ಷ ಪ್ರಾಯದ ತರುಣಿಯಾಗಿರಬೇಕಲ್ಲಾ. ಈಗ ನೀವು ಎಲ್ಲಿದ್ದೀರೆಂತ ತಿಳಿಯದಿದ್ದರೂ, ಮುದ್ದು ಸುನೀತಾಳ ಹಳೇ ನೆನಪಿನ ಸಿಹಿ, ಕಹಿ ಘಟನೆಗಳನ್ನು ನನ್ನ ಆಶೀರ್ವಾದಗಳೊಟ್ಟಿಗೆ 'ಕಾಗದದ ದೋಣಿ'ಯಲ್ಲಿ ತುಂಬಿ ತೇಲಲು ಬಿಟ್ಟು, ಒಂದಲ್ಲ ಒಂದು ದಿನ ಅದು ನಿಮ್ಮನ್ನು ತಲುಪುವುದು ಎಂಬ ಭರವಸೆಯಿಂದಿದ್ದೇನೆ.

ಕನ್ನಡಾಭಿಮಾನಿಗಳಾದ ನಿಮ್ಮ ಕೈಗೆ 'ಭಾವನಾ' ಸಿಕ್ಕೇ ಸಿಗುವದು ಎಂಬುದಂತೂ ಖಂಡಿತ.

ಸುಭಾಷ್‌ನಗರ, 1ನೇ ಮುಖ್ಯರಸ್ತೆ, ಮಂಗಳೂರು.

**ಶಾಂತಾ ಸೋಮನಾಥ ಮಂಜೇಶ್ವರ್**

ಇಡೀ ನಗರದಲ್ಲಿ ಒಂದು ತರದ ಕಳವಳವು ಹುಟ್ಟಿದಂತಿತ್ತು. ಜನರು ಒಬ್ಬರನ್ನೊಬ್ಬರು ಸಂದೇಹ ದೃಷ್ಟಿಯಿಂದ ಕಾಣುತ್ತಿದ್ದರು. ಹಿಂದು ಮುಸಲ್ಮಾನರು, ಪರಸ್ಪರ ವಕ್ರದೃಷ್ಟಿಯಿಂದ ಕಂಡು, ಕಣ್ಣು ಕೆಂಪಗೆ ಮಾಡುತ್ತಿದ್ದರು. ಕೆಲವರು ಕಣ್ಣು ತಪ್ಪಿಸಿಕೊಂಡು ಅತ್ತಿತ್ತ ತಿರುಗಾಡುತ್ತಿದ್ದರು. ಎಲ್ಲವೂ ಪ್ರಳಯದ ಬರವನ್ನು ಕಾಯುತ್ತಿರುವ ಅಸಹ್ಯ ಶಾಂತಿಯಂತೆ ತಣ್ಣಗಿತ್ತು.

ಆದರೆ ಹೀಗೇಕೆ? ಯಾರಿಗೂ ಈ ಪ್ರಶ್ನೆಯ ಉತ್ತರ ತಿಳಿದಂತಿರಲಿಲ್ಲ. ಸತ್ಯ ಹೇಳುವುದಾದರೆ, ಯಾರಿಗೂ ಇದರ ಮೂಲ ಶೋಧನೆ ಮಾಡುವ ಗೊಡವೆಯಿರುವಂತೆ ಕಾಣಲಿಲ್ಲ. ಆದರೂ ತಳಮಳ ವಂತೂ ಇದ್ದೇ ಇತ್ತು. ಅದನ್ನು ಅಲ್ಲಗಳೆಯಲಾಗು ವುದಿಲ್ಲ. ಅಲ್ಲಲ್ಲಿ, ನಾಲ್ಕಾರು ಜನರ ಗುಂಪುಗಳು ನಿಂತು, ಒಳದನಿಯಲ್ಲಿ, ಯಾವುದೋ ಅಭೇದ್ಯ ಸಂಗತಿಯನ್ನು ಚರ್ಚಿಸುವಂತಿದ್ದುವು. ಪ್ರತಿಯೊಬ್ಬನೂ, ಒಂದೆರಡು ದಿನಗಳೊಳಗೆ, ಭಯಂಕರ ಹಿಂದೂ-ಮುಸ್ಲಿಂ ದಂಗೆಯನ್ನು ನಿರೀಕ್ಷಿಸುತ್ತಿದ್ದ. ಮಾತ್ರ ಯಾರಿಗೂ ಅದನ್ನು ತಡೆಯಬೇಕೆಂದು ಹೊಳೆ ದಿರಲಿಲ್ಲ.

ಮುಸಲ್ಮಾನರ ಸಂಖ್ಯೆ ಹೆಚ್ಚಿರುವ ಗಲ್ಲಿಗಳಲ್ಲಿ. ವಿಚಿತ್ರ ರೀತಿಯ ಪ್ರಚಾರಗಳು ನಡೆಯುತ್ತಿದ್ದವು. ನೂರಾರು ಕಥೆಗಳು ಹಬ್ಬಿದ್ದವು. ಕೆಲವರಿಗೆ ವರ್ತಮಾನವಾಗಿತ್ತು, ಏನೆಂದರೆ ಮೊಹರಂ ಹಬ್ಬದ ಮೆರವಣಿಗೆ ಹೊರಟು ಹಿಂದೂ ಗಲ್ಲಿಗಳಿಗೆ ಬಂದಾಗ, ಕಲ್ಲುಗಳನ್ನು ಬಿಸುಡಲಿರುವ ರೆಂದು. ಇನ್ನು ಕೆಲವರ ಅಭಿಪ್ರಾಯವಿತ್ತು, ಏನೆಂದರೆ ಹನುಮಾನ್ ಗಲ್ಲಿಯ ತುದಿಯಲ್ಲಿರುವ ವಿಶಾಲವಾದ ಖಾಲಿ ಕಟ್ಟೋಣದಲ್ಲಿ ದೊಡ್ಡ ದೊಡ್ಡ ಬೆಣಚುಕಲ್ಲುಗಳ ಸಂಗ್ರಹವಾಗುತ್ತಿದೆ. ಸಾವಿರಾರು ಲಾರಿಗಳನ್ನು ಅಲ್ಲಿ ಒಟ್ಟಗಿಟ್ಟಿದ್ದಾರೆ. ಮೊಹರಂ ಮೆರವಣಿಗೆ ಅತ್ತ ತಿರುಗಿದ ಕೂಡಲೆ, ಮುಸಲ್ಮಾನರನ್ನು ಬಡಿಯುವರು. ಮತ್ತೆ ಕೆಲವರಿಗೆ ತಿಳಿದಂತೆ, ಮೊಹರಂ ದಿನ ದೊಡ್ಡದೊಂದು ಹಂದಿಯನ್ನು ಕೊಂದು, ಮೆರವಣಿಗೆಯ ಮೇಲೆ ಬಿಸುಡುವ ತೈಯಾರಿಗಳನ್ನು ಹಿಂದುಗಳು ನಡೆಸು ತ್ತಿರುವರು-ಇತ್ಯಾದಿ, ಇತ್ಯಾದಿ. ಇದರ ಸತ್ಯಾಸತ್ಯತೆ ಗಳನ್ನು ಶೋಧಿಸುವ ಅಗತ್ಯ ಒಬ್ಬನಿಗೂ ಇರಲಿಲ್ಲ.

ಇನ್ನು ಹಿಂದೂ ಬೀದಿಗಳಲ್ಲೇನೂ ವಾರ್ತೆ ಗಳು ಕಡಿಮೆಯಿರಲಿಲ್ಲ. ಮೊಹರಂ ನೆವನದಿಂದ ಗೋವಧೆಮಾಡಿ, ಹಿಂದೂ ಹನುಮಾನ್ ದೇವಾಲ ಯದ ಮುಂದೆ, ಅದರ ರುಂಡವನ್ನು ಕೆಡವಲಿರು ವರೆಂದು ಕೆಲವರ ಅಂಬೋಣ. ದೇವಾಲಯದ ಕೆರೆಯಲ್ಲಿ, ಗೋಮಾಂಸವನ್ನು ರಾತ್ರಿಕಾಲದಲ್ಲಿ ಚೆಲ್ಲಿ, ಹಿಂದುಗಳ ಜಾತಿಭ್ರಷ್ಟ ಮಾಡುವರೆಂದು ಕೆಲವರ ಗುಣುಗಾಟ. ಮಶೀದಿಯ ಕಂಪೌಂಡಿ ನಲ್ಲಿ ಕಲ್ಲು ಕಟ್ಟಿಗೆಗಳನ್ನು ಒಟ್ಟಿಟ್ಟಿದ್ದಾರೆ. ಇದರ ಲ್ಲೇನೋ ಗೂಢವಿದೆಯೆಂದು ಇನ್ನುಳಿದವರ ಅಭಿಮತ.

ಮತ್ತೆ ಮುಸಲ್ಮಾನರ ಅತ್ಯಾಚಾರಗಳ ಕುರಿತು ಬೇರೆ ಪ್ರಚಾರ ನಡೆಯುತ್ತಿತ್ತು. ಶಂಕರಕೃಷ್ಣ ಜೋಯಿಸರ ಮಗಳನ್ನು ಮುಸಲ್ಮಾನ ಪುಂಡರು ಹಾರಿಸಿಕೊಂಡು ಹೋಗಿದ್ದರೆಂದೂ, ಬಲಾತ್ಕಾರದಿಂದ ಅವಳನ್ನು ಜಾತಿಗೆಡೆಸಿದರೆಂದೂ ದಟ್ಟವಾದ ಸುದ್ದಿ ಹಬ್ಬಿತ್ತು. ಸತ್ಯವಾಗಿ ನೋಡಿದರೆ, ಮೀನಾಕ್ಷಿ, ಮುಸಲ್ಮಾನನೊಂದಿಗೇ ಅಲ್ಲ, ಕರುಣೆ, ಆಶೆ ತೋರಿಸುವ ಯಾವ ಮತದವನ ಕೂಡೆಯೂ ಹೊರಟುಹೋಗಲು ಸಿದ್ಧಳೇ ಆದಂಥ ಅಬಲೆ ವಿಧವೆ. ಏನೋ, ಕರ್ಮಧರ್ಮ ಸಂಯೋಗ ದಿಂದ, ಮುಸಲ್ಮಾನನೊಬ್ಬ ಆಕೆಗೆ ಗಂಟುಬಿದ್ದ. ಅದರ ವಿಷಯ ಕೋರ್ಟಿಗೆ ದೂರು ಹೋಗಿ, ಆಕೆ, ಸ್ವೇಚ್ಛೆಯಿಂದ ಮಹಮದ್ ಕರೀಮನೊಡನೆ ತಾನು ಬಂದಿರುವೆನೆಂದು ಹೇಳಿಯೂ ಇದ್ದಳು. ಆದರೆ ಜಾತೀಯತೆಯ ಬೆಂಕಿಯನ್ನು ಹಬ್ಬುವ ಮೂಢ ಬೇಜವಾಬ್ದಾರರಿಗೆ ಇದೊಂದೂ ಬೇಕಿ ದ್ದಿಲ್ಲ. ಪರಸ್ಪರ ದ್ವೇಷ ಭಾವವನ್ನು ಹಬ್ಬಿಸುವು ದೆಂದರೆ ಅವರಿಗೆ ಲೀಲೆ.

ಇತ್ತ ದೋಸ್ತ್ ಮಹಮ್ಮದರ ಮಗಳು ಉನ್ನೀಸಾ, ಮೂರುದಿನಗಳಿಂದ ಕಾಣೆಯಾಗಿ

ದ್ದಳು. ಕರೀಂಖಾನನ ಮೇಲಿನ ಸೇಡನ್ನು ತೀರಿಸಿಕೊಳ್ಳುವುದಕ್ಕಾಗಿ, ಹಿಂದುಗಳೇ ಅವಳನ್ನು ಕದ್ದುಕೊಂಡು ಹೋಗಿದ್ದಾರೆಂಬ ಶಂಕೆಯನ್ನು ಮುಸಲ್ಮಾನ ಪುಂಡರು ಹಬ್ಬಿದ್ದರು. ಇದರಿಂದ ಅಭಿಮಾನಿಗಳಾದ ಮುಸಲ್ಮಾನರಿಗೆ ಒಳ್ಳೇ ಅವಮಾನವಾಗಿತ್ತು. ಇದರ ಸೇಡನ್ನು ಖಂಡಿತ ವಾಗಿ ತೀರಿಸಿಯೇ ಬಿಡಬೇಕೆಂಬ ಹಠ ಅವರೆದೆ ಯಲ್ಲಿ ಬೇರೂರಿತ್ತು.



ನಗರದಲ್ಲೆಲ್ಲಾ ಈ ರೀತಿಯ ವಾರ್ತೆ-ಪ್ರತಿ ವಾರ್ತೆಗಳು ಗಾಳಿಯನ್ನು ಹೊಗೆಯಂತೆ ಮುತ್ತಿ ರುವಾಗ, ನಗರದ ಹೊರಗಿನ ಹಾಳು ಮನೆಯಲ್ಲಿ ಬೇರೆಯೇ ದೃಶ್ಯವೊಂದು ನಡೆಯುತ್ತಿತ್ತು. ನಗರ ದೊಳಗೆ ಹಗೆತನದ ಹುರುಪು ಸೂಳೈಸುತ್ತಿತ್ತು, ಅಲ್ಲಿ ಹಿಂದೂ-ಮುಸಲ್ಮಾನರು ವಕ್ರದೃಷ್ಟಿ, ರಕ್ತ ದೃಷ್ಟಿಗಳನ್ನು ಬೀರುತ್ತಿದ್ದರೆ, ಈ ಹಾಳುಮನೆಯಲ್ಲಿ, ಮೂವರು ಮುಸಲ್ಮಾನರೂ, ಮೂವರು ಹಿಂದು ಗಳೂ ಸೇರಿ ಗಹನವಾದ ಆಲೋಚನೆಯಲ್ಲಿ ಮಗ್ನರಾಗಿದ್ದರು.

ಮೊತ್ತಮೊದಲು ನಿಮ್ಮನ್ನು ಆಕರ್ಷಿಸುವ ವ್ಯಕ್ತಿಯೆಂದರೆ, ಮುಸಲ್ಮಾನರ ಜಾತೀಯ ಭಾವನೆ ಯನ್ನು ತೊಡೆದೆಬ್ಬಿಸಿ, ನಾಡಿದ್ದು ದಂಗೆಯಾಗುವ ಪ್ರಸಂಗದಲ್ಲಿ ಮುಸಲ್ಮಾನರ ಧುರೀಣತ್ವವನ್ನು ವಹಿ ಸಲಿದ್ದ ಜನಾಬ್ ರಹಿಮತುಲ್ಲಾ ಖಾನರು. ಉಳಿದ ಇಬ್ಬರು ಮುಸಲ್ಮಾನರು ಅವರ ಸಂಗಾತಿಗಳು.

ನಿಮಗೆ ವಿಚಿತ್ರವಾಗಿ ತೋರಬಹುದು. ಆದರೆ, ಅಲ್ಲಿ ಸೇರಿದ ಹಿಂದೂಗಳ ಮುಖ್ಯಸ್ಥನೆಂದರೆ, ದಂಗೆಯಾದರೆ ಹಿಂದುಗಳನ್ನು ಹುರಿದುಂಬಿಸಿ ಹೊಡೆದಾಡಿಸುವ ಸೇನಾಪತಿ, ಕೃಷ್ಣಶೆಟ್ಟರು.



'ಕಸ್ತೂರಿ'ಯ ಸಂಪಾದಕರಾಗಿ, ಅದನ್ನು ಕನ್ನಡದ ಉತ್ಕೃಷ್ಟ 'ಡೈಜೆಸ್ಟ್' ಆಗಿ ರೂಪಿಸಿದ **ಪಾಡಿಗಾರು ವೆಂಕಟರಮಣ ಆಚಾರ್ಯ** (1915-1992) ಕನ್ನಡ ಪರಂಪರೆ ಕಂಡ ಅಪರೂಪದ ಪ್ರತಿಭಾವಂತರು. ಹೋಟೆಲ್ ಬಿಲ್‌ರೈಟರ್, ಶಾಲಾ ಮಾಸ್ತರ್, ಅಂಗಡಿ ಗುಮಾಸ್ತ, ಪ್ರೆಸ್ ಮ್ಯಾನೇಜರ್, ಅಕೌಂಟೆಂಟ್, ಕಂಪನಿ ಸೆಕ್ರೆಟರಿ... ಹೀಗೆ ವಿಭಿನ್ನ ವೃತ್ತಿಗಳಲ್ಲಿ ತೊಡಗಿ, 1942ರಲ್ಲಿ 'ಸಂಯುಕ್ತ ಕರ್ನಾಟಕ' ಬಳಗ ಸೇರಿ ಪತ್ರಿಕೋದ್ಯಮಿಯಾದರು. ಸಾವಿರಾರು ವೈಚಾರಿಕ, ರಾಜಕೀಯ, ಸಾಹಿತ್ಯಿಕ, ಸಾಂಸ್ಕೃತಿಕ ಲೇಖನಗಳನ್ನು ಏಕಕಾಲಕ್ಕೆ 'ಲಾಂಗೂಲಾಚಾರ್ಯ', 'ಮುರಳೀಧರ', 'ರಾಧಾಕೃಷ್ಣರಾವ್', 'ಪಿ.ವಿ. ಆ', 'ಪಿ.ವೆಂಕಟರಮಣಾಚಾರ್ಯ' ಎಂಬ ವಿಭಿನ್ನ ಹೆಸರುಗಳಲ್ಲಿ ಬರೆದರು. ವಿನೋದ, ಚಿಂತನೆ, ಅಧ್ಯಯನ, ಪ್ರಯೋಗಶೀಲತೆ ಮತ್ತು ಸ್ಪಂದನೆ ಮೇಳೈಸಿದ 'ಪಾವೆಂ'ರ ಗರಡಿಯಲ್ಲಿ ಪಳಗಿದ ಎಳೆಯರು ಲೆಕ್ಕವಿಲ್ಲದಷ್ಟು. ಹೊಸ ಲೇಖಕರಿಂದ ಬರೆಸಿ, ತಿದ್ದಿ, ಮಾಹಿತಿ ಪೂರೈಸಿ, ಶಿಸ್ತು, ಸಂಯಮದ ಪಾಠ ಕಲಿಸಿದರು. ಬಡತನವನ್ನೇ ಬಾಳಿ ಹೋದ, 'ಸರ್ವಜ್ಞಾಚಾರ್ಯ' ಪಾವೆಂರ ಸಾಧನೆಯನ್ನು ನೆನೆಯುವುದೂ, ಪತ್ರಿಕೋದ್ಯಮವೆಂದರೆ ಅಟ್ಟಹಾಸವಾಗುತ್ತಿರುವ ಇಂದಿನ ದಿನಗಳಲ್ಲಿ 'ಶುದ್ಧೀಕರಣ'ದ ಒಂದು ವಿಧಾನ.

ಸ್ವತಃ ಕವಿಯೂ ಆಗಿದ್ದ ಪಾವೆಂ, 1940ರಲ್ಲಿ ಮಣಿಪಾಲದಿಂದ ಹೊರಡುತ್ತಿದ್ದ 'ಅಂತರಂಗ' ಪತ್ರಿಕೆ ಯಲ್ಲಿ ಕತೆಗಳನ್ನು ಬರೆದಿದ್ದರು. ಅವುಗಳಲ್ಲಿ ಆಯ್ದ ಕತೆಯೊಂದನ್ನು ಕೊಡುತ್ತಿದ್ದೇವೆ. ಕೋಮು ವೈಷಮ್ಯದ ತಪ್ತತೆ, ಕೀಳು ರಾಜಕಾರಣ ಚಿತ್ರಿಸುವ ಈ ಕತೆಯ ಅಂದಿನ ವಿವರಗಳು ಇಂದಿನಷ್ಟೇ ನಿಚ್ಚಳವಾಗಿವೆ. ಪಾವೆಂ ಅವರ ಸಮಗ್ರ ಕೃತಿಗಳನ್ನು ಕಲೆ ಹಾಕುತ್ತಿರುವ ಶ್ರೀನಿವಾಸ ಹಾವನೂರು ನಮಗೆ ಈ ಕತೆ ಕೊಟ್ಟಿದ್ದಾರೆ. ಅವರಿಗೆ ಕೃತಜ್ಞತೆ.

ಪ್ರಾಯಶಃ ನೀವೆಣಿಸುತ್ತಿದ್ದಿರಿ. ಅವರು ಈ ದಂಗೆಯನ್ನು ನಿಲ್ಲಿಸುವ ಪ್ರಯತ್ನ ಮಾಡುವುದಕ್ಕಾಗಿ ಇಲ್ಲಿ ಸಭೆ ಸೇರಿದ್ದಾರೆಂದು. ಆದರೆ ರಹಿಮತುಲ್ಲಾರು ಹೇಳುತ್ತಿದ್ದರು, "ನನಗೆ, ಶೆಟ್ಟರೇ, ಈ ಸಂಗತಿಯಿಂದ ಮುಖ್ಯ ಬೇಕಾದದ್ದೊಂದು. ಉನ್ನೀಸಾಳು ನನ್ನವಳಾಗಬೇಕು. ಅದು ಮೊದಲು. ಅದಕ್ಕಾಗಿ ನಾನು ಇಷ್ಟೆಲ್ಲ ಒದ್ದಾಡುತ್ತಿದ್ದೇನೆ.... ನಾನು ಹಣಕ್ಕೆ ಅಷ್ಟು ಬಾಯ್ಬಿಡುವುದಿಲ್ಲ."

"ಸಾಹೇಬರೇ, ನಿಮ್ಮ ಉನ್ನೀಸಾ ನಿಮಗೆ ಸಿಗಲಿಕ್ಕೆ ನಮ್ಮ ಆಕ್ಷೇಪವೇನೂ ಇಲ್ಲ. ನಮಗೆ, ಮುಖ್ಯ, ದೊರಕುವ ಹಣದಲ್ಲಿ ನಿಮಗೆಷ್ಟು ನಮಗೆಷ್ಟು ಎಂದು ನಿರ್ಣಯವಾಗಬೇಕು....'ಟ ಕೃಷ್ಣಶೆಟ್ಟರ ಮಾತು.

"ಆ ಮುದುಕ ಶೇಟನಲ್ಲಿ ಒಟ್ಟು ಏಳು ಸಾವಿರ ರೂಪಾಯಿ ನಗದಿ ಉಂಟು ಅಂತ ರಜಕ್ ಹೇಳುತ್ತಾನೆ. ನನಗೆ ಅದರಲ್ಲಿ ಒಂದು ಪೈ ಕೂಡಾ ಬೇಡ. ಆದರೆ ರಜಕ್, ಅಬ್ದುಲ್ಲಾ ಇವರಿಗೆ ನೀವು ಒಂದೊಂದು ಸಾವಿರದಂತೆ ಕೊಡಬೇಕು,... ಉಳಿದದ್ದು ಎಷ್ಟೇ ಇರಲಿ, ಅದು ನಿಮಗೇ...."

ಕೆಲಕಾಲ ಇದೇ ವಿಷಯ ಚರ್ಚೆ ನಡೆದು, ಹಣದ ಒಂದು ನಿರ್ಣಯವಾಯಿತು. ಕೊನೆಗೆ ರಹಿಮತುಲ್ಲರು, ಸಂಕ್ಷಿಪ್ತವಾಗಿ, ಹೀಗೆ ಕಾರ್ಯಕ್ರಮವನ್ನು ಪುನರಾವರ್ತಿಸಿದರು.

'ಮೊಹರಂ ದಿನ ಸಂಜೆ, ರಹಿಮತುಲ್ಲಾ ಖಾನರ ತಮ್ಮ ಸೈಯದ್ ಹನುಮಂತ ದೇವಸ್ಥಾನದ ಬಳಿ ಹೋಗುತ್ತಿರಬೇಕು. ಆಗ ಕೃಷ್ಣಶೆಟ್ಟರು, ತಮ್ಮ ಕೆಲಸದವನನ್ನು ಅವರೆದುರು ಕಳುಹಿಸಬೇಕು. ಅವನು ಸೈಯದರನ್ನು ನೋಡಿ, ನೆಲಕ್ಕೆ 'ಥೂ' ಎಂದುಗುಳಬೇಕು. ಆಮೇಲೆ ಜಗಳವೆಬ್ಬಿಸಿಕೊಂಡು ಹೊಡೆದಾಡಿಸಿಕೊಳ್ಳಬೇಕು. ಕೂಡಲೆ ಅದಕ್ಕೆ ಹಿಂದೂ-ಮುಸಲ್ಮಾನ ರೂಪ ಕೊಡಲ್ಪಡಬೇಕು. ಇದಿಷ್ಟಾದರೆ, ಉಳಿದದ್ದು ತನ್ನಂತೆಯೇ ನಡೆಯುತ್ತದೆ. ಹೊಡೆದಾಟ, ಬಡಿದಾಟಗಳು ಹೆಚ್ಚಾದಾಗ, ಹಿಂದೂ ಗಲ್ಲಿಯಲ್ಲಿರುವ ಸೇಟ್ ಅಮಾನುಲ್ಲಾರ ಮನೆಯ ಮೇಲೆ ಕಲ್ಲುಗಳನ್ನು ನಮ್ಮ ಕಡೆಯವರು ಹೊಡೆದು, ಹಿಂದುಗಳ ಮೇಲೆ ಹಾಕಬೇಕು, ಮುದುಕ ಸೇಟರು ಗಡಿಬಿಡಿಯಲ್ಲಿರುವಾಗ, ರಜಕ್ ಅವರನ್ನು ಕೊಂದುಹಾಕಬೇಕು. ಗಲಾಟೆಯಲ್ಲಿ ತಪ್ಪು ಹಿಂದುಗಳ ಮೇಲೆ ಹೊರಿಸಲ್ಪಡುತ್ತದೆ. ಇದಾಗಿ, ಅವರ ಕೈಯಲ್ಲಿ ನಗದಾಗಿರುವ ಏಳುಸಾವಿರ ರೂಪಾಯಿಯನ್ನು ದರೋಡೆ ಮಾಡಿ, ನಾವು ಈಗ ಹೇಳಿದ ಕಡೆ ಹೂತಿಡಬೇಕು. ಇಷ್ಟು ಹಣದ ವಿಚಾರ.

ಇತ್ತ, ಶೆಟ್ಟರ ಜನರು, ಈಗ ಹೇಳಿದ ಹುಡುಗಿಯೊಂದನ್ನು ಕಡಿದು, ಗುರುತು ಸಿಕ್ಕದ ಹಾಗೆ ಮಾಡಬೇಕು. ನಾನು, ಅವಳೇ ಉನ್ನೀಸಾ, ಹಿಂದೂಗಳು ಕೊಂದರು ಎಂಬುದನ್ನು ಅವಳ ತಂದೆಯ ತಲೆಗೆ ಹೊಗಿಸುತ್ತೇನೆ.... ಎಲ್ಲಾ ಶಾಂತವಾದ ಮೇಲೆ, ನಾನು ಮೆಲ್ಲನೆ ಊರು ಬಿಟ್ಟು ಅಲಹಾಬಾದಿಗೆ ಹೋಗಿ, ಉನ್ನೀಸಾಳನ್ನು ಮದುವೆಯಾಗುತ್ತೇನೆ....' ಇತ್ಯಾದಿ, ಇತ್ಯಾದಿ.



ಮೊಹರಂನಂದು ಬೆಳಗಿನಿಂದಲೂ ವಿಶೇಷವಾದ ತಳಮಳವು ಹರಡಿತ್ತು. ರಹಿಮತುಲ್ಲಾರ ಯೋಜನೆಯು ಜಾರಿಗೆ ಬರಲು ಅರ್ಧವೇ ಗಂಟೆ ಉಳಿದಿತ್ತಷ್ಟೆ.

ಮುಸಲ್ಮಾನರ ಕೇರಿಯಲ್ಲಿ ಭಯಂಕರವಾದ ಕೋಲಾಹಲವೆದ್ದಿತು. ಸಾಯದುಲ್ಲಾ ಸಾಹೇಬರ ಮನೆಗೆ ಬೆಂಕಿ ಬಿದ್ದಿತ್ತು. ಹಟ್ಟಿಯ ಅಟ್ಟದಲ್ಲಿ ಒಟ್ಟಿದ್ದ ಒಣ ಹುಲ್ಲಿಗೆ ಬೆಂಕಿ ಹತ್ತಿದ್ದರಿಂದ, ಮುಂದೆ ಬೆಂಕಿಯನ್ನು ಸುಲಭದಲ್ಲಿ ಆರಿಸುವುದಾಗಲಿಲ್ಲ. ಧಗೆಯೆದ್ದು ಬೆಂಕಿ ಉರಿದು ಆಕಾಶಕ್ಕೆ ಮುತ್ತಿಡುತ್ತಿತ್ತು. ಮನೆಯವರೆಲ್ಲ ಹೊರಗೋಡಿ ಬಂದು ಆಕ್ರೋಶ ಮಾಡುತ್ತಿದ್ದರು.

"ನನ್ನ ಮಗುವನ್ನು ಹೇಗಾದರೂ ಬದುಕಿಸಿರಪ್ಪಾ" ಎಂದು ಸಾಯದುಲ್ಲಾರ ಬೀಬಿ

ಬೊಬ್ಬಿಡುತ್ತಿದ್ದಳು. "ತೊಟ್ಟಿಲೊಳಗೆ ಮಲಗಿದೆ, ಯಾರಾದರೂ ಉಳಿಸಿರಪ್ಪಾ!"

ಎಲ್ಲರೂ ಕರುಣೆಯಿಂದ ನೋಡುತ್ತಿದ್ದರು. ಯಾರಿಗೂ, ಒಳಗೆ ಹೋಗಿ, ಮಗುವನ್ನು ಬದುಕಿಸುವ ಧೈರ್ಯ ಬರಲಿಲ್ಲ. ಬೆಂಕಿ ಹೊರ ಬಾಗಿಲ ಸುತ್ತಲೂ ಚಾಚಿತ್ತು. ಹೆರವರ ಜೀವ ವುಳಿಸಲು ತಮ್ಮ ಜೀವವನ್ನು ಬಲಿಗೊಡು ವವರಾರು?

ಬೆಂಕಿಯ ತಾಪ ಹೆಚ್ಚಿದಂತೆ, ಹೆಂಗಸಿನ ಬೊಬ್ಬೆಯೂ ಹೆಚ್ಚುತಿತ್ತು. ಸಮಾಧಾನಪಡಿಸು ವವರೇ ಹೊರತು, ಯಾರೂ ಮಗುವನ್ನುಳಿಸ ಲೆಳಸಲಿಲ್ಲ. ಆ ಸರ್ವಂಭಕ್ಷಿ ನೋಡುತ್ತ ನಿಂತಿದ್ದ ತರುಣನೊಬ್ಬ. ಹೆಂಗಸಿನ ಕರುಣ ರೋದನ ವನ್ನು ಕೇಳಿ, ಅವನ ಹೃದಯ ತುಂಬಿ ಬಂತೋ ಏನೋ. ತನ್ನ ಕೋಟನ್ನೂ, ಶರ್ಟನ್ನೂ ಕಳಚಿ ಒಗೆದು, ಅವನು, ಒಮ್ಮಿಂದೊಮ್ಮೆ ಉರಿಯುವ ಕಡೆಗೆ ಧಾವಿಸಿದ. ಎಲ್ಲರೂ ಬೇಡ ಬೇಡ ವೆಂದೊದರುತ್ತಿದ್ದರು. ತರುಣ ಕಿವಿಗೊಡದೆ, ಬಾಗಿಲನ್ನಾವರಿಸಿದ ಜ್ವಾಲೆಯ ಮಧ್ಯದಿಂದ, ಅಂಬಿನಂತೆ ಒಳ ಜಾರಿದನು. ಇಡಿಯ ಪ್ರೇಕ್ಷಕ ವೃಂದವೇ ಬೊಟ್ಟು ಕಚ್ಚಿ, ಎವೆಯಿಕ್ಕದೆ ನಿಂತು ನೋಡುತ್ತಿತ್ತು. ಎಲ್ಲರೂ ಹುಚ್ಚ ಹಿಂದೂ ತರುಣ, ಜೀವಕ್ಕೆ ಎರವಾಗುತ್ತಾನೆಂದೇ ಭಾವಿಸಿದರು.

ಒಂದೇ ನಿಮಿಷ. ಹಿಂದೂ ತರುಣ, ಮಗುವನ್ನು ಎದೆಗವಚಿಕೊಂಡು, ಜ್ವಾಲೆಯ ಮಧ್ಯದಿಂದ ಪುನಃ ಕಾಣಿಸಿಕೊಂಡ. ಭಯಂಕರ ವಾದೊಂದು ಮರದ ತುಂಡು, ಕೆಂಡ ಕೆಂಡವಾಗಿ ಕೆಳಗುರುಳುತ್ತಿತ್ತು. ಯುವಕ ಸ್ವಲ್ಪವೂ ಅಳುಕಲಿಲ್ಲ. ಒಂದೇ ಹಾರಿಗೆ ಬಾಗಿಲನ್ನು ದಾಟಿ ಹೊರಗೆ ಬಂದ. ಒಂದು ಸೆಕೆಂಡಿನಲ್ಲಿ ಆ ಜ್ವಾಲಾಮಯ ಖಂಡ ಕೆಳಗುರುಳಿತು.

ಯುವಕ ಮಗುವನ್ನು ತಂದು ತಾಯಿಯ ಕೈಲಿರಿಸಿದ. ಅವನ ಮೈಯೆಲ್ಲ ಜ್ವಾಲೆ ಹೊಡೆದು ಸುಟ್ಟುಹೋಗಿತ್ತು. ಪ್ರೇಕ್ಷಕರೆಲ್ಲ ಸೈ ಸೈಯೆಂದರು.

ಸಾಯದುಲ್ಲಾ ಖಾನರು ಕಣ್ಣೀರು ತುಂಬಿ ಹೇಳಿದರು,"ಸ್ವಾಮೀ. ನಾನು... ಹುಟ್ಟಿಸಿದ ತಂದೆ, ಇವಳು ಹೆತ್ತ ತಾಯಿ-ನಾವೆಲ್ಲ ಸುಟ್ಟು ಹೋಗು ತ್ತಿರುವ ಮಗುವಿಗಾಗಿ ಅಳುತ್ತಾ, ಅರಚುತ್ತಾ ಏನನ್ನೂ ಮಾಡಲಾರದೆ ಜೀವದಾಶೆಯಿಂದಿರು ವಾಗ, ನೀವು ಬೇರೆ ಜಾತಿಯವರಾಗಿ ನನ್ನ ಮಗು ವನ್ನು ಬದುಕಿಸಿದಿರಿ. ನಿಮ್ಮ ಜೀವವನ್ನು ಲೆಕ್ಕಿಸ ಲಿಲ್ಲ... ನಾನು ಜೀವನದಲ್ಲೆಲ್ಲಾ ನಿಮ್ಮ ಚಾಕರಿ ಮಾಡಿದರೂ ಈ ಋಣ ಪರಿಹಾರವಾಗದು."

ಅಷ್ಟರೊಳಗೆ ಯುವಕ ಮೂರ್ಛಿತ ನಾಗಿದ್ದ. ಬಹಳ ಉಪಚರಿಸಿದ ಮೇಲೆ ಕಣ್ಣು ತೆರೆದ.



ಈ ಒಂದು ಘಟನೆಯಿಂದ, ಹಿಂದೂ ಮುಸಲ್ಮಾನರಲ್ಲಿದ್ದ ಭಯಂಕರ ವೈಮನಸ್ಯವು, ಒಂದೇ ನಿಮಿಷದಲ್ಲಿ ತಣ್ಣಗಾಯಿತು. ತಿಂಗಳು ಗಟ್ಟಲೆಯಿಂದ ಉರಿಯುತ್ತಿದ್ದ ದ್ವೇಷವು, ತ್ಯಾಗ ತಣ್ಣೀರಿನಿಂದ ನಂದಿಹೋಯಿತು.

ರಹಿಮತುಲ್ಲಾರ ತಮ್ಮ ಕೃಷ್ಣಶೆಟ್ಟರ ಕೆಲಸ ದವನಿಗೆ ನಿಗದಿತ ಸಮಯಕ್ಕೆ ಸರಿಯಾಗಿ ಹೊಡೆ ಯಲೂ ಹೊಡೆದ. ಆದರೆ ಯಾವ ದಂಗೆಯೆಬ್ಬಿ ಸಲೂ ಆ ಹೊಡೆತಕ್ಕೆ ಸಾಧ್ಯವಾಗಲಿಲ್ಲ. ಬದಲಾಗಿ ಮುಸಲ್ಮಾನರೇ ರಹಿಮತುಲ್ಲಾರ ತಮ್ಮನನ್ನು, "ತಿಂದು ಬೆಳೆದಿದ್ದೀ, ಕೋಣನ ಹಾಗೆ, ಬೆಂಕಿಯಲ್ಲಿ ಮಗು ಸುಟ್ಟು ಹೋಗುತ್ತಿದ್ದಾಗ ಎಲ್ಲಿ ಹೋಗಿದ್ದಿ" ಎಂದು ಬೈದು, ಹೊಡೆದು ಭಂಗಿಸಿದರು.



(1940ರಲ್ಲಿ 'ಅಂತರಂಗ' ಪತ್ರಿಕೆಯಲ್ಲಿ ಪ್ರಕಟವಾದ ಕತೆ.)



# ಮುಕ್ತಿ



ಶಿರಸಿ ಕಡೆಯಿಂದ ಧಾರವಾಡ ಶಹರಕ್ಕೆ ಕಾಲೇಜು ಶಿಕ್ಷಣಕ್ಕಾಗಿ ಬಂದ ಗೌರೀಶ, ಮಖೀನ ಸ್ವಭಾವದವ. ಅಂತರ್ಮುಖಿ. ತನ್ನ ದುರ್ಬಲ ವ್ಯಕ್ತಿತ್ವದಿಂದ ಮುಕ್ತಿ ಪಡೆಯಲು ಆತ ಹಾತೊರೆಯುತ್ತಾನೆ. ಆಗ ಅವನಿಗೆ ಗುರುವಾಗಿ ಸಿಕ್ಕವನು, ಶ್ರೀಕಾಂತನೆಂಬ ಸ್ನೇಹಿತ. ಇವನಿಗಿಂತ ಕೆಲವು ವರ್ಷಗಳಷ್ಟು ಹಿರಿಯ. ಡಿಗ್ರಿ ಮುಗಿಸಿ ಮುಂದೆ ಓದುತ್ತಿರುವಾತ. ತನ್ನಲ್ಲಿ ಊನವಾಗಿರುವ ಗುಣಗಳನ್ನೆಲ್ಲಾ ಶ್ರೀಕಾಂತನಲ್ಲಿ ಕಾಣುತ್ತಾನೆ, ಗೌರೀಶ. 'ಹಿಂಜರಿಕೆಯಿಲ್ಲದ ಬಿರುಗಾಳಿಯ ರಭಸ, ಧ್ಯಾನ ತಲ್ಲೀನ ಜಲಪಾತದ ಮೈಮರೆತ', ಇತ್ಯಾದಿ. ಗೌರೀಶನಿಗೆ, ಶ್ರೀಕಾಂತ-ಆದರ್ಶ ಚಿಂತಕ, ಕವಿಹೃದಯದ ಭಾವಜೀವಿ, ಕಲ್ಪನಾ ಪ್ರಪಂಚದಲ್ಲಿ ಜೀವಿಸುವ ಸಮಾಜವಾದಿ, ಪರಂಪರಾಗತ ಜೀವನ ಮೌಲ್ಯಗಳನ್ನು ಚಿಟಿಕೆಯಲ್ಲಿ ಹಾರಿಸಿದ ಭಿನ್ನ ಮೌಲ್ಯಗಳ ಬಂಡಾಯಗಾರ- ಇತ್ಯಾದಿ. ಶ್ರೀಕಾಂತನ ವ್ಯಕ್ತಿತ್ವ ಗೌರೀಶನನ್ನು ಚುಂಬಕದಂತೆ ಸೆಳೆಯುತ್ತದೆ. ಗೌರೀಶ ಶ್ರೀಕಾಂತನ ಆರಾಧಕನಾಗುತ್ತಾನೆ. ಆತನ ಮೋಹದಲ್ಲಿ ಸಿಲುಕುತ್ತಾನೆ. ಇಬ್ಬರೂ ಒಂದೇ ಹಾಸಿಗೆಯಲ್ಲಿ ಮಲಗುತ್ತಿರುತ್ತಾರೆ. ತುಟಿಗಳು ಪರಸ್ಪರ ಸ್ಪರ್ಶಿಸುತ್ತಿರುತ್ತವೆ. ಹಾಗೆಂದು, ಶ್ರೀಕಾಂತ ಸಲಿಂಗಕಾಮಿಯಾಗಿದ್ದನೆಂದು ತಿಳಿಯಕೂಡದೆಂದು ಗೌರೀಶನ ಸ್ಪಷ್ಟೀಕರಣ. ಆತನೊಂದಿಗೆ ಒಂದೇ ಹಾಸಿಗೆಯಲ್ಲಿ ಮಲಗಿದ ತನಗೆ ಖಚಿತ ಮಾಹಿತಿಯೇ ಇದೆಯೆಂಬ ವಿವರಣೆ ಬೇರೆ! ಏನೇ ಇರಲಿ. ಈ ಸುಮಾರಿಗೆ, ಶ್ರೀಕಾಂತನ ತಂಗಿ ಕಾಮಿನಿ ಹಾಗೂ ಗೌರೀಶರ ಭೇಟಿಯಾಗುತ್ತದೆ.

ಕಾಮಿನಿ, ಹೊಳಪುಗಣ್ಣುಗಳ ಕೊಂಕಣಿ ಹೆಣ್ಣು. ಬಣ್ಣದ ಬೆಡಗಿನ ಪಾತರಗಿತ್ತಿ. ಚಟಪಟ ಮಾತುಗಳು, ತುಟಿಗಳಲ್ಲಿ, ಕಣ್ಣುಗಳಲ್ಲಿ, ಸದಾ ತುಳುಕುತ್ತಿರುವ ಕೆಣಕುವ ನಗು. ಮೊದಲ ನೋಟದಲ್ಲಿಯೇ ಗೌರೀಶನಿಗೆ ಕಾಮಿನಿಯ ಹುಚ್ಚು ಹಿಡಿಯುತ್ತದೆ. ಆದರೆ ಗೌರೀಶನಿನ್ನೂ ಮೈ ಚಳಿ ಬಿಡದ ಅನನುಭವಿ ಹುಡುಗ. ಹುಡುಗಿಯರು ಮುಂದೆ ನಿಂತರೆ, ನಾಲಿಗೆ ಒಣಗಿ, 'ಪೆಪೆಪೆ' ಗುಡುವ

ಪ್ರಕ್ಕ. ಕಾಮಿನಿಯೋ, ಫಾಸ್ಟ್‌ಗರ್ಲ್. ಮುಂದುವರಿದ ಹುಡುಗಿ- ಎಲ್ಲಾ ವಿಷಯಗಳಲ್ಲಿ. ಗೌರೀಶ ಭಾವಜೀವಿ (ಸೆಂಟಿಮೆಂಟಲಿಸ್ಟ್). ಕಾಮಿನಿಗೆ ಪ್ರೇಮ ಕೇವಲ ದೈಹಿಕ. ಅವಳಿಗಿರುವ ಆಗತ್ಯಗಳು ದೇಹದಲ್ಲಿ, ದೇಹದ ಅಂಗಾಂಗಗಳಲ್ಲಿ, ಮಾತ್ರ. ಗೌರೀಶ, ಕಣ್ಣುಗಳಲ್ಲಿ ತನ್ನ ಹೃದಯವನ್ನೇ ತುಂಬಿಕೊಂಡು, ಕಾಮಿನಿಯತ್ತ ಆರಾಧನಾಭರಿತ ನೋಟ ಬೀರಿದಾಗೆಲ್ಲ, ಹೆಚ್ಚೆಂದರೆ, ಅವಳು ಕನಿಕರ ಪಟ್ಟಾಳು- ಈ ಪೆದ್ದ ಶಿಖಾಮಣಿಯ ಪ್ರೇಮದ ಹೆಳವತನಕ್ಕಾಗಿ! ಗೌರೀಶ ತಾನೇ ನಿರ್ಮಿಸಿಕೊಂಡ ಸುಳಿಗಳಲ್ಲಿ ಒದ್ದಾಡುತ್ತ, ಕಾಮಿನಿಯ ಪ್ರೇಮಕ್ಕಾಗಿ ಹಂಬಲಿಸುತ್ತ, ಅಂತೂ ಕಾಲೇಜು ವಿದ್ಯಾಭ್ಯಾಸದ ಘಾಜಿಗಟ್ಟ ಮುಟ್ಟದಾಗ, ಕಾಮಿನಿ, ತನ್ನ ಸೆಕ್ಸ್ ಲೋಕದ, ಮೋಜಿನ ಜಾತ್ರೆಯ, ಫುಲ್ ರೌಂಡ್ ಮುಗಿಸಿರುವಳು. ಗೌರೀಶನ ಹೃದಯ ಒಡೆದು ಚೂರಾದರೂ ಕಾಮಿನಿಗೆ ಒಡೆದ ಸಪ್ಪಳ ಕೇಳುವದಿಲ್ಲ.

ಗೌರೀಶನಿಗೀಗ ಮುಕ್ತಿ ಪಡೆಯಲೇಬೇಕಾಗಿದೆ- ಕಾಮಿನಿಯ ಹಂಬಲದಿಂದ, ಶ್ರೀಕಾಂತನ ಪ್ರಭಾವದಿಂದ, ತನ್ನೊಳಗಿನ ಎಲ್ಲಾ ತಳಮಳಗಳಿಂದ, ತನ್ನ ಗುರಿ ತಪ್ಪಿದ ಗೊಂದಲಮಯ ಜೀವನದಿಂದ. ತನ್ನೂರಿಗೆ ಹೋದರೆ, ಅಲ್ಲಿ, ಅಪ್ಪ, ಯಾವಳನ್ನೋ ಇಟ್ಟುಕೊಂಡು, ಪ್ರತಿ ರಾತ್ರಿ ಅವಳ ಮನೆಯಲ್ಲೆ ಇರುತ್ತಾನೆಂದು ಅವ್ವ ಅಳುತ್ತ ಹೇಳುತ್ತಾಳೆ. ಕೊನೆಗೆ, ತನ್ನ ಮುಗ್ಧ ಪ್ರಪಂಚದಿಂದ ಹೊರ ಬರಲೇಬೇಕಾದ ಗೌರೀಶ, ವಾಸ್ತವ ಲೋಕದ ಸವಾಲುಗಳನ್ನು ಎದುರಿಸಲು ನಿರ್ಧರಿಸಿ, ಧಾರವಾಡವನ್ನು ತ್ಯಜಿಸಿ, ಮುಂಬೈಯಲ್ಲಿ ನೌಕರಿ ಹಿಡಿಯುತ್ತಾನೆ.

ಮುಂಬೈಯಲ್ಲಿ ಕ್ರಿಶ್ಚನ್ ಹುಡುಗಿಯೊಬ್ಬಳು ಗೌರೀಶನ ಗೆಳತಿಯಾಗುತ್ತಾಳೆ. ಅವಳು ಡೋಲಿ. ಡೋಲಿ ಹಾಗೂ ಗೌರೀಶರು ಯಾವುದೇ ಶರತ್ತುಗಳಿಲ್ಲದ, ಪರಸ್ಪರ ಬಂಧನಗಳಿಲ್ಲದ, ಮುಕ್ತ ಕಾಮ ಸಂಬಂಧವನ್ನು ಹೊಂದುತ್ತಾರೆ- ದೇಹಗಳ ಹಸಿವನ್ನು ಪರಸ್ಪರ ತಣಿಸುತ್ತಾರೆ. ಅದರ ಹೊರತು ಯಾವುದೇ ಸ್ವಾರ್ಥಕಾರಣ- ಪ್ರಯೋಜನಕಾರಣಗಳಿಲ್ಲದ ಶುದ್ಧ ಸ್ನೇಹದಲ್ಲಿ ದಿನಗಳನ್ನು ಕಳೆಯುತ್ತಾರೆ. ಅದೇ ವೇಳೆಗೆ ಒಬ್ಬ ಮರಾಠಿ ಹುಡುಗಿ, ಗೌರೀಶನನ್ನು ಒಲಿಸಿಕೊಳ್ಳಲು ಹವಣಿಸುತ್ತಿದ್ದಾಳೆ (ನೆರೆಯ ಶಶಿಕಲಾ) ಶಶಿಕಲಾ ಒಳ್ಳೇ ಹುಡುಗಿ, ಸಾದುಗಪ್ಪು ಮೈಬಣ್ಣ. ಕಣ್ಣುಗಳ ಮೇಲೆ ದಪ್ಪ ಚಾಳೀಸಿವೆ. ಗೌರೀಶನೊಡನೆ, ಶಾಲಾ ಶಿಕ್ಷಕಿಯಾದ ಈಕೆಯ ಒಡನಾಟದ ಉದ್ದೇಶ ಮಾತ್ರ, ಅತ್ಯಂತ ಸರಳ, ವ್ಯಾವಹಾರಿಕ; ಅದು ಮದುವೆ.

ಮುಕ್ತಿಯ ದಾರಿಯಲ್ಲಿದ್ದರೂ, ಗೌರೀಶನ ಅಂತರಂಗದ ತೊಳಲಾಟಗಳು ಇನ್ನೂ ಬಗೆಹರಿದಿಲ್ಲ. ಇತ್ತ ಶ್ರೀಕಾಂತ, ಭೀಕರ ಕ್ಷಯರೋಗಕ್ಕೆ ತುತ್ತಾಗಿ ಸೆನೆಟೋರಿಯಂ ಸೇರುತ್ತಾನೆ. ಸಾವಿನ ಮುಖದಲ್ಲಿಯೇ ಕೆಲವು ತಿಂಗಳು ಬದುಕಿ, ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ತಾರಿನಿಂದ ಸುದ್ದಿ ತಿಳಿದ ಗೌರೀಶನಿಗೆ ಆಘಾತವಾಗುತ್ತದೆ. ಶ್ರೀಕಾಂತ, ತನ್ನನ್ನು ನೋಡಲು ಸೆನೆಟೋರಿಯಂಗೆ ಗೌರೀಶ ಬಂದಾಗ ಹಾಗೂ ಆಮೇಲೆ ಮತ್ತು ಗೌರೀಶನಿಗೆ ಬರೆಯುತ್ತಿದ್ದ ಕಾಗದಗಳಲ್ಲಿ ವಸ್ತುಸ್ಥಿತಿಯನ್ನು ಮುಚ್ಚಿಟ್ಟು, ತನ್ನ ಆರೋಗ್ಯ ಸುಧಾರಿಸುತ್ತಿದೆಯೆಂದು ಆತನನ್ನು ನಂಬಿಸಿರುತ್ತಾನೆ.

ಶ್ರೀಕಾಂತನ ಸಾವಿನ ಸುದ್ದಿ ತಿಳಿದ ಕೂಡಲೇ ಗೌರೀಶ, ಧಾರವಾಡಕ್ಕೆ ಬರುತ್ತಾನೆ. ಶ್ರೀಕಾಂತ ತನ್ನ ಕೊನೆಯ ದಿನಗಳಲ್ಲಿ ಬರೆದ ಡೈರಿ ಓದುತ್ತಾನೆ. ಸಾವಿನತ್ತ ಸಾಗಿದಾಗಲೂ ಶ್ರೀಕಾಂತನ ಭಾವತೀವ್ರತೆ ಮಂಕಾಗಿಲ್ಲ. ಚಿಂತನೆಗಳ ಪ್ರಖರತೆ ಕುಂದಿಲ್ಲ. ಕೊನೆಯ ದಿನಗಳಲ್ಲಿ ಶ್ರೀಕಾಂತ ಬರೆದ ಕವಿತೆಗಳೆಲ್ಲ ಸಾವನ್ನು ಕುರಿತಾಗಿವೆ. ಸಾವಿನ ತೀರದಲ್ಲಿ ನಿಂತು ಕಂಡ ಬದುಕಿನ ಸಾಗರವನ್ನು ಕುರಿತು, ಮಾನವನ ಮೂಲಭೂತ ಏಕಾಕಿತನವನ್ನು ಕುರಿತು - ಎಲ್ಲಾ (existentialist) ಕ್ಲಿಷ್ಟ ಪ್ರತಿಮಾ ವಿಧಾನದಲ್ಲಿ.





ಡೈರಿ, ಗೌರೀಶನನ್ನು ಚಕಿತಗೊಳಿಸುವ ರಹಸ್ಯವೊಂದನ್ನೂ ಹೊರಹಾಕುತ್ತದೆ. ಅದು ಸೆನೆಟೋರಿಯಂ ನರ್ಸ್ ಒಬ್ಬಳೊಡನೆ ಶ್ರೀಕಾಂತನ ದೈಹಿಕ ಸಂಬಂಧ. ಆಕೆ, ಹಸಿದ ತೋಳ ಕುರಿಯನ್ನು ನುಂಗುವಂತೆ ಪ್ರತಿ ರಾತ್ರಿ, ಶ್ರೀಕಾಂತನನ್ನು ಕಬಳಿಸುತ್ತಿರುತ್ತಾಳೆ. ಶ್ರೀಕಾಂತ, ತನ್ನ ಒಳಗೆ ಒಂದು ಹಸಿದ ಮೃಗವಿರುವುದನ್ನು ಕಂಡು ಚಕಿತಗೊಳ್ಳುತ್ತಾನೆ. ತನ್ನ ಅಸ್ತಿತ್ವದಲ್ಲಿಯೇ ಇರುವ ಕಾಮವನ್ನು ಒಪ್ಪಿಕೊಳ್ಳಲು ನಿರಾಕರಿಸುವ ಶ್ರೀಕಾಂತ, ತನ್ನಿಂದ ನಿಯಂತ್ರಿಸಲಾಗದ ಕಾಮದಿಂದ ಮುಕ್ತಿಯನ್ನು ಪಡೆಯಲು ಕೊನೆಗೆ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಹೀಗೆ ತನ್ನ ಬದುಕು-ಸಾವುಗಳನ್ನು ತನ್ನ ಸ್ವಂತ ನಿರ್ಧಾರಕ್ಕೆ ಒಳಪಡಿಸಿಕೊಳ್ಳುವದರಲ್ಲಿ ಸಫಲತೆ ಪಡೆಯುತ್ತಾನೆ.

ಶ್ರೀಕಾಂತನ ಮನೆಯಲ್ಲಿ ಗೌರೀಶ, ಕಾಮಿನಿಯನ್ನು ಭೆಟ್ಟಿಯಾಗುತ್ತಾನೆ... ಈಗವಳು ಮೊದಲಿನ ಕಾಮಿನಿಯಲ್ಲ. ಹಲಿಯುಳಿದು, ಹೈರಾಣಾಗಿ, ಬಿಳಿಚಿಕೊಂಡಿದ್ದಾಳೆ. ಕಣ್ಣುಗಳು ಬತ್ತಿವೆ. ಶ್ರೀಕಾಂತನ ಸ್ನೇಹದ ಕಾರಣಕ್ಕಾಗಿಯಾದರೂ ಗೌರೀಶ, ತನ್ನನ್ನು ಮದುವೆಯಾಗಬಹುದೇನೋ ಎಂಬ ಆಸೆ ಇಟ್ಟುಕೊಂಡಿದ್ದಾಳೆ. ಆದರೆ ಗೌರೀಶ, ಮೊದಲಿನ ಭಾವುಕ ಗೌರೀಶನಾಗುಳಿದಿಲ್ಲ. ಮುಂಬೈ ಜೀವನ ಅವನಿಗೆ ಹೊಸ ವಾಸ್ತವ ಪ್ರಜ್ಞೆ ಕಲಿಸಿದೆ. ಕಾಮಿನಿಗೆ ವಿದಾಯ ಹೇಳಿ, ಮುಂಬೈ ರೈಲನ್ನೇರುತ್ತಾನೆ.

ವಿದೇಶದಲ್ಲಿ ಅವನಿಗೊಂದು ನೌಕರಿ ಸಿಕ್ಕಿದೆ. ಹೊರಡುವ ಮುನ್ನ, ಮುಂಬೈಯಲ್ಲಿ, ಮೊದಲು ಶಶಿಕಲಾ ಸಿಗುತ್ತಾಳೆ. ಅವಳಿಗೂ ವಿದಾಯ ಹೇಳಿ ಗೌರೀಶ, ತನಗೆ ಮದುವೆಯ ವಿಚಾರ ಇಲ್ಲವೆಂದು ತಿಳಿಸುತ್ತಾನೆ. ತಾನೆಂದೂ ಅಂಥ ಭಾವನೆ ಅವಳಲ್ಲಿ ಹುಟ್ಟುವಂತೆ ನಡೆದುಕೊಂಡಿಲ್ಲವೆನ್ನುತ್ತಾನೆ. ತಮ್ಮಿಬ್ಬರ ಒಡನಾಟದ ಯಾವ ಕ್ಷಣದಲ್ಲಿಯೂ, ತನ್ನ ಹೃದಯದ ಬಡಿತ ಏರಲಿಲ್ಲವೆನ್ನುತ್ತಾನೆ. ಶಶಿಕಲಾ, ಕೇವಲ, 'ಖರುಚ'? (ನಿಜಕ್ಕೂ) ಎಂದು ಕೇಳುತ್ತಾಳೆ. ಪಾಟಿಯ ಮೇಲೆ ಬಳಪವನ್ನು ಒತ್ತಿ ಎಳೆದಾಗ ಹುಟ್ಟುವ ಸಪ್ಪಳದಂಥ ನೋವಿನ ಗೆರೆ, ಅವಳ ಉದ್ಗಾರದಲ್ಲಿರುತ್ತದೆ.

ಡೋಲಿಯನ್ನು ಸಂಧಿಸಿ, ವಿದಾಯ ಹೇಳಲು ಬಂದಾಗ, ಅವಳ ಗರ್ಭದಲ್ಲಿ ಶಿಶು ಮೂಡಿರುವದು ಗೌರೀಶನಿಗೆ ಗೊತ್ತಾಗುತ್ತದೆ. ಡೋಲಿ, ಗೌರೀಶನಿಗೆ, ಶಾಂತವಾಗಿ ಗುಡ್‌ಬೈ ಹೇಳುತ್ತಾಳೆ. ಗೌರೀಶ, 'ನನ್ನೊಂದಿಗೆ ಬರುತ್ತೀಯಾ?' ಎಂದು ಡೋಲಿಯನ್ನು ಕರೆಯುತ್ತಾನೆ. ಉತ್ತರವಾಗಿ ಡೋಲಿಯ ಮುಖದಲ್ಲಿ ಮಂದಹಾಸ ಮಿನುಗುತ್ತದೆ. ಗೌರೀಶನಿಗೆ ವರ್ಜಿನ್ ಮೇರಿಯ ದಿವ್ಯಹಾಸ ಕಂಡ ಭಾಸವಾಗುತ್ತದೆ.

('ನವ್ಯ ಸಾಹಿತ್ಯ'ದ ಎಲ್ಲಾ ಹೂರಣ ಹುದುಗಿಸಿಕೊಂಡು ಬಂದ ಮೊದಲ ಕಾದಂಬರಿ-ಶಾಂತಿನಾಥ ದೇಸಾಯರು ಅಂದಿನ ಯುವಪೀಳಿಗೆಗೆ ನೀಡಿದ 'ಮುಕ್ತಿ'.)

**☐ ವ್ಯಾಸ ದೇಶಪಾಂಡೆ**

**ಬೆಳಗಾಂ**





# ಲಟಗಿ ಪೂಜಾ

ಒಂದು ಸಣ್ಣ ಹಳ್ಳಿ. ಆ ಹಳ್ಳ್ಯಾಗ ಸಂಗಣ್ಣ ಅಂತ ಬಡರೈತ. ಅವಾ ಬುದ್ಧಿಯೊಳಗ ಬಾರಿ ಬೆರಕಿ. ಇರೋ ತಸ್ಸ ಸ್ವಲ್ಪ ಜಮೀನಿನ್ಯಾಗ ವ್ಯವಸಾಯ ಮಾಡಿಕೊಂತ, ಉಳಿದ ದಿವಸದಾಗ, ಬ್ಯಾರದವರ ಹೊಲಕ್ಕ ಹೊಕ್ಕಿದ್ದ. ಹಿಂಗಿರುವಾಗ, ಅವನ ಹೊಲದಾಗ ದೇವಿದೊಂದು ಸಣ್ಣ ಗುಡಿ ಇತ್ತು. ಆ ದೇವಿಗೆ, ಸುತ್ತ ಮುತ್ತಲ ಇರೋ ರೈತರು, ಅಮವಾಸಿಗೆ, ಹುಣವಿಗೆ ನಡಕೊಂತಿದ್ರು. ಅವರೆಲ್ಲಾ, 'ತಾಯಿ, ನಮ್ಮ ಹೊಲ್ದಾನ ಪೀಕು ಹುಲ್ಸಾಗಲಿ, ನಮ್ಮ ಹೊಲಾ ಕಾಯಿವಾ, ನಿನ್ನ ಕರುಣಾದಿಂದ ಸಾಕಷ್ಟ ಪೀಕು ಬಂದವಂದ್ರ, ನಿನಗ ಕೋಳಿ ಬ್ಯಾಟಿ ಮಾಡಸತೇನಿ, ಸೀರಿ ಕುಬಸಾ ಉಡಿ ತುಂಬತೇನಿ' ಅಂತ ನಾನಾ ತರ ಹರಕಿ ಹೊತ್ತು, ಬೇಡಿಕೊಂಡು ಹೊಕ್ಕಿದ್ರು. ಇವ್ರದೆಲ್ಲಾ ನೋಡಿ, ಈ ಬೆರಕಿ ರೈತ, ತಾನೂ, ಆ ದೇವಿ ಹತ್ರ ಬಂದು, ಎರಡು ಕೈ ಜೋಡಿಸಿ, 'ನೋಡವಾ, ತಾಯಿ ನಾನನಕರು ನೋಡಿಯಾ, ಬಡವಾ, ಇರೋ ದೀಟ ಹೊಲಾ, ನನ್ನ ಹೊಲದ್ದು ನಿನಗ ಭಾರವಾ ತಾಯಿ', ಅಂದಾ. ಇವನ ದೈನಾಸಾ ನೋಡಿ ದೇವಿ, 'ಅಲ್ಲೋ! ಸಂಗಪ್ಪ, ಎಲ್ಲಾರು ನನಗ, ಕೋಳಿ ಬ್ಯಾಟ, ಉಡಿ ಸೀರಿ ಉಡಸತೇನಿ ಅಂತ ಹೇಳೇಳಿ ಹೊಕ್ಕಾರ, ನಿನ್ನ ಹೊಲಾ ಚಂದಾಗಿ ಪೀಕು ಬರುವಂಗ ಕಾಯತೇನಿ ನೀ ಏನು ಕೊಡಾಂವಪಾ' ಅಂತ ಸಂಗಪ್ಪನ ಕೇಳ್ತಾಳ ಅದಕ ಅವಾ, 'ತಾಯಿ, ಈ ವರ್ಷ ನನ್ನ ಹೊಲಾ ಬೇಸಂಗ ಬೆಳ್ದು, ಪೀಕು ಸಾಕಷ್ಟು ಬಂತಂದ್ರ, ನಾ ನಿನಗ ಲಟಗಿ ಪೂಜಾ, ಮುಟಗಿ ನೈವೆದ್ಯಾ, ಆರಕಾಲಿನ ಬ್ಯಾಟ ಇವಿಷ್ಟು ಸಲ್ಲಿಸತೇನಿವಾ' ಅಂದಾ. ಎಲ್ಲಾರ್ದು ಒಂತರಾ ಹರಕಿ ಆದ್ರ, ಇವುಂದೊಂದು ವಿಚಿತ್ರ ಹರಕಿ ಐತಲ್ಲಾ ಅಂತ, 'ಬಿಟ್ಟು ಮನಿಗೆ ಹೋಗು, ಹೊಲದ್ದು ನನ್ನ ಭಾರ' ಅಂತ ದೇವಿ ಅವುಗ ಹೇಳಿ ಕಳ್ಳಿದ್ಲು.

ಇತ್ಲಾಗ ದೇವಿ, ಈ ಬೆರ್ಕಿ ಭಕ್ತನ ಕಾಣಿಕೆ ದೊಡ್ಡ ಇರಬೇಕೆಂತ, ಎಲ್ಲಾರ ಹೊಲದಕಿಂತ ಇವ್ನ ಹೊಲ್ದ ಮ್ಯಾಲ ಹೆಚ್ಚ ಲಕ್ಷ್ಯ ವಹಿಸಿ, ಹೊಲಾ ಕಾಯಾಕತ್ತು. ಆಮ್ಯಾಲ, ದಿನಾ ಕಳದ್ಹಂಗ, ಸಮಯಕ್ಕ ಸರಿಯಾಗಿ, ಎಲ್ಲಾರ ಪೀಕು ಬಂದ್ವು. ದೇವಿ ಎಲ್ಲ ಭಕ್ತರ ಪೀಕಿಗಿಂತ ಇ ಭಕ್ತನ ಪೀಕು ಹೆಚ್ಚು ಬರುವ್ಹಂಗ ಕರುಣಾನೂ ಮಾಡಿದ್ಲು. ಮಳಿ ಬೆಳಿ ಸರಿಯಾಗಿ ಬಂದಿಂದ, ಎಲ್ಲಾರು, ದೇವಿಗೆ ತಾವು ಹರ್ಕಿ ಕಾಣಿಕಾ ಮುಟ್ಟಸತೇನಿ ಅಂತ ಹೇಳಿ ಹ್ವಾದಂಗ, ಅವೆಲ್ಲ ತಂದು, ದೇವಿಗೆ ಮುಟ್ಟಿಸಿದ್ರು. ಅವ್ರುದೆಲ್ಲ ಹರಕಿ ಮುಟ್ಟಿಂದ. ಇನ್ನ, 'ಈ ಲಟಗಿ ಪೂಜಾ, ಆರಕಾಲಿನ ಬ್ಯಾಟಿ ಕೊಡತೇನಿ' ಅಂತ ಹೇಳಿ ಹ್ವಾದ ಭಕ್ತನ್ನ ಕಾಯಕೊಂಡ ಕುಂತ್ಲು. ಮುಂದ, ಆ ಬೆರಕಿ ಭಕ್ತನು ಬಂದಾ. ಅವ ಬಂದಿದ್ದು ನೋಡಿ, 'ತಂದೇನಪಾ ನನ್ನ ಕಾಣಿಕಾ' ಅಂದ್ಲು. 'ಹುಂ ತಾಯಿ, ತಂದೇನಿವಾ ನಿನ್ನ ಕಾಣಿಕಾನ,' ಅಂತ ಆಕಿಗೆ, ಪೂಜಾ ಗಿಜಾ ಮಾಡಿ, ತಾ ಹೇಳಿ ಹ್ವಾದಂತ ಕಾಣಿಕಾನ, ದೇವಿಗೆ ಸಲ್ಲಸಾಕಂತ, ಮೊದಲೆದ್ದು, ಲಟಗಿ ಪೂಜಾ-ದೇವಿ ಸುತ್ಲು ಮೂರು ಸಾರೆ ಲಟಕ್ ಲಟಕ್ ಅಂತ ಸುತ್ತಾಕಿ ಲಟಗಿ ಹೊಡ್ದು, 'ಇದ ನೋಡವಾ ತಾಯಿ, ನಂದು ಲಟಗಿ ಪೂಜಾ' ಅಂದ. ಇನ್ನ ಎರಡೇನದ್ದು-ಮುಟಗಿ ನೈವೆದ್ಯ ಸಲ್ಲಿಸಬೇಕಲ್ಲ? ತನ್ನೆರಡು ಮುಟಗಿ ದೇವಿ ಮುಂದ, ಮುಂದ ಮಾಡಿ ಮುಟಗಿ ನೈವೆದ್ಯ ಮಾಡಿದಾ. ಕಡೆದ್ದು, ಆರಕಾಲಿನ ಬ್ಯಾಟಿ. ಇದು ಏನ ಇರಬೇಕಂತ ದೇವಿ ನೋಡಕೊಂಡ ಕುಂತ್ಲು. ಇವಾ ಆಕಿ ಮುಂದ ಕುಂತಗೊಂಡ. ಅದ ಹೊತ್ತಿಗೆ, ಒಂದು ನೊಣಾ ಹಾರಿ ಬಂತು. ಅದನ ಗಪ್ಪನ ಹಿಡಿದವ್ನ, 'ಇದೋ ತಾಯಿ ಆರ ಕಾಲಿನ ಬ್ಯಾಟಿ' ಅಂದವ್ನ, ಅದನೂ ಆಕಿಗೆ ಸಲ್ಲಿಸೆಬಿಟ್ಟಾ. ಇಷ್ಟೆಲ್ಲಾ ಬುದ್ಧಿ ಉಪೇಗ ಮಾಡಿ, ನನಗ ಹೇಳಿದ್ಹಂಗ ಹರಕಿ ಮುಟ್ಟಿಸಿದ ಇವಾ, ಎಷ್ಟು ಮೂಬೆರಕಿ ಇರಬೇಕೆಂತ್ಹೇಳಿ, ದೇವಿಗೆ ನಗಿ ಬಂತು. ಅವನ ಈ ಬುದ್ದಿಗೆ ಮೆಚ್ಚಿ, ಅವುಗ ಆಶೀರ್ವಾದ ಮಾಡಿದ್ಲಂತ.



ಕುಂದಗೋಳ

□ **ಸುರೇಶ ಬಡಿಗೇರ**

(ನಾನು ಚಿಕ್ಕವನಿದ್ದಾಗ ನಮ್ಮಮ್ಮ ಹೇಳಿದ್ದು).



ಕರೀಗೌಡ ಬೀಚನಹಳ್ಳಿ

# ಹಕ್ಕಿ ಬೆಂದೊ ಹಕ್ಕಿಮರಿ ಬೆಂದೊ

ಒಂದು ಕಾಲಕ್ಕೆ ಯಥೇಚ್ಛವಾಗಿ ಬೀಳುತ್ತಿದ್ದ ಮಳೆಯೂ ಈಗ ಬೀಳುತ್ತಿಲ್ಲ. ಕಳೆದ ಹತ್ತು ವರ್ಷಗಳಿಂದ ಈ ಪ್ರದೇಶದಲ್ಲಿ ಬಿದ್ದಿರುವ ಮಳೆಯ ಸರಾಸರಿ ಪ್ರಮಾಣವನ್ನು ಹವಾಮಾನ ಇಲಾಖೆಯವರು ಪ್ರಕಟಿಸಿದ್ದಾರೆ. ಅದರ ಪ್ರಕಾರ, ಮಳೆ ಬೀಳುವ ಪ್ರಮಾಣ ಕಳೆದ ಹತ್ತು ವರ್ಷಗಳಲ್ಲಿ ವರ್ಷದಿಂದ ವರ್ಷಕ್ಕೆ ಇಳಿಮುಖವಾಗುತ್ತಾ ಹೋಗಿದೆ.

ಕೆರೆಕಟ್ಟೆ, ಬಾವಿ-ಕಾಲುವೆಗಳು ಬತ್ತುತ್ತಾ ಸಾಗಿವೆ. ರೈತರು ಕೊರೆಸಿದ ಕೊಳವೆ ಬಾವಿಗಳಲ್ಲೂ, ಕಳೆದ ಐದಾರು ವರ್ಷಗಳಿಂದ, ನೀರಿನ ಪ್ರಮಾಣ ಕಡಿಮೆಯಾಗುತ್ತಾ ಹೋಗಿದೆ. ಜಲದ ಕಣ್ಣುಗಳೂ ಬತ್ತಿಹೋಗುತ್ತಿವೆ ಎಂದು ರೈತರು ಹೇಳುತ್ತಿದ್ದಾರೆ. ಬೇಸಿಗೆ ಕಾಲದಲ್ಲಂತೂ ನೀರಿಗೆ ಇನ್ನೂ ಬರ. ನಮ್ಮೂರಿನಲ್ಲಿ ಕುಡಿಯುವ ನೀರನ್ನೂ ಮಾರುವ ಸ್ಥಿತಿ ಬಂದಿರುವುದನ್ನು ಕಂಡು ಹಿರಿತಲೆಗಳು ಬೆರಗಾಗಿದ್ದಾರೆ.

ನನ್ನ ಬಾಲ್ಯದಲ್ಲಿ, ಪ್ರಕೃತಿ ಹಚ್ಚಹಸುರಿನಿಂದ ತುಂಬಿ ಕಂಗೊಳಿಸುತ್ತಿದ್ದುದನ್ನು ನಾನಿನ್ನೂ ಮರೆತಿಲ್ಲ. ಮರಗಿಡ, ಬಳ್ಳಿ-ಕಳ್ಳಿಗಳು ಯಾವಾಗಲೂ ಹಸಿರು

ತುಂಬಿ ಚೆಲುವಾಗಿರುತ್ತಿದ್ದವು. ನಮ್ಮೂರ ಕೆರೆಗಳಿಗೆ ಬರುತ್ತಿದ್ದ ಹಕ್ಕಿಪಕ್ಷಿಗಳಿಗೆ ಲೆಕ್ಕವಿರಲಿಲ್ಲ. ನಾನಾ ಥರದ ಬಣ್ಣಬಣ್ಣದ ಹಕ್ಕಿಗಳು ಬರುತ್ತಿದ್ದವು. ಮಳೆಗಾಲದಲ್ಲಿ ಕೆರೆಕಟ್ಟೆ, ಬಾವಿಗಳು ತುಂಬಿ ತುಳುಕಾಡುತ್ತಿದ್ದವು. ಕೆರೆಗಳು ದಿನಗಟ್ಟಲೆ ಕೋಡಿ ಬಿದ್ದು ಹರಿಯುತ್ತಿದ್ದವು. ಜಲಚರ ಪ್ರಾಣಿಗಳು ಎಲ್ಲಂದರಲ್ಲಿ ಹರಿದಾಡುತ್ತಿದ್ದವು. ಬೆಟ್ಟಗುಡ್ಡಗಳಿಂದ ಬರುತ್ತಿದ್ದ ಮೊಲ, ನರಿ, ಕರಡಿ, ಚಿರತೆ ಮಂಗಗಳಿಗೆ ಲೆಕ್ಕವಿರಲಿಲ್ಲ. ನಮ್ಮೂರ ಬೆಟ್ಟದಲ್ಲಿ, ಪ್ರಪಂಚದಲ್ಲಿ ಎಲ್ಲೂ ಇಲ್ಲದ ಮಂಗನ ಸಂತತಿಯೊಂದು ವಿಶಿಷ್ಟವಾಗಿತ್ತು. ಆದರೆ ಈಗ ಅದು ಕಾಣುತ್ತಿಲ್ಲವಂತೆ.

ನಮ್ಮೂರ ಕೆರೆಯಲ್ಲಿ ಹುಟ್ಟುತ್ತಿದ್ದ ಬಣ್ಣಬಣ್ಣದ, ಬಗೆಬಗೆಯ ತಾವರೆ ಹೂವುಗಳನ್ನು ನೋಡುವುದೇ ಚಿಕ್ಕಂದಿನಲ್ಲಿ ನನ್ನ ವಾರಿಗೆಯವರಿಗೆ ಒಂದು ಆನಂದದ ನೋಟವಾಗಿರುತ್ತಿತ್ತು. ಅದಕ್ಕೆ ಜನ, ತಾವರೆಕೊಳ ಎಂದೇ ಹೆಸರಿಟ್ಟಿದ್ದರು. ಬೆಟ್ಟಕ್ಕೆ ಮಂಗನಬೆಟ್ಟ ಎಂದು ಹೆಸರಿಟ್ಟ ಹಾಗೆ. ಆದರೆ ಈಗ ಆ ಕೊಳದಲ್ಲಿ ತಾವರೆಯ ಬೀಜದ ಸಂತತಿಯೇ ನಾಶವಾದಂತಿದೆ.

ನನಗೆ ಗೊತ್ತಿರುವ ಹಾಗೆ, ನಮ್ಮೂರಿನ ಸುತ್ತಮುತ್ತಲಿನ ರಾಶಿರಾಶಿ ಬೆಟ್ಟಗುಡ್ಡಗಳು ಹಸಿರಿನಿಂದ ಕಣ್ಣನ್ನು ಕುಕ್ಕುತ್ತಿದ್ದವು. ಕಣ್ಣಿಗೆ ಕಾಣುವವರೆಗೂ ಮೈಲಿ ಮೈಲಿ ದೂರ ಹಬ್ಬಿದ ಪರ್ವತಗಳ ಸಾಲುಸಾಲುಗಳು, ಸಂಜೆಹೊತ್ತು, ಮೋಡದ ಹಿನ್ನೆಲೆಯಲ್ಲಿ ಆಕಾಶಕ್ಕೂ ಭೂಮಿಗೂ ಸೇತುವೆಯ ಸೋಪಾನ ಕಟ್ಟುತ್ತಿದ್ದವು. ನನ್ನಂಥ ಅನೇಕರನ್ನು ಬಾನಂಗಳಕ್ಕೆ ಕರೆದೊಯ್ದು, ತೂಗುಯ್ಯಾಲೆಯಲ್ಲಿ ತೂಗುತ್ತಿದ್ದವು, ತೇಲಾಡಿಸುತ್ತಿದ್ದವು.

ಆದರೆ, ನಮ್ಮೂರು, ಕಳೆದ ಹತ್ತು-ಹನ್ನೆರಡು ವರ್ಷಗಳಲ್ಲಿ ಇಷ್ಟು ಅಗಾಧವಾಗಿ ಬೆಳೆಯುತ್ತದೆಂದು ನಾನಾಗಲಿ, ನನ್ನ ವಾರಿಗೆಯವರಾಗಲಿ ಕನಸು ಮನಸಿನಲ್ಲೂ ಊಹಿಸಿರಲಿಲ್ಲ. ಒಂದು ಕಾಲಕ್ಕೆ ನಮ್ಮೂರು, ನನಗಂತು ತುಂಬಾ ಪ್ರೀತಿಯ ಊರಾಗಿತ್ತು. ಆ ನಿಸರ್ಗದ ನಡುವೆ ಕಾಲ ಸರಿಯುವುದೇ ತಿಳಿಯುತ್ತಿರಲಿಲ್ಲ. ಆದರೆ ಈಗ, ಈ ಊರುಬಿಟ್ಟು ಎಲ್ಲಿಗಾದರೂ ಓಡಿಹೋಗಿ ಬಿಡುವ ಅನ್ನಿಸುತ್ತದೆ. ಎಲ್ಲಿಗೆ ಓಡಿಹೋಗುವುದು? ಈ ನಡುಗಾಲದಲ್ಲಿ? ಎಂಬ ಪ್ರಶ್ನೆಗಳು ದುತ್ತೆಂದು ಎದುರಾಗಿ, ಏನೂ ತಿಳಿಯದೆ ಕೂತಲ್ಲೇ ಕಂಗಾಲಾಗಿದ್ದೇನೆ.



ಸ್ವಲ್ಪ ದಿನದ ಹಿಂದೆ, ನನ್ನೂರಿನಲ್ಲಿ, ಕೆಲವರಿಗೆ ಕಣ್ಣುಗಳು ಹಾಳಾಗುತ್ತಿವೆ ಎಂದು, ಕೆಲವರಿಗೆ ಶ್ವಾಸಕೋಶದ ತೊಂದರೆ ಆಗುತ್ತಿದೆ ಎಂದು, ಕೆಲವರಿಗೆ ಹುಚ್ಚು ಹಿಡಿದಿದೆ ಎಂದು ಕೇಳಿದೆ. ಆದರೆ ಈ ಸುದ್ದಿಯನ್ನು ಮೊದಮೊದಲಿಗೆ ನಾನು ನಂಬಲಿಲ್ಲ. ಯಾರೋ ಪರಿಸರವಾದಿಗಳು, ಬೇಕುಬೇಕು ಅಂತ ಹುಯಿಲೆಬ್ಬಿಸುತ್ತಿದ್ದಾರೆಂದು ಕೆಲವರು ಮಾತನಾಡಿಕೊಳ್ಳುತ್ತಿದ್ದುದ್ದನ್ನು ಕೇಳಿಸಿಕೊಂಡೆ. ಆಮೇಲೆ ತಿಳಿಯಿತು; ಊರಿನಲ್ಲಿ ಜನಗಳಿಗೆ ನಿಜವಾಗಿಯೂ ಕಾಯಿಲೆಗಳು ಹಾಗೂ ಮಾನಸಿಕ ಅಸ್ವಸ್ಥತೆ ಶುರುವಾಗಿವೆ ಎಂದು. ಇದರಿಂದ ಬಡವರ ಮತ್ತು ಬಲ್ಲಿದರ ನಡುವೆ, ರಾಜಕಾರಣಿಗಳ ಮತ್ತು ಜನಸಾಮಾನ್ಯರ ನಡುವೆ, ಅಧಿಕಾರಿಗಳ ಮತ್ತು ರೈತರ ನಡುವೆ. ಕಾರ್ಮಿಕರ ಮತ್ತು ಕೈಗಾರಿಕೋದ್ಯಮಿಗಳ ನಡುವೆ ಅಸ್ಪಷ್ಟವಾದ ಅಸಹನೆ, ಸಿಟ್ಟು, ದ್ವೇಷ ಬೆಳೆದು ಬೆಟ್ಟವಾಗುತ್ತಿರುವುದನ್ನು ಗಮನಿಸಿದೆ. ಈ ಸಿಟ್ಟಿನ ಗುಪ್ತಗಾಮಿನಿ, ಯಾವತ್ತು, ಎಲ್ಲಿ, ಸಿಡಿದು ಸ್ಫೋಟಗೊಳ್ಳುತ್ತದೋ ಎಂಬ ಸಂಶಯ ನನ್ನನ್ನು ಕಾಡುತ್ತಿತ್ತು. ಇದು ಬೆಂಕಿಯಾಗಿ ಹತ್ತಿ, ಧರೆಯೆಲ್ಲಾ ಉರಿದು, ಪ್ರಳಯಕ್ಕೆ ನಾಂದಿಯಾದಾದೋ ಎಂಬ ಗುಮಾನಿ ನನಗೆ ಇತ್ತು. ಈ ಪ್ರಳಯದ ಬೆಂಗಾಡಿನಲ್ಲಿ ಮತ್ತಾವ ಬಂಡಾಯದ ಮೊಳಕೆಗಳು ಚಿಗುರೊಡೆಯುತ್ತವೋ

ಎಂದು ಕಾಯುತ್ತಿದ್ದೆ. ಇದರಿಂದ ನನಗೆ ವಿಚಿತ್ರವಾದ ಭಯವೊಂದು ಬಂದಿತ್ತು. ಆತಂಕವೊಂದು ಶುರುವಾಗಿತ್ತು.

ನೋಡುನೋಡುತ್ತಿದ್ದಂತೆಯೇ ನನ್ನ ಕಣ್ಣುಗಳ ಮುಂದೆಯೇ ನಮ್ಮೂರು ಬೆಳೆದು, ಬೆಳೆದು ಪಟ್ಟಣವಾಗಿಬಿಟ್ಟಿತು. ನಗರದ ಎಲ್ಲಾ ವಾಸನೆಗಳೂ ಅಲ್ಲಿಗೆ ರವಾನೆಯಾಗಿಬಿಟ್ಟಿದ್ದವು. ನಾಗರೀಕತೆಯ ಹೊರರೂಪದ ಎಲ್ಲಾ ವಸ್ತುಗಳು ಅಲ್ಲಿಗೆ ಧಾವಿಸಿದವು. ನಮ್ಮೂರಿನ ಜನ, ತಮ್ಮ ಮೂಲ ಗುಣವನ್ನ, ಚಹರೆಯನ್ನ ಬದಲಾಯಿಸಿಕೊಳ್ಳುವಲ್ಲಿ, ಹೊಂದಿಸಿಕೊಳ್ಳುವಲ್ಲಿ ನಿತ್ಯ ಹೆಣಗಾಡುತ್ತಿದ್ದುದ್ದನ್ನು ಗಮನಿಸಿದ್ದೆ. ಅದೆಲ್ಲಿಂದ ಈ ಊರಿಗೆ ಜನರು ಬಂದರೋ? ಬಂದರು, ಬಂದರು ಜೇನುನೊಣಗಳಂತೆ ಬಂದರು. ಕಾರ್ಖಾನೆಗಳು, ಕಾರ್ಮಿಕರು, ದೊಡ್ಡ ದೊಡ್ಡ ವಾಹನಗಳು, ಕಾರುಗಳು, ಟ್ರಕ್ಕುಗಳು, ಬಸ್ಸುಗಳು ಎಲ್ಲಾ ಬಂದವು. ಬಂದೋ... ಬಂದೋ ಊರಿನಲ್ಲಿ ಎಲ್ಲಿ ನೋಡಿದರೂ ಅವೇ. ಊರಿನ ಮೂಲದ ತಾಲುಗಂಬವನ್ನು ಮರೆಸಿ, ನನ್ನೂರು ಬೆಳೆದು ನಗರವಾಗಿಬಿಟ್ಟಿತು.

ಯಾವ ಕೇಡುಗಾಲಕ್ಕೆ ನಮ್ಮೂರು ಹೀಗೆ ಬೆಳೆಯಿತೊ? ಕೇಡುಗಾಲಕ್ಕೆ ಹುಂಜ ಮೊಟ್ಟೆ ಇಡುತ್ತದಂತೆ! ಬೆಳೆಯಿತು, ಬೆಳೆಯಿತು, ಬೆಳೆಯಿತು, ಹದ್ದುಬಸ್ತಿಲ್ಲದೆ ಬಸವಿಯ ಹಾಗೆ ಬೆಳೆಯಿತು. ರಸ್ತೆ, ಚರಂಡಿ, ಫುಟ್‌ಪಾತ್, ಮನೆ ಎಲ್ಲವೂ ಒಂದಾಗಿಯೇ ಬೆಳೆದವು. ವೇಶ್ಯೆಯರು, ತಲೆಹಿಡುಕರು, ದಲ್ಲಾಳಿಗಳೂ ಹುಟ್ಟಿಕೊಂಡರು. ಕೊಲೆಗಾರರು, ಮೋಸಗಾರರು, ಲಂಚಕೋರರೂ ಹುಟ್ಟಿಕೊಂಡರು.

ನಮ್ಮೂರಿಗೆ ದೇಶ-ವಿದೇಶಿ ಕಂಪನಿಗಳೆಲ್ಲಾ ಬಂದು ತಳ ಊರಿಬಿಟ್ಟವು. ಎಲ್ಲೆಲ್ಲಿಂದಲೋ ಬಂಡವಾಳಶಾಹಿಗಳು ಬಂದು, ತಮ್ಮ ಬಂಡವಾಳ ತೊಡಗಿಸಿದರು. ಸರ್ಕಾರವೂ, ಅಭಿವೃದ್ಧಿಯ ಹೆಸರಿನಲ್ಲಿ, ಅನೇಕ ಕಂಪನಿಗಳನ್ನು ಕರೆದು ಹಾಸಿಗೆ ಹಾಸಿಕೊಟ್ಟಿತು. ಅಭಿವೃದ್ಧಿ ಎಂದರೆ, ಬರೀ ಆರ್ಥಿಕ ಮೂಲ ಒಂದೇ ಆದರೆ, ಆಗದು. ಯಾವುದೇ ಅಭಿವೃದ್ಧಿ, ಅದು ಕಲೆ, ಸಂಸ್ಕೃತಿ, ಸಾಹಿತ್ಯದ ಅಭಿವೃದ್ಧಿಯನ್ನೂ ಒಳಗೊಳ್ಳದಿದ್ದರೆ, ಆ ಸಮಾಜ ಏಳಿಗೆ ಪಡೆಯಲಾರದು ಎಂದು ಯಾರೋ ಮೊದಮೊದಲು ವಿರೋಧಿಸಿದ್ದೂ ಉಂಟು. ಆದರೆ ಅವರ ಮಾತನ್ನು ಯಾರೂ ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ನಮ್ಮೂರಿನ ನಿಧಿ, ಅವರಿಗೆ ಅಕ್ಷಯಪಾತ್ರೆಯಾಗಿ ಪರಿಣಮಿಸಿಬಿಟ್ಟಿತ್ತು. ಯಾವ ಪುಣ್ಯಾತ್ಮನಿಗೆ ಈ ನಿಧಿ ಗೋಚರಿಸಿತ್ತೊ?

ಪ್ರತಿದಿನ ನಿಂತ ಮಧ್ಯಾಹ್ನ, ದೇವರ ಮಂಡೆಯ ಮೇಲೆ ಹೂ ತಪ್ಪಿದರೂ, ಇದು ತಪ್ಪದೆ ನಾನು ಮನೆಯಲ್ಲಿ ಕೂತಿದ್ದಾಗ ಕೇಳಿಸುತ್ತದೆ. ಬೆಟ್ಟಕ್ಕೆ ಡೈನಾಮೈಟ್ ಇಟ್ಟು ಸಿಡಿಸುವ ಶಬ್ದ. ನನ್ನ ಕಿವಿಗಳೂ, ಶಬ್ದ ಕೇಳಿ ಕೇಳಿ, ತೂತು ಬಿದ್ದುಹೋಗಿವೆ. ಆ ಶಬ್ದಕ್ಕೆ, ಕೂತಲ್ಲೇ ನೆಲ ಅದರುತ್ತದೆ. ಮನೆ ಅಲ್ಲಾಡಿದಂಗಾಗುತ್ತದೆ. ಆ ಶಬ್ದಕ್ಕೆ, ಕೋಳಿ ಕುರಿಗಳುತ, ಎತ್ತು ಎಮ್ಮೆಗಳೂ ಬೆಚ್ಚುತ್ತವೆ. ಹುಟ್ಟಿದ ಮಕ್ಕಳು ಕಿರುಚುತ್ತವೆ, ರಚ್ಚೆ ಹಿಡಿಯುತ್ತವೆ. ಏಳೆಂಟು ಮೈಲಿ ದೂರದವರೆಗೂ, ಆ ಶಬ್ದ, ಅಲ್ಲಿ ಏಳುವ ಹೊಗೆ, ಧೂಳು ಮುಗಿಲು ಮುಟ್ಟುತ್ತದೆ. ಇದರಿಂದ, ನನ್ನ ಮನೆ ಎಲ್ಲಿ ನನ್ನ ಮೇಲೇ ಬಿದ್ದು ಹೋದಾದೋ ಎಂಬ ಭಯ ನನಗೆ ಬಂದು, ಬೆಚ್ಚುತ್ತಿದ್ದೇನೆ. ಹೇಳಿಕೇಳಿ ನಮ್ಮದು, ಹಳೆಯ, ಕಲ್ಲು ಮಾಳಿಗೆ ಮನೆ. ಅದರ ತಳಕ್ಕೆ ಸಿಕ್ಕರೆ ನನ್ನ ಒಂದು ಮೂಳೆಯೂ ಸಿಗುವುದಿಲ್ಲ. ಈ ಭಯದಲ್ಲೇ ಜೀವ ಹಿಡಿದು ಬದುಕಬೇಕಾಗಿದೆ. ಆಯಸ್ಸು ತುಂಬಿಸಬೇಕಾಗಿದೆ. ಇದು ಶುರುವಾಗಿ ಏಳೆಂಟು ವರ್ಷವೇ ಆಯಿತು.

ಊರಿನ ತುಂಬಾ, ಕಚ್ಚಾ ಕಚ್ಚಿಣದ ಅದಿರು ತುಂಬಿಕೊಂಡು ಓಡಾಡುವ ಟ್ರಕ್ಕುಗಳು. ಅವು ರಾಕ್ಷಸರ ಥರ ಮನುಷ್ಯರ ಮೇಲೇ ಬರುತ್ತವೆ. ಅವುಗಳಿಗೆ ಮನುಷ್ಯರು ಲೆಕ್ಕಕ್ಕೇ ಇಲ್ಲ. ಕೋಳಿ,

ಕುರಿ ಮೇಲೆ ನುಗ್ಗಿದಂತೆ ನುಗ್ಗುತ್ತವೆ. ವಾರಕ್ಕೆ ಮೂರ್‍ನಾಲ್ಕು ಸಾವು ಇದ್ದೇ ಇರುತ್ತದೆ. ಇಡೀ ಊರು ಧೂಳು, ಧೂಳು, ಧೂಳು. ಎಲ್ಲವೂ ಧೂಳುಮಯ. ಟ್ರಕ್ಕುಗಳು ಧೂಳೆಬ್ಬರಿಸಿಕೊಂಡು ಊರೊಳಕ್ಕೆ ನುಗ್ಗುವಾಗ ನೋಡಬೇಕು. ಅಸ್ತಮಾರೋಗಿಗಳು ಆ ಧೂಳಿಗೆ ಸಿಕ್ಕಾಕಿಕೊಂಡರೆ ಗೊಟಕ್ ಅನ್ನುತ್ತಾರೆ. ಒಂದು ಕಾಲಕ್ಕೆ ಶುದ್ಧವಾಗಿದ್ದ ಈ ಊರು, ಈಗ ಗಬ್ಬು ಹಿಡಿದು ನಾರುತ್ತಿದೆ. ಮೂಗು ಬಿಟ್ಟರೆ, ಮುಖಕ್ಕೆ ನಾತ ಸಿಡಿಯುತ್ತದೆ. ಖನಿಜದ ಘಾಟು ಮುತ್ತುತ್ತದೆ.

ಈ ಊರು ಪೇಟೆಯಾದ ಮೇಲೆ ತಿಪ್ಪೇಗುಂಡಿಗಳು, ಕೊಳಗೇರಿಗಳು ಜಾಸ್ತಿಯಾಗಿವೆ. ಇವುಗಳನ್ನು ಹಂದಿಗಳು ಕ್ಲೀನ್ ಮಾಡುತ್ತಿವೆ ಎಂದು ಸಂಬಂಧಿಸಿದ ಇಲಾಖೆಯ ಅಧಿಕಾರಿಗಳು ಹೇಳುತ್ತಾರೆ. ನಾವು ಮಾಡಬೇಕಾದ ಕೆಲಸವನ್ನು ಹಂದಿಗಳೇ ಮಾಡುತ್ತಿವೆ ಎಂದು ಕಾರ್ಪೋರೇಟರ್‌ಗಳು ನಿಶ್ಚಿಂತರಾಗಿದ್ದಾರೆ. ಆದರೆ ಈಗ ಹಂದಿಗಳನ್ನು ಕೊಲ್ಲುತ್ತಿದ್ದಾರೆ. ಹಂದಿಗಳಿದ್ದರೆ ಜನಗಳಿಗೆ ಮೆದುಳು ಜ್ವರ ಬರುತ್ತದೆಂದು ಆರೋಗ್ಯ ಇಲಾಖೆಯ ಅಧಿಕಾರಿಗಳು ಹೇಳುತ್ತಿದ್ದಾರೆ. ಆದ್ದರಿಂದ ಅವುಗಳನ್ನು ಕಂಡಲ್ಲಿ ಗುಂಡಿಕ್ಕಿ ಸಾಯಿಸಲು ಆದೇಶವಿತ್ತಿದ್ದಾರೆ. ಆದರೆ ಅವುಗಳನ್ನು ಕೊಲ್ಲಬೇಡಿ ಎಂದು ಕಾರ್ಪೋರೇಟರ್‌ಗಳು ಹೇಳುತ್ತಿದ್ದಾರಂತೆ. ಇದರಿಂದ ಈ ಎರಡೂ ಇಲಾಖೆಯ ಅಧಿಕಾರಿಗಳಿಗೆ ಒಳಗೊಳಗೇ ಮುಸುಕಿನ ಯುದ್ಧ ನಡೆಯುತ್ತಿದೆ. ಎಲ್ಲಿ, ಯಾವಾಗ, ಯಾರು, ಯಾರಿಗೆ, ಏನೇನು ಹತ್ತಿಕೊಳ್ಳುತ್ತದೋ ಹೇಳುವುದಕ್ಕೆ ಆಗುವುದಿಲ್ಲ.

ಊರಿನ ಸುತ್ತಮುತ್ತ ಇದ್ದ ಬೆಟ್ಟಗುಡ್ಡಗಳೆಲ್ಲಾ, ನೋಡುನೋಡುತ್ತಿದ್ದಂತೆಯೇ, ನನ್ನ ಕಣ್ಣು ಮುಂದೆಯೇ ಕರಗಿಹೋದವು. ಮರಗಿಡಗಳು ನೆಲಕಚ್ಚಿದವು. ದಿನೇ ದಿನೇ ಬಿಸಿಲಿನ ತಾಪವೂ ಜಾಸ್ತಿಯಾಗಿದೆ. ವರ್ಷದ ತುಂಬಾ ಬಿಸಿಲು, ಬಿಸಿಲು, ಅತಿ ಬಿಸಿಲು; ಧೂಳು, ಬಿಸಿಲಿಗೆ ಮಾತ್ರ ಇಲ್ಲಿ ಎಂದೂ ಬರಗಾಲ ಬರುವುದಿಲ್ಲ. ಒಮ್ಮೊಮ್ಮೆ ಗಾಳಿ, ಚಳಿಯೂ ಅತಿಯಾಗುತ್ತದೆ. ಇಡೀ ವಾತಾವರಣದಲ್ಲಿ, ಪರಿಸರದಲ್ಲಿ ಅಗಾಧ ಬದಲಾವಣೆಯುಂಟಾಗಿದೆ. ಯಾಕೆ ಹೀಗಾಯ್ತು? ಪ್ರಕೃತಿ ನಾಶದಿಂದ, ಪರಿಸರದ ಹಾನಿಯಿಂದ ಸಮಸ್ತ ಜೀವಸಂಕುಲವೇ ತತ್ತರಿಸಿಹೋಗಿದೆ. ಸಸ್ಯ, ಪ್ರಾಣಿ, ಪಕ್ಷಿ, ಮಾನವ ಎಲ್ಲಾ ಜಾತಿಯೂ ತೊಂದರೆಗೆ ಒಳಗಾಗಿವೆ.

ರಸ್ತೆಯಲ್ಲಿ ಜನ, ಧೂಳಿನ ವಾಸನೆ ಕುಡಿಯಲಾರದೆ, ಕರವಸ್ತ್ರದಿಂದ ಮೂಗು, ಬಾಯಿ ಮುಚ್ಚಿಕೊಂಡು ಓಡಾಡುತ್ತಿದ್ದಾರೆ. ಜನರ ಕಣ್ಣುಗಳು ಹಾಳಾಗುತ್ತಿವೆ. ಪೇಟೆಯಲ್ಲಿ ಕನ್ನಡಕದ ಅಂಗಡಿಗಳು ಜಾಸ್ತಿಯಾಗತೊಡಗಿವೆಯಂತೆ. ಊರಿನ ಸುತ್ತಮುತ್ತಲಿನ ಬೆಟ್ಟಗುಡ್ಡಗಳಲ್ಲಿ ತೆಗೆಯುತ್ತಿರುವ ಕಚ್ಚಾಕಬ್ಬಿಣದ ಅದಿರು, ಗಾಳಿಯಲ್ಲಿ ತೇಲಾಡುತ್ತಾ ತೇಲಾಡುತ್ತಾ ಬಂದು, ಇಡೀ ಊರನ್ನೂ ಊರಿನ ಜನರನ್ನೂ, ಆವರಿಸಿಬಿಟ್ಟಿದೆ. ಆ ಕಬ್ಬಿಣದ ಅಣುಗಳಿಂದ ಜನರ



ಕಣ್ಣುಗಳು, ಶ್ವಾಸಕೋಶಗಳು ಅಪಾಯಕ್ಕೆ ಸಿಕ್ಕಿಕೊಂಡಿವೆ. ಇದರಿಂದ ಆಸ್ಪತ್ರೆಯಲ್ಲಿ ರೋಗಿಗಳೂ ದಿನೇ ದಿನೇ ಜಾಸ್ತಿಯಾಗುತ್ತಿದ್ದಾರೆಂದು, ಸಂಶೋಧಕರೊಬ್ಬರು ಅಧ್ಯಯನ ಮಾಡಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ್ದಾರಂತೆ. ಆ ವರದಿಯನ್ನು ಕೇರ್ ಮಾಡುವವರು ಯಾರು?

ಒಂದು ದಿನ, ನನ್ನ ಗೆಳತಿಯೊಬ್ಬಳಿಗೆ ಉಷಾರಿಲ್ಲವೆಂದು ಗೊತ್ತಾಗಿ, ನೋಡಿಕೊಂಡು ಬರುವ ಅಂತ ಆಸ್ಪತ್ರೆಗೆ ಹೋದೆ. ಅಲ್ಲಿಗೆ ಹೋಗಿ ನೋಡಿದಾಗ, ಅವಳಿಗೆ ಕಣ್ಣುಗಳು ತೂತು ಬಿದ್ದಿವೆ ಎಂದು ಗೊತ್ತಾಯಿತು. ಕೇಳಿದ್ದಕ್ಕೆ, ಪ್ರತಿದಿನ ಗಾಳಿಯಲ್ಲಿ ತೇಲಿ ಬರುವ ಕಬ್ಬಿಣದ ಅಣುಗಳು ಕಣ್ಣಿಗೆ ತಾಗಿ, ತಾಗಿ ಅವಳ ಕಣ್ಣುಗಳು ತೂತುಬಿದ್ದಿವೆ ಎಂದು ಡಾಕ್ಟರು ವಿವರಿಸಿದರು. ಅಂತಹುದೇ ನೋವನ್ನು ಊರಿನಲ್ಲಿ ಹಲವಾರು ಮಂದಿ ಅನುಭವಿಸುತ್ತಿದ್ದಾರೆಂದು, ಅವರೆಲ್ಲಾ ಕಣ್ಣುಗಳನ್ನು ಶಾಶ್ವತವಾಗಿ ಕಳೆದುಕೊಂಡು ಅಂಧರಾಗುವ ಸಾಧ್ಯತೆಯೇ ಹೆಚ್ಚಾಗಿದೆ ಎಂದು ನನಗೆ ಬಣ್ಣಿಸಿದರು. ಎಲ್ಲರೂ, ಈ ಪೇಟೆಯ ಧೂಳಿನಿಂದ, ಗಾಳಿಯಿಂದ, ಬಿಸಿಲಿನಿಂದ ಪಾರಾಗಲು, ಅದರಲ್ಲೂ ಕಬ್ಬಿಣದ ಅದಿರಿನ ಅಣುಗಳಿಂದ ಪಾರಾಗಲು ತಪ್ಪದೆ ಹಗಲು, ರಾತ್ರಿ ಕಡ್ಡಾಯವಾಗಿ ಕಪ್ಪು ಕನ್ನಡಕ ಅಥವಾ ತಂಪು ಕನ್ನಡಕ ಧರಿಸಬೇಕೆಂದು ಉಪದೇಶವಿತ್ತರು.

ಇದರ ಪರಿಣಾಮವೋ ಏನೋ. ಇಡೀ ಪೇಟೆಯಲ್ಲಿ, ಹಗಲು, ರಾತ್ರಿ ಕಪ್ಪು ಕೂಲಿಂಗ್ ಗ್ಲಾಸ್ ಧರಿಸಿ ಓಡಾಡುವವರ ಸಂಖ್ಯೆ ಜಾಸ್ತಿಯಾಗಿತ್ತು. ಇನ್ನೊಂದು ದಿನ, ನನ್ನ ನೆಂಟರೊಬ್ಬರಿಗೆ ಉಷಾರಿಲ್ಲದೆ ನರ್ಸಿಂಗ್ ಹೋಂನಲ್ಲಿ ಸೇರಿದ್ದಾರೆಂದು ಗೊತ್ತಾಗಿ, ಅವರನ್ನು ನೋಡಿ ಬರಲು ಹೋದೆ. ಅವರು ಕೆಮ್ಮುತ್ತಾ ಮಲಗಿದ್ದರು. ಕೆಮ್ಮಿ, ಕೆಮ್ಮಿ ಅವರು ಸಣಕಲ ದೇಹಿಯಾಗಿಹೋಗಿದ್ದರು. ಅವರ ಮೈಮೇಲಿನ ಮೂಳೆಗಳೆಲ್ಲಾ ಕಾಣುತ್ತಿದ್ದವು; ದೊಕ್ಕೆ ಎದ್ದು ಕಾಣುತ್ತಿತ್ತು; ಕಣ್ಣುಗಳು ಗುಳಿಬಿದ್ದಿದ್ದವು. ಅವರು ಮೊದಲು ತುಂಬಾ ಚೆನ್ನಾಗಿದ್ದರು. ಈಗ ಅವರನ್ನು ಪತ್ತೆ ಹಚ್ಚುವುದೇ ಕಷ್ಟವಾಯಿತು. ಅವರಿಗೆ ಡಸ್ಟ್ ಅಲರ್ಜಿ ಅಂಥ ಎಂತಹದೋ ದರಿದ್ರದ ರೋಗ ತಗುಲಿಕೊಂಡಿದೆ ಎಂದು ತಿಳಿಯಿತು. ಕೇಳಿದ್ದಕ್ಕೆ ಡಾಕ್ಟರು, ಅದು ವಾಸಿಯಾಗುವುದಿಲ್ಲ, ಸಾಯುವವರೆಗೂ ಅವರ ಜೊತೆಯಲ್ಲೇ ಇರುತ್ತದೆ ಎಂದರು. ನಿತ್ಯ, ಧೂಳಿನ ಸೇವನೆಯಿಂದ, ಕಬ್ಬಿಣದ ಅಂಶವನ್ನು ಗಾಳಿಯಲ್ಲಿ ಯಥೇಚ್ಛವಾಗಿ ಸೇವನೆ ಮಾಡುವುದರಿಂದ ಅವರಿಗೆ ಈ ರೋಗ ಕಾಣಿಸಿಕೊಂಡಿದೆ ಎಂದು ವಿವರಿಸಿದರು. ಇದರಿಂದ ಶ್ವಾಸಕೋಶದ ಭಾಗಗಳಿಗೆ ತೊಂದರೆ ಉಂಟಾಗಿದೆ ಎಂದು ಹೇಳಿದ ಅವರು ಇವಕ್ಕೆ ಔಷಧಿಯೇ ಇಲ್ಲ, ಇದು ಈಗೀಗ, ಈ ಊರಿನಲ್ಲಿ, ಹಲವಾರು ಜನಗಳಿಗೆ ತಗುಲಿದೆ. ಇನ್ನು ಮೇಲೆ ಜಾಸ್ತಿಯಾಗುತ್ತದೆ. ಇವರು ಬದುಕಬೇಕೆಂದರೆ ಸ್ಥಳವನ್ನು ಬದಲಾಯಿಸುವುದು ಸೂಕ್ತ ಎಂದರು. ಈ ವಯಸ್ಸಿನಲ್ಲಿ ಈಗ ಅವರು ಮನೆ, ಮಠ, ಮಡದಿ, ಮಕ್ಕಳು ಬಿಟ್ಟು ಎಲ್ಲಿಗೆ ಹೋಗುವುದಕ್ಕೆ ಸಾಧ್ಯ ಎಂದು ಅವರನ್ನು ಪ್ರಶ್ನಿಸಿದೆ. ಹೋಗದಿದ್ದರೆ ಬಂದುದ್ದನ್ನು ಅನುಭವಿಸಬೇಕು ಎಂದು ಹೇಳಿ ನಿಟ್ಟುಸಿರುಬಿಟ್ಟರು.

ಸ್ವಲ್ಪ ದಿನ ಬಿಟ್ಟು ಮತ್ತೊಂದು ದಿನ, ದೂರದ ಸಂಬಂಧಿಯೊಬ್ಬರಿಗೆ ತುಂಬಾ ಸೀರಿಯಸ್ಸಾಗಿದೆ ಎಂದು ತಿಳಿದು, ಅವರ ಅಡ್ಮಿಟ್ ಮಾಡಿದ್ದ ಸರ್ಕಾರಿ ಆಸ್ಪತ್ರೆಗೆ ಹೋದೆ, ನೋಡುವ ಎಂದು. ಅಲ್ಲಿ ಅವರಿಗೆ ಡ್ರಿಪ್ಸ್ ಹಾಕಿ, ಮಂಚದ ಮೇಲೆ ಮಲಗಿಸಿದ್ದರು. ಅವರು ಹೆಣದ ಥರ ಮಲಗಿದ್ದರು. ಅವರಿಗೆ ಇನ್ನೂ ಪ್ರಜ್ಞೆ ಬಂದಿರಲಿಲ್ಲ. ಕಣ್ಣುಗಳನ್ನು ತೇಲಿಸುತ್ತಿದ್ದರು, ತುಂಬಾ ಸುಸ್ತಾಗಿದ್ದರು. ವಾಂತಿ ಭೇದಿ ಎರಡೂ ಆಗಿತ್ತಂತೆ. ಗ್ಲೂಕೋಸ್, ಅವರ ಶರೀರಕ್ಕೆ ಒಂದೊಂದೇ ತೊಟ್ಟು ಹೋಗುತ್ತಿತ್ತು. ಅವರ ತಲೆದೆಸೆಯಲ್ಲಿ ಅವರ ಗಂಡ, ಗಲ್ಲಕ್ಕೆ ಕೈಕೊಟ್ಟು

ಕೊಟ್ಟಿದ್ದರು. ಕೇಳಿದ್ದಕ್ಕೆ ಅವರು, ತಮ್ಮ ಹೆಂಡತಿಗೆ ಐದಾರು ಬಾರಿ ಹಿಂದೆಹಿಂದೆಯೇ ವಾಂತಿಭೇದಿ ಆಯ್ತು ಅಂದರು. ಡಾಕ್ಟರನ್ನು ಕೇಳಿದ್ದಕ್ಕೆ ಅವರಿಗೆ ಕರುಳ ಬೇನೆ ಶುರುವಾಗಿದೆ, ಇದು ಈ ಊರಿನಲ್ಲಿ ಮಾಮೂಲು ಎಂದರು. ಊರಿನಲ್ಲಿ ಶುದ್ಧ ನೀರು ಸಿಗುತ್ತಿಲ್ಲ. ಉಪ್ಪಿನಂಶ ಜಾಸ್ತಿಯಾಗಿದೆ. ಕೆರೆ ನೀರನು ಶುದ್ಧಿ ಮಾಡದೆ, ಹಾಗೇ ನೇರವಾಗಿ ಕುಡಿಯುತ್ತಾರೆ. ಇದರಿಂದ ಜನಗಳಿಗೆ ವಾಟರ್ ಇನ್ಫೆಕ್ಷನ್ ಆಗುತ್ತಿದೆ ಎಂದು ಡಾಕ್ಟರು ವಿವರಿಸಿದರು.

ಊರು ರೋಗಗಳ ಆಗರವಾಗುತ್ತಿದೆ. ಯಾಕೆ ಇದೆಲ್ಲಾ ಹೀಗೆ ಆಯ್ತು ಅಂದುಕೊಂಡು, ಚಿಂತಾಕ್ರಾಂತನಾಗಿ, ಮನೆಗೆ ದಾರಿಯಲ್ಲಿ ಹೊರಟಿದ್ದಾಗ, ರಸ್ತೆ ಪಕ್ಕದಲ್ಲಿ ಒಂದು ಮದುವೆ ನಡೆಯುತ್ತಿದ್ದುದು ಕಣ್ಣಿಗೆ ಬಿತ್ತು. ಅದೊಂದು ಅದ್ದೂರಿ ಮದುವೆ. ಶ್ರೀಮಂತರ ಮನೆಯ ಮದುವೆ. ಅಲ್ಲಿ ನಿಂತಿದ್ದ ಥರಾವರಿ ಕಾರುಗಳಿಗೆ, ವ್ಯಾನುಗಳಿಗೆ, ಸ್ಕೂಟರ್, ಬೈಕುಗಳಿಗೆ ಲೆಕ್ಕವಿರಲಿಲ್ಲ. ಸುಮಾರು ಒಂದು ಮೈಲಿ ದೂರ, ಶಾಮಿಯಾನ ಹಾಕಲಾಗಿತ್ತು. ನೂರಾರು ಟಿವಿಗಳನ್ನು ಇಡಲಾಗಿತ್ತು. ಯಾರೋ, ಊರಿನ ದೊಡ್ಡ ಕೈಗಾರಿಕೋದ್ಯಮಿಯ ಮಗಳೊಬ್ಬಳ ಮದುವೆ ಎಂದು ಹೇಳಿದರು. ಐದಾರು ವರ್ಷದಲ್ಲಿ ಆತ ಇಲ್ಲಿಗೆ ಬಂದು ದೊಡ್ಡ ಕುಳ ಆದ ಎಂದರು. ಗಂಡು ಬಾಂಬೆಯಲ್ಲಿ ದೊಡ್ಡ ಇಂಡಸ್ಟ್ರಿಯಲಿಸ್ಟ್ ಎಂದರು. ಅಲ್ಲಿ ಇಡೀ ಪೇಟೆಗೆ ಪೇಟೆಯೇ ನೆರೆದಿತ್ತು. ಅಷ್ಟರಲ್ಲಿ ನನಗೆ, ಆ ಗುಂಪಿನಲ್ಲಿ ಪರಿಚಿತನೊಬ್ಬ ಸಿಕ್ಕಿದ. ಬನ್ನಿ ಊಟ ಮಾಡುವ ಎಂದು ನನ್ನನ್ನೂ ಕರೆದ. ನಾಲ್ಕು ಥರದ ಸ್ವೀಟ್ಸ್ ಮಾಡಿದ್ದಾರೆ ಎಂದ. ಮದುವೆಗೆ ಬಂದವರಿಗೆಲ್ಲಾ ಒಂದು ಷರ್ಟ್‌ಪೀಸ್ ಕೊಡುತ್ತಾರೆ ಎಂದ. ಹೆಂಗಸರಿಗೆ ಒಂದೊಂದು ಸೀರೆ ಕೊಡುತ್ತಾರೆ ಎಂದ. ಹಾಗಿದ್ದರೆ ಅವನ ಆದಾಯ ಎಷ್ಟಿರಬೇಕು ಎಂದೆ. ಅವನಿಗೆ ಲೆಕ್ಕ ತಿಳಿಯಲಿಲ್ಲ. ನಾನು, ಬೇಡ, ನೀವು ಹೋಗಿ ಊಟಮಾಡಿ ಬನ್ನಿ



ಎಂದು ಹೇಳಿ ಬಂದೆ. ಆ ಮದುವೆಯ ಚಿತ್ರ ಇನ್ನೂ ನನ್ನ ಕಣ್ಣುಗಳಿಂದ ಮಾಸಿರಲಿಲ್ಲ.

ಈ ಎಲ್ಲಾ ಚಿತ್ರಗಳನ್ನು ತಲೆಗೆ ತುಂಬಿಕೊಂಡು ಮನೆಕಡೆ ಹೊರಟೆ. ಮನಸ್ಸು ಗೊಂದಲದ ಬೀಡಾಗಿತ್ತು. ಎದುರಿಗೆ ಒಂದು ಲಾರಿ ನುಗ್ಗಿ ಬಂತು. ನನ್ನ ಮೇಲೇ ನುಗ್ಗಲು ಬಂತು. ನಾನು ಪಕ್ಕಕ್ಕೆ ಓಡಿ ಮೋರಿಯಲ್ಲಿ ಬಿದ್ದೆ. ಕಾಲಿಗೆ ಏಟಾಗಿತ್ತು. ಮೂಳೆ ಮುರಿದಿರಬಹುದು ಅನ್ನಿಸತೊಡಗಿತು. ಯಾರೋ ಓಡಿ ಬಂದು ಎತ್ತಿದರು. ಎದ್ದು, ಕುಂಟುತ್ತಾ ನಡೆದೆ. ಕಾಲು, ಹೆಜ್ಜೆ ಇಡಲಾರದಷ್ಟು ನೋಯುತ್ತಿತ್ತು. ಜನ ಕೂಗಿಕೊಂಡರೂ ಲಾರಿ ನಿಲ್ಲಲಿಲ್ಲ. ಹೊರಟೇ ಹೋದ. ಜನ, ಸದ್ಯ, ನಿಮ್ಮ ಪ್ರಾಣಕ್ಕೆ ಏನೂ ಅಪಾಯ ಆಗಲಿಲ್ಲವಲ್ಲ, ನಿಮ್ಮ ಪುಣ್ಯ, ಹೋಗಿ ಎಂದು ಹೇಳಿ ಹೋದರು. ನಿತ್ಯ, ಬೆಟ್ಟದಿಂದ ಪೇಟೆಯೊಳಗಿನ ರೈಲ್ವೆ ನಿಲ್ದಾಣಕ್ಕೆ, ಕಬ್ಬಿಣದ ಕಚ್ಚಾ ಅದಿರಿನ ಉಂಡೆಗಳನ್ನು ಸಾಗಿಸುವ ರಾಕ್ಷಸ ಲಾರಿಗಳು ಅವು. ರೈಲ್ವೆ ಸ್ಟೇಷನ್ನಿನಿಂದ ಆ ಮಾಲು, ಗೂಡ್ಸ್‌ಗಳಲ್ಲಿ ಕಲ್ಕತ್ತ, ಮದ್ರಾಸ್, ಬಾಂಬೆ ಕಡೆಗೆ ರಫ್ತಾಗುತ್ತಿತ್ತು. ಅಲ್ಲಿಂದ ವಿದೇಶಗಳಿಗೆಲ್ಲಾ ರವಾನೆಯಾಗುತ್ತದೆಯಂತೆ. ಅದರಿಂದ ರಾಜ್ಯಕ್ಕೆ ತುಂಬಾ ಆದಾಯವಿದೆಯಂತೆ. ಧೂಳೆಬ್ಬರಿಸಿ ಹೋದ ಲಾರಿಯ ಧೂಳು, ಅಕ್ಕಪಕ್ಕದಲ್ಲಿ ನಡೆಯುವ ಜನರನ್ನು, ಮನೆಗಳನ್ನು



ಬಾಚುತ್ತಾ ಬಾಚುತ್ತಾ ನಡೆದಿತ್ತು. ಜನ, ಜೀವವನ್ನು ಕೈಯಲ್ಲಿ ಹಿಡಿದುಕೊಂಡು ಓಡಾಡುವ ನರಕದ ಚಿತ್ರ ನನ್ನ ಕಣ್ಣುಗಳಿಗೆ ತುಂಬಿಕೊಂಡಿತ್ತು.

ಮನೆಗೆ ಬಂದೆ. ಮಧ್ಯಾಹ್ನದ ಹೊತ್ತು ಮತ್ತೆ ಅದೇ ಶಬ್ದ. ಬೆಟ್ಟಗಳು ಕರಗಿ ನೀರಾಗುವ ಚಿತ್ರಗಳು. ಮನೆ ಹತ್ತಿರದಿಂದ ನಿಂತು ನೋಡಿದರೆ, ಊರಿನ ಸುತ್ತಮುತ್ತಲಿನ ಬೆಟ್ಟಗಳು, ಯಾವುದೋ ಕಾಲದಲ್ಲಿ ಭೀಕರ ಯುದ್ಧಗಳು ನಡೆದು ನಾಶವಾದ ಅವಶೇಷಗಳಂತೆ, ತೊನ್ನು ಹತ್ತಿದಂತೆ ಕಾಣುತ್ತವೆ. ಪ್ರತಿದಿನ, ಬೆಂಕಿಯಿಂದ, ಸುಡುವ ಬೆಟ್ಟಗಳಿಂದ, ಮುಗಿಲೆತ್ತರಕ್ಕೆ ಏಳುವ ಡೈನಾಮೈಟ್ ಹೊಗೆ, ಹತ್ತಾರು ಮೈಲಿಗಳನ್ನು ವ್ಯಾಪಿಸುತ್ತಾ, ವ್ಯಾಪಿಸುತ್ತಾ ಗಿಡಮರಗಳೂ ನೆಲ ಕಚ್ಚುತ್ತಿವೆ. ಹಸಿರು ಮಾಯವಾಗುತ್ತಿದೆ. ಬಿಸಿಲಿನಲ್ಲಿ, ಬರೀ ನೆಲಕ್ಕೆ, ಬರೀ ಧೂಳಿಗೆ, ಬರೀ ಗಾಳಿಗೆ ಬೆಂಕಿ ಕಡ್ಡಿ ಗೀರಿ ತೋರಿದರೆ ಸಾಕು, ಬುಗ್ಗೆಂದು ಬೆಂಕಿ ಹತ್ತಿಕೊಳ್ಳುವ ಹಂತಕ್ಕೆ ಇಡೀ ಪರಿಸರ ಮುಟ್ಟಿಬಿಟ್ಟಿದೆ. ಬಲ್ಲಿದರು ಪಟ್ಟಣಗಳಿಗೆ ವಲಸೆ ಹೊರಟಿದ್ದಾರೆ. ಬಡವರು ಇಲ್ಲೇ ಸಾಯುತ್ತಿದ್ದಾರೆ. ನನ್ನೂರಿಗೆ ಯಾಕೆ ಇಂಥ ಸ್ಥಿತಿ ಬಂತು? ಎಲ್ಲಿಂದ ಬಂದರು ಈ ರಾಕ್ಷಸರು?

ಒಂದು ದಿನ, ಆಸ್ಪತ್ರೆಗೆ ಹೋಗಿ, ನನ್ನ ಕಾಲು ತೋರಿಸಿ, ಔಷಧಿ ಪಡೆದು ಬರುತ್ತಿದ್ದೆ. ಕಾಲು ಶಾಶ್ವತವಾಗಿ ಕುಂಟಾಗಬಹುದೆಂದು ಡಾಕ್ಟರು ತಮ್ಮ ಅನುಮಾನ ವ್ಯಕ್ತಪಡಿಸಿದ್ದರು. ದಿನೇ ದಿನೇ ನೋವು ಜಾಸ್ತಿಯಾಗುತ್ತಿತ್ತೇ ಹೊರತು ಕಡಿಮೆಯಾಗುವಂತೆ ಕಾಣುತ್ತಿರಲಿಲ್ಲ. ದಾರಿ ಮಗ್ಗುಲ ಮಂಟಪವೊಂದರಲ್ಲಿ ಕಾರ್ಯಕ್ರಮ ಇದೆ ಎಂದು ಗೊತ್ತಾಗಿ, ಕುತೂಹಲದಿಂದ ಅದೇನು ಎಂದು ನೋಡಲು ಹೋದೆ. ಅದು ಜ್ಞಾನಪೀಠ ಪ್ರಶಸ್ತಿ ಪಡೆದ ಕವಿಯೊಡನೆ ಸಂವಾದದ ಕಾರ್ಯಕ್ರಮವೆಂದು ತಿಳಿಯಿತು. ನಾನು ಆ ಕವಿ ಬಗ್ಗೆ ಕೇಳಿದ್ದೆ. ಅವರ ಕವಿತೆಗಳು ಆಗಾಗ ಮಾಧ್ಯಮಗಳಲ್ಲಿ ಪ್ರಸಾರವಾಗುತ್ತಿದ್ದವು. ಪ್ರಕೃತಿ, ಪರಿಸರ, ಪ್ರೀತಿಯ ಬಗ್ಗೆ ಅವರ ಕವಿತೆಗಳು ಜನರನ್ನು ಆಕರ್ಷಿಸಿದ್ದವು. ಪೇಟೆಯ ಜನಸಂದಣಿಯ ಪ್ರದೇಶದಲ್ಲೇ ಈ ಕಾರ್ಯಕ್ರಮವಿತ್ತು. ಪತ್ರಿಕೆಗಳಲ್ಲಿ, ಆಹ್ವಾನ ಪತ್ರಿಕೆಗಳಲ್ಲಿ ಎಲ್ಲಾ ಸಾಕಷ್ಟು ಪ್ರಚಾರ ಮಾಡಲಾಗಿತ್ತಂತೆ. ನಾನು ಅಲ್ಲಿಗೆ ಹೋದಾಗ, ವೇದಿಕೆಯ ಮೇಲೆ ಜ್ಞಾನಪೀಠ ಪ್ರಶಸ್ತಿ ವಿಜೇತ ಕವಿ ಕೂತಿದ್ದರು. ಅವರ ಪಕ್ಕ ವ್ಯವಸ್ಥಾಪಕರು ಕೂತಿದ್ದರು. ಕಾರ್ಯಕ್ರಮ ಆರಂಭವಾಗಿತ್ತು. ಸಭಿಕರಿಂದ ಪ್ರಶ್ನೆಗಳು ಎದ್ದಿದ್ದವು. ಕವಿಗಳು ಉತ್ತರ ಕೊಡುತ್ತಿದ್ದರು. ಸಭೆಯಲ್ಲಿದ್ದ ಜನಗಳನ್ನು ಎಣಿಸಿದೆ. ಇಪ್ಪತ್ತು ಜನ ಇದ್ದರು. ನಾನು, ಕವಿ, ವ್ಯವಸ್ಥಾಪಕ ಸೇರಿದರೆ ಇಪ್ಪತ್ಮೂರು ಆಯಿತು. ಅವರಲ್ಲಿ ವ್ಯವಸ್ಥಾಪಕರ ನೆಂಟರಿಷ್ಟರೇ ಏಳೆಂಟು ಜನ ಇದ್ದರು ಅನ್ನಿಸುತ್ತದೆ. ರಸ್ತೆಯಲ್ಲಿ ಅತ್ತ, ಇತ್ತ ಹೋಗಿಬರುತ್ತಿದ್ದ ಜನ, ಕತ್ತು ತಿರುಗಿ ನೋಡಿ ಹೋಗುತ್ತಿದ್ದರೆ ಹೊರತು ಒಳಗೆ ಯಾರೂ ಬರುವ ಮನಸ್ಸು ಮಾಡುತ್ತಿರಲಿಲ್ಲ. ಕೊನೆಗೆ ಕವಿಗಳು ನೊಂದು ನುಡಿದ ಮಾತು: 'ಈ ಊರಿನ ಜನಕ್ಕೆ ಸಾಹಿತ್ಯ, ಸಂಸ್ಕೃತಿ, ಕಲೆ ಬೇಕಾಗಿಲ್ಲ ಎಲ್ಲರೂ ಜಾಗತೀಕರಣದ ಪ್ರಭಾವದೊಳಗೆ ಮುಳುಗಿಹೋಗಿದ್ದಾರೆ. ಇದಕ್ಕೆ ಈ ಊರಿನ ಸುತ್ತಮುತ್ತ ಬೋಳಾಗಿ ನಿಂತಿರುವ

ಪರಿಸರವೇ ಸಾಕ್ಷಿ'. ಮತ್ತೆ ಅವರು ಮುಂದುವರಿದು, ಇದನ್ನೆಲ್ಲಾ ಸಾಹಿತ್ಯದ ಮೂಲಕ, ಶಿಕ್ಷಣದ ಮೂಲಕ, ಚಳವಳಿ ಮೂಲಕ ವಿರೋಧಿಸಬೇಕು, ಪ್ರಶ್ನಿಸಬೇಕು ಎಂದರು. ಸ್ವಾತಂತ್ರ್ಯ, ಪ್ರತಿರೋಧ, ಮನುಷ್ಯನ ಮೂಲಭೂತ ಹಕ್ಕು ಎಂಬುದು ಎಲ್ಲರಿಗೂ ಗೊತ್ತಾಗಬೇಕಾಗಿದೆ ಎಂದರು.

ನಾನು ಅವರ ಭಾಷಣ ಕೇಳಿ, ಕುಂಟುತ್ತಾ ಮನೆಗೆ ಬಂದೆ. ಅವರ ಮಾತುಗಳು ನನ್ನ ಕಿವಿಯಲ್ಲಿ ಮೊಳಗುತ್ತಿದ್ದವು. ಒಂದು ದಿನ ಊರಿನಲ್ಲಿ ಕ್ರಾಂತಿಯ ಕಿಡಿಗಳು ಸಿಡಿದವು. ಯುವಶಕ್ತಿ ಒಂದಾಗಿತ್ತು. ಪ್ರತಿಭಟನೆಗಳು ಶುರುವಾಗಿದ್ದವು. ಪರಿಸರ ಉಳಿಸಿ, ಸಂಸ್ಕೃತಿ ಬೆಳೆಸಿ, ಸೌಂದರ್ಯ ರಕ್ಷಿಸಿ, ಪ್ರಾಣಹಾನಿ ಉಳಿಸಿ- ಇತ್ಯಾದಿ ಬ್ಯಾನರ್‌ಗಳನ್ನು ಹಿಡಿದು, ಅಸಂಖ್ಯಾತ ಜನರು ಪೇಟೆಯ ಬೀದಿಯಲ್ಲಿ ಮೆರವಣಿಗೆ ಹೊರಟಿದ್ದರು. ಯಾರೋ ಮಂತ್ರಿಗಳು, ಮತ್ತೆ ಇನ್ನೊಂದು ವಿದೇಶಿ ಕಾರ್ಖಾನೆಗೆ ಶಂಕುಸ್ಥಾಪನೆ ಮಾಡಲು ಬರುತ್ತಿದ್ದಾರೆಂದು ಗೊತ್ತಾಗಿ, ಜನ, ಅದನ್ನು ತಡೆಯಲು, ಅದನ್ನು ಪ್ರತಿಭಟಿಸಲು ಮೆರವಣಿಗೆ ಹೊರಟಿತ್ತು. ಮೆರವಣಿಗೆಯಲ್ಲಿ ವಿದ್ಯಾರ್ಥಿಗಳು, ರೈತರು, ಕಾರ್ಮಿಕರು, ಮುಸ್ಲಿಮರು, ಮಹಿಳೆಯರು, ಮಕ್ಕಳು, ದಲಿತರು, ರೋಗಿಗಳು ಹೀಗೆ ನಾನಾ ಥರದ ಜನ ಇದ್ದರು. ಒಂದೊಂದು ಸಮುದಾಯದವರು ಒಂದೊಂದು ಬೇಡಿಕೆಯನ್ನು, ತಮ್ಮ ಹಕ್ಕೊತ್ತಾಯವಾಗಿ ಬ್ಯಾನರ್‌ನಲ್ಲಿ ಬರೆದು ಹಿಡಿದು ನಡೆದಿದ್ದರು. ಅವರ ಕಾವಲಿಗೆ ಇಕ್ಕೆಲಗಳಲ್ಲೂ ಪೊಲೀಸ್ ವ್ಯಾನುಗಳು ಸಾಲಾಗಿ ಹೊರಟಿದ್ದವು. ಯಾವಾಗ ಗಲಾಟೆಯಾಗಿ, ಎಲ್ಲಿ ಗೋಲಿಬಾರ್ ಆದಾದೋ ಎಂಬ ಆತಂಕದಲ್ಲಿ ಕೆಲವರು, ಜೀವ ಹಿಡಿದು ಮೆರವಣಿಗೆಯಲ್ಲಿ ಹೆಜ್ಜೆ ಹಾಕುತ್ತಿದ್ದರು. ಆ ಮೆರವಣಿಗೆಯ ಮುಂಚೂಣಿಗೆ ನಾನು, ಕುಂಟುತ್ತಾ ಹೋಗಿ ಸೇರಿಕೊಂಡೆ.



ನನ್ನ ಬಾಲ್ಯದಲ್ಲಿ ಪ್ರಕೃತಿ ಹಚ್ಚಹಸುರಿನಿಂದ ತುಂಬಿ ಕಂಗೊಳಿಸುತ್ತಿದ್ದುದನ್ನು ನಾನಿನ್ನೂ ಮರೆತಿಲ್ಲ. ಮರಗಿಡ ಬಳ್ಳಿ ಕಳ್ಳಿಗಳು ಯಾವಾಗಲೂ ಹಸಿರು ತುಂಬಿ ಚೆಲುವಾಗಿರುತ್ತಿದ್ದುವು. ನಮ್ಮೂರ ಕೆರೆಗಳಿಗೆ ಬರುತ್ತಿದ್ದ ಹಕ್ಕಿಪಕ್ಷಿಗಳಿಗೆ ಲೆಕ್ಕವಿರಲಿಲ್ಲ. ನಾನಾ ಥರದ ಬಣ್ಣಬಣ್ಣದ ಹಕ್ಕಿಗಳು ಬರುತ್ತಿದ್ದುವು.



'ಜಾನಪದ ಲೋಕ'ದಲ್ಲಿ ಬೆಸಗರಹಳ್ಳಿ ರಾಮಣ್ಣ, ದೇವನೂರು, ಕರೀಗೌಡ ಮತ್ತು ಬೊಳುವಾರು.

ದುಸ್ತೀನ್‌ಬಾಯಿಯ ಬೊಂಡೆಯೆಂದರೆ ಬೊಂಬಾಯಿ. ಆಕೆಯ ದೊಂಡೆಗೆ ಹೆದರಿಯೇ, ಸಂಜೆಸೂರ್ಯ ಪುಳಕ್ಕನೆ ಪಡುಗಡಲಲ್ಲಿ ಮುಳುಕುಹಾಕುತ್ತಾನೆ ಎಂದು ಬೊಕ್ಕಪಟ್ಣದ ಹದಿನಾಲ್ಕು ಗ್ರಾಮದಲ್ಲಿ ಪ್ರತೀತಿ. ದುಸ್ತೀನ್‌ಬಾಯಿ ದೊಂಡೆ ತೆಗೆದಳೆಂದರೆ, ಕಡಲತಡಿಯ ಬಚ್ಚಾಲಿಗಳ ಸ್ವರ ಇಂಗಿಯೇ ಹೋಗುತ್ತದೆ. ರಚ್ಚೆ ಹಿಡಿದ ಪುಂಡು ಮಕ್ಕಳಿಗೆ, 'ಅಗೋ ದುಸ್ತೀನ್ ಬಾಯಿ ಬಂದಳು' ಎಂದರೆ ಸರಿ. ಮಕ್ಕಳು ಬಾಯಿ ಬಿಡಿ, ಕುಂಡೆ ಹಿಂದೆ ಬಾಲಮಡಚಿ ಅಚ್ಚರಿಗಣ್ಣು ಬಿಡುತ್ತವೆ.

ದುಸ್ತೀನ್ ಬಾಯಿ ಎಲ್ಲಿಂದ ಬಂದಳೆಂದು ಯಾರಿಗೂ ಗೊತ್ತಿಲ್ಲ. ಅವಳು ಬಿಡಿ, ಅವಳ ಗಂಡ ಅಂತೋಣಿಯ ಠಾವು-ಠಿಕಾಣೆಯೂ ಯಾರಿಗೂ ಗೊತ್ತಿಲ್ಲ. ಬಗಲಿಗೆ ಎರಡು ಬ್ಯಾರಲ್‌ನ ಕೋವಿ ಏರಿಸಿ, ಪೊದೆ ಮೀಸೆ, ಚರಕ್ ಬುರಕ್ ಅನ್ನುವ ಮಿಲಿಟರಿ ಬೂಟು ತೊಟ್ಟು, ಏದುಸಿರು ಬಿಡುವ ಅಬ್ಬೆ, ಸಾಂತುಮೇರಿಯೊಂದಿಗೆ ಪಡುಗಡಲ ಬೂತಾಯಿ  ಹಕ್ಕಲಿನಲ್ಲಿ ಬಂದು ಬೀಡು ಬಿಟ್ಟಾಗ, ಮಂದಿ ದಂಗಾಗಿದ್ದರು. ಎರಡನೇ ಮಹಾ ಯುದ್ಧದಲ್ಲಿ, ಬ್ರಿಟನಿನ ಪಡೆಯಲ್ಲಿ ವಿಲಾಯತಿಗೆ ಹೋಗಿ ಬಂದ ಅಂತೋಣಿಗೆ, ಕುಂಪಣಿ ಸರಕಾರ, ಪಡುಗಡಲ ಕಿನಾರೆಯಲ್ಲಿ ನಾಲ್ಕು ಎಕ್ರೆ ಜಾಗವನ್ನು ಜಹಗೀರು ಕೊಟ್ಟಿತ್ತಂತೆ. ಕೊಟ್ಟ ದಾನವಾದರೂ ಎಂಥದ್ದು? ನೆತ್ತರ ಹಾಯ್ಗುಳಿ ತಲೆತಲಾಂತರದಿಂದ ನೆಲೆನಿಂತ ಬೂತಾಯಿ ಹಕ್ಕಲು! ನಾಲ್ಕು ದಿನದಲ್ಲಿ ನಾಯ್ಕ ನೆಗೆದುಬಿದ್ದು ನೆತ್ತರ ಕಾರುತ್ತಾನೆ ಎಂದು ಮಂದಿ ಕಾದುಕುಳಿತರು!

ಸೈಕಲ್ ಕಚ್ಚೆಯೊಳಗೆ ಬಿಳಿ ಅಂಗಿ ಇನ್‌ಶರ್ಟ್ ಮಾಡಿ, ಕರಿಕೋಟು ತೊಟ್ಟು, ಕಾಲಿಗೆ ಮಿಲಿಟರಿ ಬೂಟು ಹಾಕಿ ಜರಕಿಸುವ ಅಂತೋಣಿಯ ಮುಂದೆ ಇಲಿಯಂತೆ ನುಸುಳಾಡಿದ ಮಂದಿಗೆ, ಇರುವ ವಿಷಯ ತಿಳಿಸಲು ಹೆದರಿಕೆ. ಬಂದ ಎರಡೇ ದಿನಗಳಲ್ಲಿ ಅಂತೋಣಿ ಜನರೊಂದಿಗೆ ಬೆರೆತ. ಅವನು ಮೊದಲು ಮಾಡಿದ ಕೆಲಸ, ಎರಡಂಕಣದ ತೆಂಗಿನಗರಿಯ ಗುಡಿಸಲು ನಿರ್ಮಿಸಿದ್ದು. ಸಾಂತುಮೇರಿ, ಮೂರುಕಲ್ಲಿನ ಮೇಲೆ ಗಂಜಿಕಾಯಿಸಲು ಠಿಕಾಣಿ ದೊರೆತ ಕೂಡಲೇ, ಅಂತೋಣಿ ಹುಡುಕಿಕೊಂಡು ಹೋದದ್ದು, ಮರಳು ದಿಣ್ಣೆಯ ಮಗ್ಗುಲಲ್ಲಿದ್ದ ಕಂಟ್ರಿ ಸಾರಾಯಿ ಕೇಂದ್ರಕ್ಕೆ. ಕೋಳಿ ಹೇಲು, ಬೆಟ್ರಿಶೆಲ್ಲು ಹಾಕಿ, ಕದ್ದು-ಮುಚ್ಚಿ ಮಾಡುತ್ತಿದ್ದ ಸಾರಾಯಿ ಕೇಂದ್ರದಲ್ಲಿ ಊರವರು ಅಂತೋಣಿಯನ್ನು ಮುತ್ತಿಕೊಂಡರು. ಮೂಗಿನ ತನಕ ಕುಡಿದ ಕೃಷ್ಣ ತಾಂಡೇಲ, ಉರುಫ್ ಕುಷ್ಣ ಅಂತೋಣಿಯ ಕೋಟನ್ನು ಸವರಿದ. ಅವನ ಬೂಟನ್ನು ಹೊಗಳಿದ. ಪೊದೆ ಮೀಸೆಯ ಗತ್ತು ಬಿಳಿದೊರೆಗಳಿಗೂ ಇಲ್ಲವೆಂದ. ಬಿಟ್ಟಿ ಸಾರಾಯಿ ಗಿಟ್ಟಿಸಿಕೊಂಡ. ಎರಡೇ ದಿನಗಳಲ್ಲಿ ಅಂತೋಣಿ ಎಲ್ಲರೊಳಗೊಂದಾದ. ಮಿಲಿಟರಿ ಅಂತೋಣಿ, 'ಕೋವಿ ಅಂತಣಿಯಣ್ಣ' ಆಗಿಬಿಟ್ಟ.

ಕುಡಿತ ಬಿಟ್ಟರೆ, ಅಂತ್ಹೋಣಿ ಕೆಲಸದಲ್ಲಿ ಸೈತಾನ. ಹಗಲಿಡೀ ಬೂತಾಯಿ ಹಕ್ಕಲಿನಲ್ಲಿ ಬೆವರಿಳಿಸಿ ದುಡಿದ. ಸೊಕ್ಕಿ ಬೆಳೆದ ಬೂತಾಯಿ ಪೊದೆಗಳನ್ನು ಕಡಿದುರುಳಿಸಿದ. ತಲೆತಲಾಂತರದಿಂದ ಬೂತಾಯಿ ಪೊದೆ ಮಧ್ಯ ತನ್ನ ಅಸ್ತಿತ್ವ ಕಾದುಕೊಂಡು ಬಂದ ನೆತ್ತರ ಹಾಯ್ಗುಳಿಯ ಕಲ್ಲು ಹುಡಿ ಹಾರಿಹೋಯ್ತು! ಮೆದೆ ನಡುವೆ ಜಿಡಾರ ಹೂಡಿದ ಹತ್ತಾರು ಹಾವುಗಳು ಎದುರಾದಾಗ, ಮುಲಾಜಿಲ್ಲದೇ ಡಬ್ಬಲ್ ಬ್ಯಾರೆಲ್ ಕೋವಿಯಿಂದ ಸುಟ್ಟು ಹಾಕಿದ. ಕಡಲ ತಡಿಯ ಮಂದಿ ಹೌಹಾರಿದರು. ನಾಲ್ಕಾರು ಮಂದಿ ಉಚಿತ ಸಲಹೆ ನೀಡಲು ಬಂದರು. ನೆತ್ತರು ಹಾಯ್ಗುಳಿಯ ಬಗ್ಗೆ ಹೇಳಿದರು. ಅಂತ್ಹೋಣಿ ಗಹಗಹಿಸಿ ನಕ್ಕ. 'ಮುಂಡೇಮಗ ರಕ್ತಕಾರಿ ಸಾಯ್ತಾನೆ. ನಾಗನ ಸಂತತಿ ನಿರ್ಮೂಲ ಮಾಡ್ತಾನೆ' ಎಂದು ಹಿಡಿಶಾಪ ಹಾಕಿತು ಮಂದಿ. ದುರ್ದಾನ ದಕ್ಕಿದಂತೆ ಇಡೀ ಹಳ್ಳಿ ಮಿಸುಕಾಡಿತು.

'ಧೈರ್ಯ ಇದ್ರೆ ನಿಮ್ಮ ನೆತ್ರ ಹಾಯ್ಗುಳಿ ಎದುರು ಬರ್ಲಿ. ನೋಡಿಕೊಳ್ತೇನೆ' ಎಂದ ಅಂತ್ಹೋಣಿಯ ಕೆಂಗಣ್ಣು, ಪೊದೆ ಮೀಸೆಗೆ ಹೆದರಿ ಮಂದಿ, ತಕರಾರಿಲ್ಲದೇ ಬಾಲ ಮಡಚಿಕೊಂಡರು.

ದಿನಗಳು ಜಾರಿದವು. ತಿಂಗಳು ಸಂದಿತು. ಬೂತಾಯಿ ಹಕ್ಕಲು ನೆಲಸಮವಾಗಿ, ನಾಲ್ಕೆಕರೆ ಜಾಗ ಬಟ್ಟಬಯಲಾಯ್ತು. ಇಷ್ಟಾದರೂ ಮಗ ರಕ್ತ ಕಾರಿ ಸಾಯಲಿಲ್ಲವಲ್ಲ ಎಂದು ಮಂದಿ ಅಚ್ಚರಿಗಣ್ಣು ಬಿಟ್ಟರು. ತಲೆತಲಾಂತರದಿಂದ ತಮ್ಮ ಬದುಕಿನೊಂದಿಗೆ ಭಾವನಾತ್ಮಕ ಸಂಬಂಧ ಹೊಂದಿದ್ದ ಹಾಯ್ಗುಳಿಯೇ ನಾಯ್ಕನಿಗೆ ಹೆದರಿ ಸ್ಥಳಾಂತರ ಮಾಡಿತೇ? ನಂಬಿಕೆಗೆ ಬಿದ್ದ ವಜ್ರಾಘಾತದಿಂದ ವಿಲವಿಲನೆ ಒದ್ದಾಡಿದರು ಮಂದಿ. ಹಾಯ್ಗುಳಿಯ ಪಾತ್ರಿ, ಆರ್ಬೆಟ್ಟು ರಾಮಣ್ಣ, ದಿಕ್ಕು ಕಾಣದೇ, ಒಂದು ರಾತ್ರಿ ಅಂತ್ಹೋಣಿಯ ಮನೆಗೆ ಲಗ್ಗೆ ಇಟ್ಟ. ಏನು ಸಂಧಾನವಾಯ್ತೋ? ಮತ್ತೆ ನಾಲ್ಕೇ ದಿನದಲ್ಲಿ ಆರ್ಬೆಟ್ಟು ರಾಮಣ್ಣನ ಮೇಲೆ ಹಾಯ್ಗುಳಿ ಮೈದಳೆಯಿತು. ಬೊಕ್ಕಪಟ್ಣದ ಹದಿನಾಲ್ಕು ಗ್ರಾಮದ ಮಂದಿ ಒಂದಾದರು. ಆರ್ಬೆಟ್ಟು ರಾಮಣ್ಣ ಹೂಂಕರಿಸುತ್ತಿದ್ದ. ಕಣ್ಣು ಬೆಂಕಿಕೆಂಡ. ಆದ ತಪ್ಪಿಗೆ ಮಂದಿ ಡೊಗ್ಗಾಲು ಸಲಾಂ ಮಾಡಿದರು. 'ಬಟ್ಟ ಬಯಲಾದ ಬೂತಾಯಿ ಹಕ್ಕಲಿನಲ್ಲಿ ಶಾನಿನ್ನು ಉಳಿಯುವುದಿಲ್ಲ' ಎಂದು ಹಾಯ್ಗುಳಿ ಅಬ್ಬರಿಸಿತು. ಮಂದಿ ತಲೆತಗ್ಗಿಸಿದರು. ದರ್ಶನ ಹಿಡಿದ ರಾಮಣ್ಣ ದೌಡಾಯಿಸುತ್ತಾ ಕೇದಗೆ ಹಿತ್ತಲಿನಲ್ಲಿ ಬಂದು ನಿಂತ. ಹೊಸ ನೆಲೆಯಲ್ಲಿ ನೆತ್ತರ ಹಾಯ್ಗುಳಿಯ ಸ್ಥಳಾಂತರ ವಿಜೃಂಭಣೆಯಿಂದ ಜರುಗಿಹೋಯ್ತು.

ಅಂತ್ಹೋಣಿ ಒಮ್ಮಿಂದೊಮ್ಮೆಗೆ ಊರ ಮಂದಿಯ ನಾಯಕನಾಗಿ ಹೋದ. ನೆತ್ತರ ಹಾಯ್ಗುಳಿಯೇ ಕೋವಿ ಅಂತ್ಹಣಿಯಣ್ಣನಿಗೆ ಹೆದರಿ ಬಾಲ ಮಡಚಿಕೊಂಡಿತು ಎಂದು ಬಾಯಿಬಿಟ್ಟು ಹೇಳದಿದ್ದರೂ, ಹೊಟ್ಟೆಯೊಳಗೆ ಕಂಟ್ರಿ ಸಾರಾಯಿ ಬಿದ್ದಾಗ ಮಂದಿ ಲೊಚಲೊಚ ಅಂದರು. ಅಂತ್ಹೋಣಿ ಹಂಚುವ ಗರಿಗರಿ ನೋಟುಗಳು, ವಿಕ್ಟೋರಿಯಾ ರಾಣಿ ತಲೆಯ ಹೊಸ ಹೊಸ ಪಾವಲಿಗಳು ಬೊಕ್ಕಪಟ್ಣದಲ್ಲಿ ಸಂಚಾರ ಹೊರಟವು. ವಿಕ್ಟೋರಿಯಾ ರಾಣಿಯ ಮಂಡೆಯನ್ನು ಹುಟ್ಟಿನಲ್ಲೇ ಕಾಣದ ಅಂಡೆಪಿರ್ಕಿಗಳು ಅಂತ್ಹೋಣಿಯ ಹಿಂಬಾಲಕರಾಗಿಬಿಟ್ಟರು. ಇಡೀ ಹಳ್ಳಿಗೆ ಅಂತ್ಹೋಣಿಯ ಪ್ರವೇಶದಿಂದ ವಿದ್ಯುತ್ ಸ್ಪರ್ಶವಾಗಿಬಿಟ್ಟಿತು.



ಒಂದೇ ವರ್ಷದೊಳಗೆ ಅಂತ್ಹೋಣಿಯ ಮನೆ ತಲೆ ಎತ್ತಿ ನಿಂತಿತು. ಬಟ್ಟ ಬಯಲಾದ ನಾಲ್ಕು ಎಕ್ರೆ ಜಾಗದಲ್ಲಿ ಗೋವೆ ಸಸಿ ನಳನಳಿಸಲಾರಂಭಿಸಿತು. ಸಾಂತುಮೇರಿಯ 'ಪರಲೋಕದಲ್ಲಿರುವ ತಂದೆಯೇ' ಪ್ರಾರ್ಥನೆ ಅಂತ್ಹೋಣಿಯ ಮನೆಯ ನಿತ್ಯಮಂತ್ರವಾಯ್ತು.

ಕೋವಿ ಅಂತ್ಹೋಣಿ ಒಮ್ಮಿಂದೊಮ್ಮೆಗೆ ಪಡುಗಡಲ ಅನಭಿಷಿಕ್ತ ದೊರೆಯಾಗಿ

ಹೋದದ್ದು, ಬೊಕ್ಕಪಟ್ಣದ ಹದಿನಾಲ್ಕು ಗ್ರಾಮಗಳ ಲಡಕಲು ಹಟ್ಟಿಗೆ ಲಗ್ಗೆ ಹಾಕಿ, ಕುರಿ, ಕೋಳಿ, ಹಂದಿ, ದನ, ಕರುಗಳನ್ನು ಕಿತ್ತು ಒಯ್ಯುತ್ತಿದ್ದ ಚಿಟ್ಟೆ ಹುಲಿಯನ್ನು ಹಗಲಿನಲ್ಲೇ ಬೇಟೆಯಾಡಿದ ಮೇಲೆ. ಹುಲಿ ಮದುವೆ ಮಾಡಿ, ಅಂತೋಣಿಯನ್ನು ಹುಲಿ ಹೆಣದೊಂದಿಗೆ ಅರಾಲಿನ ತುಂಬಾ ಗರ್ನಾಲು ಬಾರಿಸುತ್ತಾ ಹುಡಿ ಹಾರಿಸಿಬಿಟ್ಟರು ಮಂದಿ. ಅರಳಿದ ಕಣ್ಣುಗಳಿಂದ ಹೊಂಚು ಹಾಕುವ ಹೆಂಗಳೆಯರು, ಮಂದಿಯ ಕಾಲಡಿಯಲ್ಲಿ ನುಸುಳುವ ಗಂಡುಗಳು, ಪಾದದಡಿ ಸಿಕ್ಕಿ ತಪರಾಕಿ ತಿನ್ನುವ ಬಚ್ಚಾಲಿ ನಾಯಿಗಳು... ಗದ್ದಲವೋ ಗದ್ದಲ. ಕೋವಿ ಅಂತೋಣಿ, ಹುಲಿ ಅಂತೋಣಿಯಾಗಿಬಿಟ್ಟ.



ದಿನಗಳು ಕಳೆದವು. ವರ್ಷಗಳು ಉರುಳಿದವು. ಅಂದೊಂದು ದಿನ, ಸದ್ದು ಸುದ್ದಿಯಿಲ್ಲದೇ ಸಾಂತುಮೇರಿ, ಕುಂದಾಪುರ ಇಗರ್ಜಿಯಿಂದ ಮೆರವಣಿಗೆಯಲ್ಲಿ ಅಂತೋಣಿಯೊಂದಿಗೆ ದುಸ್ತೀನ್‌ಬಾಯಿಯನ್ನು ಕರೆತಂದುಬಿಟ್ಟಳು. ಕಡಲ ಕಿನಾರೆಯುದ್ದಕ್ಕೂ ಕರಿಕೋಟಿನ ಅಂತೋಣಿ, ಮಿರಿಮಿರಿ ಮಿಂಚುತ್ತಿದ್ದ ಬಿಳಿಸೀರೆಯ ದುಸ್ತೀನಳೊಂದಿಗೆ ಎದೆಯುಬ್ಬಿಸಿ ಬರುವಾಗ, ಅರಾಲಿನ ಮಂದಿ ಸಂತೆ ಸೇರಿದ್ದರು.

ಎಲ್ಲೆಲ್ಲಿ ಎಷ್ಟೆಷ್ಟು ಬೇಕೋ, ಅಷ್ಟಕ್ಕಿಂತಲೂ ಕೊಂಚ ಹೆಚ್ಚೆಚ್ಚು ಹೊತ್ತುತಂದಿದ್ದ ದುಸ್ತೀನ್‌ಬಾಯಿ, ಊರ ಹೆಂಗಳೆಯರ ಅರಳುಗಣ್ಣಿಗೆ ಮೀಸಲಾದರೆ, ಊರ ಪಡ್ಡೆ ಗಂಡುಗಳು ಕೋವಿ ಅಂತೋಣಿಯ ಹೊಸ ಶಿಕಾರಿಗೆ ಕೆಂಗಣ್ಣು ಬಿಟ್ಟರು. ನಾಲ್ಕಾರು ದಿನ ಕೆಲಸವಿದ್ದೋ, ಇಲ್ಲದೆಯೋ ಕೋವಿ ಅಂತೋಣಿಯ ಮನೆ ಮೆರವಣಿಗೆಯ ಕೇಂದ್ರ.

ಸಂಜೆಗತ್ತಲಿನಲ್ಲಿ, ಮನೆಯ ಮಾರುದೂರದಲ್ಲಿ, ಮೆಟ್ಟುಗತ್ತಿಯ ಮೇಲೆ ಕುಳಿತು, ಬಂಗುಡೆ ಅರಿಯುವ ದುಸ್ತೀನ್‌ಬಾಯಿಯ ಮಿರುಗುಟ್ಟುವ ಕೆಂಪು ತೊಡೆಯ ಬಿಟ್ಟಿ ದರ್ಶನಕ್ಕಾಗಿ, ಆರ್ಬೆಟ್ಟು ರಾಮಣ್ಣನಿಂದ, ತಾಂಡೇಲ ಕುಪ್ಪನ ತನಕ ಮುಲಾಜಿಲ್ಲದೇ ಹಾತೊರೆದದ್ದು ಸತ್ಯ. ಕೋವಿ ಅಂತೋಣಿ ಮೀಸೆ ಸವರುತ್ತಾ, ಎರಡನೇ ಮಹಾಯುದ್ಧದ ಬಡಾಯಿ ಕೊಚ್ಚಿಕೊಳ್ತಾ ಇದ್ದರೆ, ದುಸ್ತೀನ್‌ಬಾಯಿ ಲಗುಬಗೆಯಿಂದ ಸೀರೆ ಇಳಿಬಿಟ್ಟು, ಕಿರುನೋಟದ ಮುಗುಳ್ನಗೆ ಚೆಲ್ಲಿ ಒಳಸಾರುತ್ತಾಳೆ. ಬಂದ ಮಂದಿ ಜೊಲ್ಲು ಸುರಿಸುತ್ತಾ, ಸಿಕ್ಕಿದ್ದಷ್ಟೇ ಲಾಭವೆಂದುಕೊಂಡು, ಮತ್ತೆ ಹೊರಬಾರದ ದುಸ್ತೀನ್‌ಬಾಯಿ ದರ್ಶನ ಸಿಕ್ಕದೇ, ''ಇತ್ ಬತ್ತೋ ಅಂತಣಿಯಣ್ಣ'' ಎಂದು ಸಾರಾಯಿ ದುಖಾನಿಗೆ ಲಗ್ಗೆ ಹಾಕುತ್ತಾರೆ.

ಮಂದಿ ಯಾಕೆ ಬರುತ್ತಾರೆ ಎಂದು ಅಂತೋಣಿಗೂ ಗೊತ್ತು, ದುಸ್ತೀನ್‌ಬಾಯಿಗೂ ಗೊತ್ತು. ಸಾಂತುಮೇರಿ ಒಮ್ಮೆ ಗುರುಗುರು ಅಂದಾಗ, ದುಸ್ತೀನ್‌ಬಾಯಿ ನಕ್ಕು, ''ಬರ್ಲಿ ನನ್ನ ಕೀಟಲೆಗೆ, ತೋರಿಸ್ತೇನೆ'' ಎಂದಿದ್ದಳು. ಸಾಂತುಮೇರಿ ಮತ್ತೇನೂ ಹೇಳಲಿಲ್ಲ.



ದುಸ್ತೀನ್‌ಬಾಯಿಯ ಸ್ವರ ತಾರಕಕ್ಕೆ ಏರತೊಡಗಿದ್ದು, ಅವಳ ದೊಂಡೆ ಅಷ್ಟು ಗಟ್ಟಿಯಾಗಿದೆ ಎಂದು ಬೊಕ್ಕಪಟ್ಣದ ಮಂದಿಗೆ ಗೊತ್ತಾದದ್ದು, ಸಾಂತುಮೇರಿ ಒಂದು ರಾತ್ರಿ, ಇದ್ದಕ್ಕಿದ್ದಂತೆ 'ಸೈ' ಅನ್ನಿಸಿಕೊಂಡ ದಿನ. ಉಂಡು ಮಲಗಿದ ಸಾಂತುಮೇರಿ, ರಾತ್ರಿ ಹನ್ನೆರಡಕ್ಕೆ ಎದ್ದು ಕುಳಿತು, 'ಉಸಿರಾಡಲು ಆಗುವುದಿಲ್ಲ' ಎಂದು ಕೈಬಾಯಲ್ಲಿ ಸನ್ನೆ ಮಾಡತೊಡಗಿದಾಗ, ದುಸ್ತೀನ್‌ಬಾಯಿ, ಅಪರಾತ್ರಿಯಲ್ಲಿ ಓಡಾಡಿ ಮಂದಿಯನ್ನು ಒಗ್ಗೂಡಿಸಿದ್ದಳು. ಅಮಲು ಇಳಿದ ಕೋವಿ ಅಂತೋಣಿ ವಾಸ್ತವಕ್ಕೆ ಬರುವಾಗ, ಸಾಂತುಮೇರಿ ರಕ್ತವಾಂತಿ ಮಾಡಿಕೊಂಡು ಗೊಟಕ್ ಅಂದಳು. ರಾತ್ರಿ ಗಡದ್ದಾಗಿ ಬಂಗುಡೆ



ನೀರು ಉಂಡದ್ದೋ ಅಥವಾ ಬಂಗುಡೆ ಮುಳ್ಳು ಶ್ವಾಸಕೋಶಕ್ಕೆ ಹೋಗಿತ್ತೋ ತಿಳಿಯದು. ಅರ್ಧವತ್ತಾಲ್ಕು, ಸಾಯುವ ವಯಸ್ಸಲ್ಲ. ದಿನವಿಡೀ ಏದುಸಿರುಬಿಡುತ್ತಾ, ಕುಳಿತಲ್ಲಿ ಕೂಡದೇ ಚಿರಿಪಿರಿ ಮಾಡುತ್ತಿದ್ದ ಸಾಂತುಮೇರಿಯ ಸಾವಿನಿಂದ ಅಂತೋಣಿ ಹೌಹಾರಿದ.

ಸೂರ್ಯ ಏಳುವಾಗ ಕೋವಿ ಅಂತೋಣಿಯ ಮನೆ ಮುಂದೆ ಜನರ ಸಂತೆ. ಸಾಂತುಮೇರಿಯ ರಕ್ತವಾಂತಿಗೆ, 'ನೆತ್ತರ ಹಾಯ್ಗುಳಿಯ ಶಾಪ' ಎಂದು ಮಂದಿ ಪಿಸುಗುಟ್ಟಿದರೆ, ಅಂತೋಣಿ ಮಾತನಾಡಲಿಲ್ಲ. ಶವಪೆಟ್ಟಿಗೆ ಬಂತು. ಸದ್ದಿಲ್ಲದಂತೆ ಜನ ಬಂದರು. ಆರಾಲಿಸ ಮೇಲೆ ಶವಯಾತ್ರೆ ಸಾಗುವಾಗ, ದುಸ್ತೀನ್‌ಬಾಯಿ, ತನ್ನೆತ್ತರಕ್ಕೆ ಬೆಳೆದುನಿಂತ ಗೋವೆ ಮರದ ಅಡಿ, ಸದ್ದಿಲ್ಲದಂತೆ ಕಣ್ಣೀರು ಮಿಡಿಯುತ್ತಿದ್ದಳು.

ದಿನಗಳು ಜಾರತೊಡಗಿದುವು. ದಿನ ಬೆಳಗಾದರೆ ಕೋವಿ ಹೆಗಲಿಗೇರಿಸಿ, ಹಕ್ಕಿಬೇಟೆಗೆಂದು ಹೋಗುವ ಅಂತೋಣಿ, ಮಧ್ಯಾಹ್ನ ಬಂದರೆ ಬಂದ, ಇಲ್ಲವಾದರೆ ಇಲ್ಲ. ಸಂಜೆ ಹೊತ್ತಿಗೆ ಪಟ್ಟಾಲಂನೊಂದಿಗೆ ಬಂದು, ಬೇಟೆಯಾಡಿದ ಹಲಸಿನ ಹಕ್ಕಿಗಳನ್ನೋ, ಪಾರಿವಾಳಗಳನ್ನೋ, ಮೊಲವನ್ನೋ ದುಸ್ತೀನ್ ಬಾಯಿಗೆ ಕೊಟ್ಟು, ಸಾರಾಯಿ ದುಕಾನಿಗೆ ಹೊರಟರೆ, ಬರುವುದು ಬೆಳ್ಳಿ ಮೂಡಿದ ಮೇಲೇ. ಅವನಿಗಾಗಿ ಪಕ್ಕಿ ಸಾರನ್ನು ಮಾಡಿ ದುಸ್ತೀನ್ ಕಾಯುತ್ತಾ ಕುಳಿತಿರುವಾಗ, ಒಂಟಿತನ ಕಾಡುತ್ತದೆ. ಇಷ್ಟರತನಕ ತನ್ನಂತೆ ಒಂದು ಹೆಣ್ಣು ಜೀವ ಇಲ್ಲಿ ಏದುಸಿರು ಬಿಡುತ್ತಾ ಕಾಯುತ್ತಿತ್ತು. ಆಕರಾಳ ವಿಕರಾಳ ನೆರಳನ್ನು ಗೋಡೆ ಮೇಲೆ ಚೆಲ್ಲುವ ಒಂಟಿ ದೀಪದ ಮುಂದೆ ಕುಳಿತ ದುಸ್ತೀನ್, ತನ್ನ ನೆರಳಿಗೆ ತಾನೇ ಹೆದರುವಂತಾಗುತ್ತದೆ. ಮೊದಮೊದಲು ತನ್ನ ಮನೋವಿಕಲ್ಪ ಎಂದುಕೊಂಡಳು. ಮತ್ತೆರಡು ದಿನ ಕಳೆಯಿತು. ಮನೆಯ ಸುತ್ತ ಯಾರೋ ನಡೆದಾಡಿದಂತಾಗುವುದು, ಚರಪರ ಅನ್ನುವುದು. ''ಯಾರದು?'' ಎಂದು ಕಂಠ ಅರಳಿಸಿದಾಗ, ಎಲ್ಲಿಂದಲೋ ಯಾರೋ ಓಡಿದಂತಾಗುವುದು. ತಾನು ಒಂಟಿಯಲ್ಲ, ಯಾರೋ ಗಮನಿಸುತ್ತಿದ್ದಾರೆ ಅನ್ನಿಸಿತು ದುಸ್ತೀನ್‌ಬಾಯಿಗೆ. ನಾಲ್ಕಾರು ಹೆಂಗಳೆಯರಲ್ಲಿ ಗುಟ್ಟಾಗಿ ಹೇಳಿದಳು. ''ಅದು ನೆತ್ತರ ಹಾಯ್ಗುಳಿಯ ಕಾಟ. ಅದರ ಹಕ್ಕಲಿನ ಮೇಲೆ ನೆರಳು ಕಟ್ಟಿಕೊಂಡು, ಅದಕ್ಕೆ ನೆರಳಿಲ್ಲದಂತೆ ಮಾಡಿದ್ರಿ. ಹಾಯ್ಗುಳಿ ನೆತ್ತರ ಬಲಿ ತಂಗೊಂಡಿದೆ. ನಿನ್ನ ಅತ್ತೆ ಅದಕ್ಕೆ ಬಲಿಯಾದದ್ದು. ಅದರದ್ದೇ ಉಪದ್ರ'', ಎಂದರು ಹೆಂಗಳೆಯರು.

ನಾಲ್ಕೇ ದಿನಗಳಲ್ಲಿ, 'ನೆತ್ತರ ಹಾಯ್ಗುಳಿಯ ಉಪದ್ರ'ದ ವಿಷಯ ಮನೆಮಾತಾಗಿಬಿಟ್ಟಿತು.

ಗಹಗಹಿಸಿ ನಕ್ಕುಬಿಟ್ಟ ಅಂತೋಣಿ. ಡಬ್ಬಲ್ ಬ್ಯಾರೆಲ್ ಕೋವಿ ಸವರಿದ. ನಾಲ್ಕು ದಿನ ರಾತ್ರಿ ಮನೆಯಲ್ಲೇ ಕುಳಿತು ಕಾದ. ಸರಕ್ಕೂ ಇಲ್ಲ, ಪರಕ್ಕೂ ಇಲ್ಲ. "ನಿನ್ನ ಭ್ರಮೆ" ಎಂದು ದುಸ್ತೀನ್ ಬಾಯಿಗೆ ಲೇವಡಿ ಮಾಡಿದ.



ವರ್ಷ ಉರುಳಿತು. ಗೋವೆ ಗಿಡಗಳು ಮರಗಳಾಗಿವೆ. ಟೊಂಗೆ ಟೊಂಗೆಗಳಲ್ಲಿ ಹೂಗೊಂಚಲು. ಹೂ ಮೊಗ್ಗೆಯಾಯ್ತು. ಮೊಗ್ಗೆ ಮಿಜರು ಆಯ್ತು. ಮಿಜರು ಕಾಯಿ ಆಯ್ತು. ಕಾಯಿ ಹಣ್ಣಾಯ್ತು. ನಾಲ್ಕೆಕರೆ ತೋಟ ಈಗ ಅರಳಿ ನಿಂತಿದೆ. ಅದರೊಂದಿಗೆ ಅರಳಿ ಫಲಿಸಿದಳು ದುಸ್ತೀನ್‌ಬಾಯಿ... ಅಂತೋಣಿ ಹಿರಿಹಿರಿ ಹಿಗ್ಗಿದ. ಸ್ನೇಹಿತರಿಗೆಲ್ಲಾ ಬಿಟ್ಟಿ ಸಾರಾಯಿ, ಅಬ್ಬರದ ಮೇಜವಾನಿ.

"ಕೋವಿ ಅಂತಣಿಯಣ್ಣನಿಗೆ ಅಸಲು ಇಲ್ಲ ಅಂದ್ಕೊಂಡಿದ್ದೆವು. ಕೊನೆಗೂ ಈಡು ತುಂಬಿಬಿಟ್ಟ ಮಾರಾಯ. 'ಢಂ' ಅನ್ನುವುದು ಬಾಕಿ" ಎಂದು ಮಂದಿ ಲೇವಡಿ ಮಾಡಿದರು. ದಿನ ಜಾರಿತು. ದುಸ್ತೀನ್‌ಗೆ ಈಗ ಆರು ತಿಂಗಳು. ಅಂತೋಣಿಯ ಈಡು 'ಢಂ' ಅನ್ನಲಿಲ್ಲ. 'ಠುಸ್' ಎಂದಿತು. ದುಸ್ತೀನ್‌ಬಾಯಿ ಅಚಾನಕ್ ಗರ್ಭ ಕಳೆದುಕೊಂಡುಬಿಟ್ಟಳು. ನಾಲ್ಕುದಿನ ಗಂಜಿ ನೀರು ಮುಟ್ಟದೇ ಅತ್ತಳು. ದಿನವಿಡೀ ಮನೆಯಲ್ಲಿ ಕುಳಿತಿರುವುದು ಸಂಕಟ. ಕೊನೆಗೊಂದು ದಿನ, ಹೆಡಿಗೆ ಹೊತ್ತು, ಕಡಲಂಚಿಗೆ ಸರಿದಳು. ಬೂತಾಯಿ, ಬಂಗುಡೆ ಹೊತ್ತು ಪೇಟೆ ಕಡೆ ಲಗ್ಗೆ ಹಾಕಿದಾಗ, ಹೊಸ ಬಾಯಮ್ಮನನ್ನು ಕಂಡು ಹಲವು ಬಾಯಿಗಳಲ್ಲಿ ಜೊಲ್ಲು. ಕಡಲ ಹೆಂಗಳೆಯರೇ ಮೊದಮೊದಲು ಕೆಂಗಣ್ಣಿನಿಂದ ಕಂಡರು. "ಈ ಕಿರಿಸ್ತಾನ ಬಾಯಮ್ಮನಿಗೇಕೆ ಮೀನಿನ ಸಾವಾಸ" ಎಂದು ಮತ್ಸರ ತೋಡಿಕೊಂಡರು. ಅದೆಲ್ಲಾ ನಾಲ್ಕೇ ದಿನ. ಕೊನೆಗೆ ಒಂದಾದರು.

ದುಸ್ತೀನ್‌ಬಾಯಿಯ ಬಾಯಿ ಬೊಂಬಾಯಿಯಾಗತೊಡಗಿದ್ದು ಈಗ. ತನ್ನ ಸುತ್ತ ಭದ್ರವಾದ ಒಂದು ಕೋಟೆ ಬೇಕು ಎಂದಾಗ, ಆಕೆ ಮೊರೆಹೋದದ್ದು ತನ್ನ ಬಾಯಿಯ ಮೇಲೆ.

ಮೀನು ಮಾರಲು ಕುಳಿತಾಗ, ಬೇಕಾಬಿಟ್ಟಿಯಾಗಿ ಗಿರಾಕಿಗಳ ಕಣ್ಣು, ತೋಳು ತೊಡೆಗಳ ಮೇಲೆ, ಯೌವನ ಸಂಪತ್ತಿನ ಮೇಲೆ ಹೊರಳಾಡುವಾಗ ದುಸ್ತೀನ್‌ಬಾಯಿ ದೊಂಡೆ ಹರಿಬಿಡತೊಡಗಿದಳು.

"ಬಾಯಮ್ಮನ ಮೀನು ಬಾಡಿಹೋಗಿದೆ, ಏನ್ ಪಥ್ಯ ತಿಂದಿಲ್ಯಾ"

"ಬಾಯಮ್ಮ-ಮೀನಮ್ಮ ತಕಣಿ ತಕಣಿ" ಹೀಗೆ ಕುಶಾಲು ಮಾಡುತ್ತಾ ಮೀನುಕುಕ್ಕೆಗೆ ಕೈಹಾಕುವ ಮಂದಿಗೆ, ದುಸ್ತೀನ್‌ಬಾಯಿ ಗದರಿಸುತ್ತಾಳೆ, ಏರುದನಿಯಲ್ಲಿ.

"ಇಸ್ಸಿಯಪ್ಪ ಬೆಲ್‌ಗಂಡ್ಸೇ, ಕುಶಾಲ್ ಕುಶಾಲ್ ಒಳ್ಗೇ ಇರ್ಲಿ. ಮೀನ್ ಕುಕ್ಕೆಗೆ ಕೈಹಾಕಿದ್ರೆ ಹುಷಾರ್" ಎಂದು ಕಂಠ ಎತ್ತಿ ಗದರಿಸುವ ಮೋಡಿಗೆ ಉಳಿದ ಹೆಂಗಳೆಯರೂ ಸಾಕಷ್ಟು ಒತ್ತಾಸೆ ನೀಡಿದ್ದರು. ಈತನಕ ಈ ಕಿರುಕುಳ ಸಹಿಸಿ ಸಹಿಸಿ ಅವರಿಗೆ ಸಾಕಾಗಿತ್ತು. ದುಸ್ತೀನ್‌ಬಾಯಿ ಈಗ ಅವರಿಗೆಲ್ಲಾ ಒಂದು ಭದ್ರ ಕವಚ. ದುಸ್ತೀನ್‌ಬಾಯಿಯ 'ಮುಂದೆ ಕುಶಾಲು

ನಡೆಯುವುದಿಲ್ಲ ಎನ್ನುವುದು ಪೇಟೆಯ ಜಿಟ್ಟಿ ಬಸವಗಳಿಗೆ ಅನುಭವವಾಗತೊಡಗಿತು.

ತಾನು ಪೇಟೆಗೆ ಹೋದ ಸಮಯ ನೋಡಿ ತೋಟಕ್ಕೆ ಲಗ್ಗೆ ಹಾಕುವ ಪಡ್ಡೆ ಹುಡುಗರಿಗೆ ಬುದ್ಧಿ ಕಲಿಸಬೇಕು ಅಂದುಕೊಂಡ ದುಸ್ತೀನ್‌ಬಾಯಿ, ಒಂದು ದಿನ ಕಾದುಕುಳಿತಳು. ದುಸ್ತೀನ್‌ಬಾಯಿ ಸವಾರಿ ಪೇಟೆಗೆ ಹೋಯ್ತು ಅಂದುಕೊಂಡ ಹುಡುಗರ ತಂಡ, ಮಿಡಿ, ಮಿಜರು ಅನ್ನದೇ ಗೋವೆ ತೋಟವನ್ನು ಸೂರೆಗೈಯ್ಯುತ್ತಿರುವಾಗ, ಸೊಂಟಕ್ಕೆ ಸೆರಗು ಕಟ್ಟಿ ಧುತ್ತೆಂದು ದುಸ್ತೀನ್ ಬಾಯಿ ಪ್ರತ್ಯಕ್ಷಳಾಗಿ, ''ಹಡಬಿಟ್ಟಿ ರಂಡೇ ಮಕ್ಕಳೇ, ಇವತ್ತು ನಿಮ್ಮ ಗತಿ ಕಾಣಿಸ್ತೇನೆ'' ಎಂದು ಸೋಂಟೆ ಹಿಡಿದು ನಿಂತಳು. ಅವಳ ದೊಂಡೆಗೇ ನಾಲ್ಕಾರು ಹುಡುಗರು ಬುಡುಬುಡು ಉದುರಿ ಬಿದ್ದರು. ಉಳಿದವು ಉಚ್ಚೆ ಹೊಯ್ದುಕೊಳ್ಳುತ್ತಾ ಹಾರಿಕೊಂಡವು. ನಾಲ್ಕಾರು ಮಂದಿ ಕುಂಡೆಗೆ ಕಾಲುಕೊಟ್ಟು ಓಡಿಕೊಂಡರೆ, ದುಸ್ತೀನ್ ಬಾಯಿಯ ಕೋಲಿಗೆ ಎರಡು ಹುಡುಗರು ಉರುಳಿದರು. ಬಿದ್ದ ಪೆಟ್ಟಿಗೆ ಏಳಲಾಗದ ಎರಡು ಗಂಡುಗಳು ದುಸ್ತೀನ್ ಕೈಗೆ ಸಿಕ್ಕುಬಿದ್ದವು. ಸೀದಾ ಗಂಡುಗಳ ಚಡ್ಡಿ ಒಳಸರಿದ ದುಸ್ತೀನ್‌ಬಾಯಿಯ ಕೈಗಳು ತಿರುಚಲ್ಪಟ್ಟಾಗ 'ಅಬಾ ಅಬಾ' ಎನ್ನುವ ರಣಗತು ಳೆಯ ಕೂಗು ಮುಗಿಲುಮುಟ್ಟಿತು.

ಕುಂಟುತ್ತಿರುವ ಎರಡೂ ಮಕ್ಕಳ ಜುಟ್ಟು ಹಿಡಿದು, ಎಳೆತರುತ್ತಾ ತೋಟದ ಗಡಿಯ ಹೊರಕ್ಕೆ ಒಗಾಯಿಸಿದಾಗ, ಮಕ್ಕಳು ಬಿದ್ದವೋ ಸತ್ತವೋ ಎಂದು ಕುಂಟುತ್ತಾ ಓಡಿದುವು. ಎತ್ತರದ ಕಂಠದಲ್ಲಿ ಅವುಗಳ ಕುಲಗೋತ್ರ ಉದ್ಧರಿಸುತ್ತಿದ್ದ ದುಸ್ತೀನ್‌ಬಾಯಿಯ ಅವತಾರ ವನ್ನು ಮಂದಿ ಗುಂಪುಗೂಡಿ ಕಂಡರು. ಅದೇ ಕೊನೆ, ಮತ್ತೆ ದುಸ್ತೀನ್‌ಬಾಯಿ ಎಂದರೆ ಪಡ್ಡೆ ಹುಡುಗರು ಕನಸಲ್ಲೂ ಉಚ್ಚೆ ಹೊಯ್ದುಕೊಳ್ಳ ತೊಡಗಿದುವು.



ಅರಾಲಿನ ಚಣಿಲ ಹತ್ವಾರನ ಮಗ ಶ್ರೀಪತಿ ಹತ್ವಾರ, ಮೀನು ಹಿಡಿಯುವವನಲ್ಲ. ಮೀನ ಲೋಚನೆಗೆ ಬಲೆ ಹಾಕುವುದರಲ್ಲಿ ಅಗ್ರಗಣ್ಯ. ಇಡೀ ಅರಾಲಿನ ಹೆಂಗಳೆಯರಿಗೆ ಅವನೆಂದರೆ ಹೇಸಿಗೆ. ಹೆದರಿಕೆ. ಇಲ್ಲದ ನೆವ ಒಡ್ಡಿ ಹೆಂಗಳೆ ಯರ ಹಿಂದೆ ಸರಿಯುವುದು. ಹಿರಿಯರು ಕಾಸಿಗೆ ಕಾಸು ಗಂಟು ಹಾಕಿ, ಒಂಟಿ ಪಾಣಿಪಂಚೆಯಲ್ಲಿ ಬ್ರಾಹ್ಮಣಾರ್ಥ ಮಾಡಿ ಸಂಚಯಿಸಿಟ್ಟ ಹಣಕ್ಕೆ ತೂತು ಕೊರೆಯುವ ಶ್ರೀಪತಿ ಹತ್ವಾರನಿಗೆ, 'ಸ್ತ್ರೀಪತಿ ಹತ್ವಾರ' ಎಂದು ಅಕ್ಷರ ಕಲಿತ ಮಂದಿ ಲೇವಡಿ ಮಾಡಿದರೆ, ನಾಲಿಗೆ ಹೊರಳದ ಮಂದಿ, 'ಸೀರೀಪತಿ ಹತ್ವಾರ' ಎಂದು ಹೆಸರಿಟ್ಟಿದ್ದರು.

ಅದೊಂದು ದಿನ, ಕೇದಗೆ ಬನದ ತಿರುವಿ ನಲ್ಲಿ, ದುಸ್ತೀನ್‌ಬಾಯಿ ಒಂಟಿಯಾದಾಗ, ಧುತ್ತೆಂದು ಇದಿರಾದ ಸೀರೀಪತಿ, ''ಇಷ್ಟು ದಿನಕ್ಕೆ ಒಂಟಿಯಾಗಿ ಸಿಕ್ಕಿದೆ ಮಾರಾಯ್ತಿ'' ಎಂದು ತೋಳಿಗೆ ಕೈಹಾಕಿದ.

ದೂರದಿಂದ ಅಲೆಗಳ ನಿನಾದ. ಮರ್ಮರ ಸಪ್ಪಳದ ತಾಳೆಮರದ ಹಿಂಡಲು. ಮತ್ತೆಲ್ಲಾ ಮೌನ.

ಒಂದೇ ಕ್ಷಣ.

ದುಸ್ತೀನ್‌ಬಾಯಿ ಏನು ಮಾಡಿದಳೆಂದು ಯಾರಿಗೂ ಅರಿಯದು. 'ಅಯ್ಯಯ್ಯೋ' ಎಂದು ಬೊಬ್ಬಿರಿಯುವ ಸೀರೀಪತಿಯ ತಾರಕ ಸ್ವರ ಕೇಳಿ, ತಾಳೆ ಹಿಂಡಲಿನತ್ತ ಸರಿದ ನಾಲ್ಕು ಹೆಂಗಳೆಯರು ದೌಡಾಯಿಸಿ ಬಂದರು. ಬಿಚ್ಚಿದ ಧೋತರದೊಂದಿಗೆ ಸೀರೀಪತಿ ತಕಥೈ ಎಂದು ಕುಣಿಯುತ್ತಿದ್ದ. ಬೊಬ್ಬಿರಿಯುತ್ತಿದ್ದ... ಹೆಂಗಳೆಯರೇ ಓಡಿ ಬಂದು ದುಸ್ತೀನ್‌ಬಾಯಿಯ ಕಪಿಮುಷ್ಟಿ ಬಿಡಿಸಬೇಕಾಯ್ತು!

ಹದಿನೈದು ದಿನ ಆಸ್ಪತ್ರೆಯಲ್ಲಿ ನರಕ ಚಿಕಿತ್ಸೆ ಅನುಭವಿಸಿದ ಸೀರೀಪತಿ ಹತ್ವಾರ, ಅದೇ ಕೊನೆ, ಸೀರೆ ನೆರಿಗೆ ಕಂಡರೆ ವಾಕರಿಸತೊಡಗಿದ.

ಬೊಕ್ಕ ಪಟ್ಣದ ಹದಿನಾಲ್ಕು ಗ್ರಾಮಗಳಲ್ಲಿ ಸುದ್ದಿ ನೆಗೆದಾಡಿಬಿಟ್ಟಿತು. ಹೆಂಗಳೆಯರಂತೂ

ಸಂತಸದಿಂದ ಕುಣಿಯುವುದೊಂದು ಬಾಕಿ. ವಿಷಯ ಕೋವಿ ಅಂತೋಣಿಗೂ ಮುಟ್ಟಿತು, ದುಖಾನು ಮಿತ್ರರಿಂದ. ಮೀಸೆಯಂಚಿನಲ್ಲಿ ನಸುನಕ್ಕ. ದುಸ್ತೀನ್‌ಳಲ್ಲಿ ವಿಚಾರಿಸಲಿಲ್ಲ.



ಮತ್ತೊಮ್ಮೆ ಫಲವತಿಯಾದಳು ದುಸ್ತೀನ್ ಬಾಯಿ. ಹೆಂಗಳೆಯರೆಲ್ಲಾ ಒಂದಾದರು. ನೆತ್ತರ ಹಾಯ್ಗುಳಿಗೆ ಒಂದು ಕೋಲ ಕೊಡಿಸುವ ವಾಗ್ದಾನವನ್ನು ದುಸ್ತೀನ್‌ಳಿಂದ ಪಡೆದುಬಿಟ್ಟರು. ದಿನಗಳು ಸರಿದುವು. ತಿಂಗಳುಗಳು ಜಾರಿದುವು. ಕೊನೆಗೊಂದು ದಿನ ದುಸ್ತೀನ್ ಹಡೆದಳು. ದುಂಡು ಮುಖದ ಗಂಡು ಕೂಸು. ಕೋವಿ ಅಂತೋನಿ, ಬಿಟ್ಟಿ ಸಾರಾಯಿ ಮೇಜವಾನಿ ನಡೆಸಿ ಬಿಟ್ಟ. ಮಗು ಇಂತ್ರು, ಮನೆಬೆಳಕಾಗಿ ಬೆಳೆಯ ತೊಡಗಿತು. ದುಸ್ತೀನ್‌ಬಾಯಿ ಕೋಲದ ಪ್ರಸ್ತಾಪ ಎತ್ತಿದಾಗ, ಅಂತೋಣಿ ಸಕತ್ತಾಗಿ ನಕ್ಕುಬಿಟ್ಟ.

ಸ್ವಾತಂತ್ರ್ಯ ಬಂತು. ಅದು ಗೊತ್ತಾದದ್ದು ಅಂತೋಣಿಗೆ ಮಾತ್ರ. ಅರಾಲಿನ ಮಂದಿಗೆ ಅದೊಂದು ವಿಷಯವೇ ಅಲ್ಲ. ಸುಟ್ಟರೂ ಅಕ್ಷರ ಹೊರಳದ ದುಸ್ತೀನ್‌ಬಾಯಿಯ ಮನಸ್ಸಿನಲ್ಲಿ ಮಹತ್ವಾಕಾಂಕ್ಷೆ ಇತ್ತು. ತನ್ನ ಮಗ ತನ್ನಂತೆ ಆಗಬಾರದು. ಅವನಪ್ಪನಂತೆ ಕುಡುಕ ಆಗ ಬಾರದು. ನಾಲ್ಕು ಅಕ್ಷರ ಕಲಿತು, ಅರಾಲಿನ ಮಂದಿ ನಡುವೆ ಟಸ್‌ಪುಸ್ ಅಂತ ನಾಲ್ಕು ಇಂಗ್ಲಿಷು ಹಾರಿಸ ಬೇಕು... ಎಂದು ಕನಸು ಹೆಣೆಯತೊಡಗಿದಳು. ಹೊರಗಿಟ್ಟರೆ ಹದ್ದು ಹಾರಿಸಿಕೊಂಡು ಹೋದೀತು, ಕೆಳಗಿಟ್ಟರೆ ಇಲಿ ಕಚ್ಚೀತು ಅನ್ನುವ ಮುಚ್ಚಟೆಯಿಂದ ಕೂಸನ್ನು ಬೆಳೆಸತೊಡಗಿದಳು.

ವರ್ಷಗಳು ಉರುಳಿದುವು.

ಇಂತ್ರುವಿಗೆ ಈಗ ಆರು ವರ್ಷ. ಪಡ್ಡೆ ಹುಡುಗರೊಂದಿಗೆ ಬೆರೆಯಲು ಬಿಡುವುದಿಲ್ಲ ದುಸ್ತೀನ್. ಆದರೆ ತಾನು ಮೀನು ಮಾರಲು ಹೋದಾಗ, ಮಗ, ಅಡ್ನಾಡಿ ಗಂಡುಗಳೊಡನೆ ಸೇರಿ ಯವಡಾಸ್ ಆಗುತ್ತಾನೆ ಎಂದು ತಿಳಿದಾಗ ಸಾಕಷ್ಟು ತಿಳಿಹೇಳಿದಳು.

ದಿನ ಜಾರತೊಡಗಿತು. ಅರಾಲಿನ ಅಂಚಿನಲ್ಲಿ ಹೊಸದಾಗಿ ತೆರೆದ ಗಾಂಧಿಶಾಲೆಗೆ ಇಂತ್ರುವನ್ನು ಸೇರಿಸಿದಳು. ತಾನೇ ದಿನಕ್ಕೆರಡು ಬಾರಿ ಹೋಗಿ ಶಾಲೆಗೆ ಬಿಟ್ಟು ಬರುತ್ತಿದ್ದಳು. ಅಂತೋಣಿ ಸ್ಥಿತಪ್ರಜ್ಞ, ಕೋವಿ-ಶಿಕಾರಿ- ಸಾರಾಯಿ ಎಲ್ಲದರಲ್ಲೂ ದಿವ್ಯ ಉದಾಸೀನ.

ವ್ಯವಹಾರವೆಲ್ಲಾ ದುಸ್ತೀನಳದ್ದೇ. ಗೋವೆ ಬೀಜ ಸಂಗ್ರಹಿಸುವುದು, ಪೇಟೆಗೆ ಮಾರುವುದು, ಹಣದ ವ್ಯವಹಾರ, ಜೋಪಾನ ಎಲ್ಲಾ.



ವಿದ್ಯುತ್ ಬಂತು. ಅರಾಲಿನಲ್ಲಿ ಮೊತ್ತ ಮೊದಲಾಗಿ ಅಂತೋಣಿಯ ಮನೆ ಬೆಳಗಿತು. ರಸ್ತೆ ಬಂತು. ದಾಂಬರು ಬಂತು.

ಇಂತ್ರು, ಈಗ ನಾಲ್ಕನೇ ತರಗತಿ. ದಿನಕ್ಕೊಂದು ಬಾರಿ ಮಾಸ್ತರರಿಂದ ದೂರು ಬರುತ್ತಿತ್ತು. ಮೊದಮೊದಲು ಅದು ಮಾಮೂಲು ಎಂದು ತಾತ್ಸಾರ ಮಾಡಿದ ದುಸ್ತೀನ್‌ಬಾಯಿ, ಇಂತ್ರು, ಓರಗೆಯವರೊಂದಿಗೆ ಸೇರಿ ಕಳ್ಳತನ ಮಾಡಿದ ಬಗ್ಗೆ ದೂರು ಬಂದಾಗ ಹೌಹಾರಿದಳು. ಇಂತ್ರು, ಪಟಾಲಂ, ಶಾಲೆಗೆ ಟೊಪ್ಪಿ ಹಾಕಿ, ಯಾರಯಾರದೋ ತೋಟಕ್ಕೆ ಲಗ್ಗೆ ಹಾಕಿ, ಅಲಸಂದೆ, ಗೆಣಸು, ಮುಳ್ಳುಸೌತೆ, ನೆಲಗಡಲೆ ತುಡುಗು ಮಾಡುತ್ತಿತ್ತು. ಮಂದಿ ಹೆದರಿಸಿದರೆ ಮಕ್ಕಳು ಓಡಿ ಹೋಗುವುದಿಲ್ಲ. ಇದಿರಾಗಿ ಎದುರಿಸುತ್ತಾರೆ! ಹಳ್ಳಿಮಂದಿಗೆ ಇದು ವಿಚಿತ್ರ ಅನುಭವ.

ಮೈಮುರಿದು ದುಡಿದ ಫಲ ಕೈಗೆ ಇಲ್ಲ. ನಾಲ್ಕಾರು ಮಂದಿ ಕಾದು ನಿಂತು, ಬಾಸುಂಡೆ ಬರುವಂತೆ ಬಡಿದರು. ಪೆಟ್ಟು ತಿಂದವರಲ್ಲಿ ಇಂತ್ರು ಸಹ ಒಬ್ಬ. ನಾಲ್ಕು ದಿನ ಮನೆಯಲ್ಲೇ ಮಲಗಿದ. ಮಾತಿಲ್ಲ ಕತೆಯಿಲ್ಲ. ಐದನೇ ದಿನ ಶಾಲೆಗೆಂದು ಹೋಗಿದ್ದ.

ಅಂಗಳದಲ್ಲಿ ಪೇರಿಸಿದ್ದರು ಧಾನ್ಯದ ಕೊಯ್ಲನ್ನು. ಎಲ್ಲಿಂದ ಎರಗಿತ್ತೊ ಏನೋ ಬೆಂಕಿ. ಒಣಗಿದ ಇಡೀ ಧಾನ್ಯದ ರಾಶಿಯನ್ನು ಕಬಳಿಸಿಬಿಟ್ಟಿತು ಬೆಂಕಿ. ಅಡಗಿ ನಿಂತ ಇಂತ್ರು, ಗಹಗಹಿಸಿ ನಕ್ಕ.



ಇಂತ್ರು, ಈಗ ಹೈಸ್ಕೂಲು ಮೆಟ್ಟಲು ಹತ್ತಿದ್ದಾನೆ. ಅವನು ಏರಿದ್ದಲ್ಲ. ಮಾಸ್ತರರೇ ಏರಿಸಿದ್ದು. ಅವನು ಹೋದರೆ ಸಾಕಾಗಿತ್ತು ಅವರಿಗೆ. ಮೀಸೆ ಮೂಡಿದ ಇಂತ್ರು, ಈಗ ಗೆಣಸು, ಅಲಸಂದೆ, ಸೌತೆಗೆ ಲಗ್ಗೆ ಹಾಕುವವನಲ್ಲ. ದಾವಣಿ ಹೊದ್ದ ಎಳೆ ಮೊಗ್ಗಿನ ಮೇಲೆ ಲಗ್ಗೆ ಹಾಕತೊಡಗಿದ. ಕುಂದಾಪುರ ಹೈಸ್ಕೂಲ್‌ನಿಂದ ದಿನಕ್ಕೊಂದು ದೂರು ಬರತೊಡಗಿತು.

ನಾಲ್ಕಾರು ಬಾರಿ ಮಾಸ್ತರರು ಬುದ್ಧಿ ಹೇಳಿದರು. ಪ್ರಯೋಜನ ಶೂನ್ಯ. ಶಾಲೆಯಿಂದ ಕೋವಿ ಅಂತೋಣಿಗೆ ಕರೆಬಂತು. ಮಗನನ್ನು ಎಳೆತಂದು ಚೆಲ್ಲಿದ. ಗನ್‌ಲೋಡ್ ಮಾಡಿ, 'ಹುಡಿ ಹಾರಿಸುತ್ತೇನೆ' ಎಂದ. ಅಂತೋಣಿಯ ರೌದ್ರಾವತಾರಕ್ಕೆ ದುಸ್ತೀನ್‌ಬಾಯಿ ಅಡ್ಡ ಬಂದಳು. ''ಮೊದಲು ನನ್ನ ಗತಿಕಾಣಿಸಿ. ಆನಂತರ ಮಗನನ್ನು'' ಎಂದಳು. ''ಸತ್ತುಹೋಗಿ ಸೈತಾನರೇ'' ಎಂದ ಅಂತೋಣಿ. ಕೋವಿ ಬಿಸುಟು ಸರಿದು ಹೋದ... ಸಾರಾಯಿ ದುಖಾನಿಗೆ.

ಊರ ಜನ ಒಂದಾದರು. ಇದೆಲ್ಲಾ ನೆತ್ತರ ಹಾಯ್ಗುಳಿಯ ಕಿತಾಪತಿ ಎಂದರು. ದುಸ್ತೀನ್ ಅವಲತ್ತುಕೊಂಡಳು. ಅಂತೋಣಿ ಮತ್ತೊಮ್ಮೆ ಕೋವಿ ಸವರಿ, ''ಎಲ್ಲಿ ತೋರಿಸು ನಿನ್ನ ಹಾಯ್ಗುಳಿ. ನಂತರ ಕೋಲ ಕೊಡುತ್ತೇನೆ'' ಎಂದ. ಮಹಾತಪ್ಪು ಮಾಡಿದವಳಂತೆ ಮಿಸುಕಾಡತೊಡಗಿದಳು ದುಸ್ತೀನ್‌ಬಾಯಿ. ಅಗೋಚರ ದಳ್ಳುರಿ ದಗದಗಿಸತೊಡಗಿತು.

ಇಡೀ ಮನೆಯಲ್ಲಿ ವಿಷಾದ. ಅಪರಾಧಿ ಭಾವ. ಏಕಾಂತತೆ. ಇರುವ ಮೂರು ಜನರ ನಡುವೆ ಗೋಡೆ. ಮಾತಿಲ್ಲ, ನಗುವಿಲ್ಲ, ಇಂತ್ರು ಬಂದರೆ ಬಂದ. ಬರದಿದ್ದರೆ ಇಲ್ಲ. ಯಾಕೆ ಬರಲಿಲ್ಲ ಎಂದು ಕೇಳುವಂತಿಲ್ಲ. ಮನೆಯಲ್ಲಿ ಅಡಗಿಸಿಟ್ಟ ನೋಟುಗಳು ಕಣ್ಮರೆಯಾಗತೊಡಗಿದುವು. ದುಸ್ತೀನ್‌ಬಾಯಿಯ ಚಿಲ್ಲರೆಗಳು ಮಂಗಮಾಯ.

ಒಂದು ರಾತ್ರಿ ಬರುವಾಗ, ಇಂತ್ರು ಓಲಾಡುತ್ತಿದ್ದ. ದುಸ್ತೀನ್‌ಬಾಯಿಗೆ ಸುಪರಿಚಿತವಾಗಿದ್ದ ಸಾರಾಯಿ ವಾಸನೆ ಇಡೀ ಇಂತ್ರುವನ್ನು ಆವರಿಸಿತ್ತು. ಮಮ್ಮಲ ಮರುಗಿದಳು ದುಸ್ತೀನ್ ಬಾಯಿ. ಏಸುವಿನ ಇದಿರು ಮೊಂಬತ್ತಿ ಹಚ್ಚಿಟ್ಟು, 'ತಂದೆಯೇ ಅವನಿಗೆ ಸದ್ಬುದ್ಧಿ ನೀಡು' ಎಂದು ರೋದಿಸಿದಳು.

ದಿನ ಕಳೆಯುತ್ತಿತ್ತು.

ಅದೊಂದು ದಿನ, ಹೆಡ್‌ಮಾಸ್ತರೊಂದಿಗೆ ಅಧ್ಯಾಪಕರ ತಂಡವೇ ಬಂತು, ಅಂತೋಣಿ ಮನೆಗೆ. ಇಂತ್ರುವನ್ನು ಶಾಲೆಯಿಂದ ಹೊರಹಾಕಿರುವುದಾಗಿ ತಿಳಿಸಿದರು. ಕಾರಣ ಕೇಳಲಿಲ್ಲ ಅಂತೋಣಿ. ಕೇಳುವ ಧೈರ್ಯವೂ ಇರಲಿಲ್ಲ. ದುಸ್ತೀನ್‌ಬಾಯಿ ಸೆರಗನ್ನು ಬಾಯಿಗೆ ಉಂಡೆಯಾಗಿಸಿಕೊಂಡು ಅತ್ತಳು.

ನಾಲ್ಕು ದಿನ ಇಂತ್ರು ಮನೆಗೆ ಬರಲಿಲ್ಲ. ಐದನೇ ದಿನ ಪೊಲೀಸ್ ಪಟಾಲಂ ಅಂತೋಣಿ ಮನೆಗೆ ಬಂತು. ಕೇವಗೆ ಹಿಂಡಲಿನ ತನಕ ಬಂದ ಪೊಲೀಸ್‌ಜೀಪು ಅಲ್ಲಿಗೆ ಬಂದದ್ದು ಅದೇ ಪ್ರಥಮ. ಇಡೀ ಊರು ಒಂದಾಗಿ ನೆರೆಯಿತು.

'ತನ್ನ ಮೇಲೆ ದೂರುಕೊಟ್ಟು ಶಾಲೆಯಿಂದ ಹೊರ ಹಾಕಿಸಿದ ಹುಡುಗಿಯನ್ನು, ಹಾಡುಹಗಲೇ, ಕ್ಲಾಸಿಗೆ ನುಗ್ಗಿ, ಇಂತ್ರು, ಎಳೆದುಕೊಂಡು ಹೋಗಿದ್ದ. ಮೂರು ದಿನಗಳ ನಂತರ ಹುಡುಗಿಯ ಶವ ಗಂಗೊಳ್ಳಿ ಕಡವಿನಲ್ಲಿ ಸಿಕ್ಕಿದೆ. ಪೋಸ್ಟ್‌ಮಾರ್ಟಂ ರಿಪೋರ್ಟ್ ಬಂದಿದೆ. ಮೀನುಗಳು ಶವವನ್ನು ಹರಿದು ತಿಂದುದರಿಂದ ಸಾವಿನ ಕಾರಣ ಅಸ್ಪಷ್ಟ. ಏನಿದ್ದರೂ ಇಂತ್ರು, ಈಗ



ತಮ್ಮ ಬೇಟೆ' ಎಂದರು ಪೊಲೀಸರು.

ಇಡೀ ಊರು ಒಂದಾಗಿಬಿಟ್ಟಿತ್ತು. ಪಾದರಿಗಳು ಬಂದರು. ಎಮ್ಮೆಲ್ಲೆ ಬಂದರು. ಕುಂದಾಪುರ ವಿಡೀ ಬಂದ್ ಆಯ್ತು. ನಾಲ್ಕಾರು ಜನ ಕೈಕಾಲು ಮುರಿದುಕೊಂಡರು. ಶಾಂತಿಸಭೆ ಆಯ್ತು. ಪುಂಖಾನುಪುಂಖ ಭಾಷಣ ಮೊಳಗಿತು. ಶಾಲೆ ಬಂದ್ ಆಯ್ತು. ಊರಿಡೀ ಹದ್ದುಗಳ ಹಾರಾಟ....

ಇಂತ್ರು ಪತ್ತೆ ಇಲ್ಲ.

ಇಡೀ ಅರಾಲು ಅಂತೋಣಿಯನ್ನು ಅಪರಿಚಿತ ದೃಷ್ಟಿಯಿಂದ ಕಂಡಿತು. ಒಮ್ಮಿಂದೊಮ್ಮೆಗೆ ಅಂತೋಣಿ ಕುಟುಂಬ ಸಮಾಜದಿಂದ ಬೇರ್ಪಟ್ಟುಹೋಗಿತ್ತು. ದುಸ್ತೀನ್‌ಬಾಯಿಗೆ ಮೀನು ವಿಕ್ರಯಿಸಬಾರದು ಎಂದು ಬೊಕ್ಕಪಟ್ಣದ ಮಂದಿ ತೀರ್ಮಾನ ತೆಗೆದುಕೊಂಡರು. ಆಕೆ ಮೀನು ಮಾರಾಟ ಮಾಡುವುದು ನಿಂತುಬಿಟ್ಟಿತು. ಒಂದು ರೀತಿಯ 'ಬಹಿಷ್ಕಾರ' ಹೆಸರಿಸದೆಯೇ ಜರುಗಿ ಹೋಯ್ತು. ರಾತ್ರಿಯಾಯ್ತು. ಅಂತೋಣಿಯ ಗೋವೆ ಹಕ್ಕಲಿಗೆ ಬೆಂಕಿ ಬಿತ್ತು. ಅರ್ಧಕರಟದ ಹತ್ತಾರು ಮರಗಳು ಉರುಳಿದುವು. ಅಕರಾಳ ವಿಕರಾಳ ಅಗ್ನಿತಾಂಡವದಲ್ಲಿ, 'ಕಡಿಯಿರಿ, ಕೊಚ್ಚಿರಿ' ಎನ್ನುವ ನೂರಾರು ಮಂದಿಯ ದಂಡು.

ಅಂತೋಣಿ ಕೋವಿ ಎತ್ತಿಕೊಳ್ಳಲಿಲ್ಲ. ಕಣ್ಣೆದುರೇ, ತಾನೇ ನೆಟ್ಟು ಬೆಳೆಸಿದ ಮರಗಳು ಕರಿಕಾಗಿ ಹೋಗುತ್ತಿದ್ದುವು. ದುಸ್ತೀನ್ ಕಣ್ಣಲ್ಲಿ ಧಾರಾಕಾರ ನೀರು.

ಹತ್ತನೇ ದಿನ ಇಂತ್ರುವನ್ನು ಹಿಡಿದರು. ಸಾಕಷ್ಟು ಲತ್ತೆ ಬಿತ್ತು. ಕೇಸು ಕೋರ್ಟುಗಟ್ಟೆ ಹತ್ತಿತು. ನಾಲ್ಕು ತಿಂಗಳು ಜೈಲಿನಲ್ಲಿದ್ದ ಇಂತ್ರು, ಆರೋಪಿಯಾಗಿ. ಮಗನನ್ನು ಉಳಿಸಿಕೊಡುವಂತೆ ಅಂತೋಣಿಗೆ ಗೋಗರೆದಳು ದುಸ್ತೀನ್. ಧರ್ಮಗುರುಗಳಲ್ಲಿಗೆ ದೂರು ಹೊತ್ತು ಸಾಗಿದಳು. ಕಿರಿಸ್ತಾನರು ಒಂದಾದರು. ಕೋರ್ಟಿನಲ್ಲಿ ತೀವ್ರ ಚಕಮಕಿ ಆಯ್ತು. ಕೊನೆಗೂ ಆರೋಪವನ್ನು ದೃಢೀಕರಿಸಲು ಪ್ರಾಸಿಕ್ಯೂಶನ್ ವಿಫಲವಾದುದರಿಂದ, ಪೋಸ್ಟ್‌ಮಾರ್ಟಂ ರಿಪೋರ್ಟ್‌ನ ಅಸ್ಪಷ್ಟತೆಯಿಂದ ಇಂತ್ರು ಬಚಾವಾಗಿಬಿಟ್ಟ. ಕೇಸು ಬಿದ್ದುಹೋಯ್ತು. ಅದರೊಂದಿಗೆ ಅಂತೋಣಿ ಕೂಡಿಟ್ಟ ಹಣ ಸಹ.

ಇಂತ್ರು ಬಿಡುಗಡೆಯಾಗಿ ಬಂದ. ಹತ್ತಾರು ದಿನ ಮನೆಯಲ್ಲೇ ಉಳಿದ. ಮತ್ತೆ ಎದೆಯುಬ್ಬಿಸಿ ತಿರುಗತೊಡಗಿದ. ಈಗ ಶಾಲೆಯೂ ಇಲ್ಲ. ಅದೊಂದು ದಿನ ದುಸ್ತೀನ್‌ಬಾಯಿ ಪೆಟ್ಟಿಗೆ ತೆರೆದಾಗ, ಅವಳ ಚೂರು ಪಾರು ಆಸ್ತಿ, ಎರಡು ಎಳೆ ಚಿನ್ನದ ಸರ, ಎರಡು ಚಿನ್ನದ ಬಳೆಗಳು ನಾಪತ್ತೆಯಾಗಿದ್ದುವು.

ಹತ್ತು ದಿನಗಳ ನಂತರ ಇಂತ್ರು ಬಂದ.

"ನಾನು ಮಿಲಿಟರಿಗೆ ಆಯ್ಕೆ ಆಗಿದ್ದೇನೆ. ನಾಳೆಯೇ ಹೋಗ್ತಿದ್ದೇನೆ" ಎಂದು ಸಾರಿದ.

ನಿಡಿದಾದ ಉಸಿರು ತೆಗೆದುಕೊಂಡದ್ದು ಅಂತೋಣಿ, ದುಸ್ತೀನ್‌ಬಾಯಿ ಮಾತ್ರವಲ್ಲ, ಇಡೀ ಬೊಕ್ಕಪಟ್ಣ.

ಇಂತ್ರು ಮಿಲಿಟರಿಗೆ ಹೋಗಿಬಿಟ್ಟ.

ಮನೆ ಭಣಗುಟ್ಟುತ್ತಿತ್ತು. ದುಸ್ತೀನ್‌ಬಾಯಿ ಅಳಿದುಳಿದ ಗೋವೆ ಮರಗಳಲ್ಲಿ ಮಿಡಿ ಚಿಗುರಿಗಾಗಿ ಕಾಯುತ್ತಿದ್ದಾಳೆ. ಅಂತೋಣಿ ಮೊದಲಿನ ಉತ್ಸಾಹ ಕಳೆದುಕೊಂಡಿದ್ದ. ಹಕ್ಕಿ ಬೇಟೆ ನಿಂತುಹೋಗಿದೆ. ಇಡೀ ಊರು ಅವನೊಂದಿಗೆ ಮಾತನಾಡುವುದಿಲ್ಲ. ಸಾರಾಯಿ ದುಖಾನಿಗೆ ಹೋದರೆ, ಅವನನ್ನು ಕಂಡೊಡನೆ ದುರ್ದಾನ ತೆಗೆದುಕೊಂಡಂತೆ ಮಂದಿ ಪರಾರಿ.

ಅವನ ಬಿಟ್ಟ ಸಾರಾಯಿಗೆ ಯಾರೂ ಗತಿ ಇಲ್ಲ ಈಗ. ಒಂಟಿತನದಲ್ಲಿ ನರಳತೊಡಗಿದ ಅಂತೋಣಿ.

ಅದೊಂದು ರಾತ್ರಿ ಮಲಗಿದ ಅಂತೋಣಿ ಬೆಳಗ್ಗೆ ಏಳಲಿಲ್ಲ!

ಮಿಲಿಟರಿ ಪೊದೆ ಮೀಸೆ, ಸೈಕಲ್‌ಕಟ್ಟೆ, ಇನ್‌ಶರ್ಟ್ ಮಾಡಿದ ಬಿಳಿ ಅಂಗಿ, ಕರಿ ಕೋಟು, ಮಿಲಿಟರಿ ಬೂಟು, ಗದೆಯಂತೆ ಹೆಗಲಿಗೇರಿದ್ದ ಡಬ್ಬಲ್ ಬ್ಯಾರೆಲ್ ಗನ್ ಈಗ ದಂತಕತೆ. ಕುಂದಾಪುರದಿಂದ ಶವಪೆಟ್ಟಿಗೆ ಬಂತು. ಅದರೊಂದಿಗೆ ಧರ್ಮಬಾಂಧವರು.

ಅರಾಲಿನಲ್ಲಿ ಮೌನ ಮೆರವಣಿಗೆ ಸಾಗಿತು. ದುಸ್ತೀನ್‌ಬಾಯಿ ದಫನ್‌ಗೆ ಹೋಗಲಿಲ್ಲ. ಅರ್ಧ ಕರಟಿದ ಗೋವೆಮರದ ಕೆಳಗೆ ನಿಂತು ಶಿಲೆಯಾಗಿ ಬಿಟ್ಟಿದ್ದಳು. ಆಕೆಯ ಕಂಗಳಲ್ಲಿ ಹನಿಯ ಸುಳಿವಿಲ್ಲ.



ದುಸ್ತೀನ್‌ಬಾಯಿ ಈಗ ಹೆಚ್ಚು ಮಾತನಾಡುವುದಿಲ್ಲ. ಆಕೆಯ ದೊಂಡೆ ಅಡಗಿಯೇ ಹೋಗಿದೆ ಅನ್ನುವಷ್ಟು ಬದಲಾವಣೆ. ಬೆಳಗ್ಗೆ ಎದ್ದು ಗೋವೆ ತೋಟಕ್ಕೆ ಹೋಗುತ್ತಾಳೆ. ದರಲೆ ಗುಡಿಸಿ, ಅಡರು ತರುತ್ತಾಳೆ. ಅಡರು ಪುರುಲೆಯಲ್ಲೇ ಅಡುಗೆ ಮಾಡಿದರೆ ಮಾಡಿಯಾಳು. ಉಂಡರೆ ಉಂಡಾಳು. ಗೋವೆ ಹೂ ಬಿಡುವ ಗ್ರಾಮದಲ್ಲಿ, ಮಿಜರು, ಕಾಯಿ ಬಿಡುವಾಗ ತೋಟಕ್ಕೆ ಯಾರೂ ಲಗ್ಗೆ ಹಾಕುವುದಿಲ್ಲ, ಆಕೆಯ ದೊಂಡೆ ಅಡಗಿದ್ದರೂ! ಸಿಕ್ಕಿದಷ್ಟು ಹಣ್ಣುಗಳನ್ನು ತೆಂಗಿನ ಗರಿಗೆ ಸುರಿದು, ಕೋವೆ ಮಾಡಿಕೊಂಡು ಬುಟ್ಟಿಯಲ್ಲಿಟ್ಟು, 'ಗಾಂಧಿಶಾಲೆಯ' ಬಳಿ ನೆರಳಿನಲ್ಲಿ ಕೂರುತ್ತಾಳೆ. ಮಕ್ಕಳು ಹತ್ತು ಪೈಸೆ ಕೊಟ್ಟು ಒಂದು ಕೋವೆ ಕೊಂಡುಕೊಳ್ಳುತ್ತಾರೆ. ಸಿಕ್ಕಿದ ಬೀಜ ಮಾರಿದರೆ, ಗಂಜಿಗೆ ಸಾಕು. ವರ್ಷಕ್ಕೆರಡು ಸೀರೆ ಸಾಕು. ಆದರೂ ಕರೆಂಟ್ ಬಿಲ್ಲು ಕಟ್ಟಬೇಕು. ಹುಡಿಯಾದ, ಹಾರಿಹೋದ ಹಂಚು ಬದಲಿಸಬೇಕು. ಮಳೆಗಾಲಕ್ಕೆ ಸಜ್ಜಾಗಬೇಕು...

ದಿನಗಳು, ತಿಂಗಳು, ವರ್ಷಗಳು, ಉರುಳುತ್ತಿವೆ. ಒಂದು ದಿನ ಬೆಳಗ್ಗೆ.

ದುಸ್ತೀನ್‌ಬಾಯಿಯ ಮನೆಯ ಮುಂದೆ ಜನರ ಸಂತೆ. ಮಿಲಿಟರಿ ಮಂದಿ ಬಂದಿದ್ದರು. ವಿಷಯ ಅರಿವಾಗಲು ಬಹಳ ಹೊತ್ತು ಬೇಕಾಯ್ತು ದುಸ್ತೀನ್ ಬಾಯಿಗೆ. ಸಾರ್ಜಂಟ್ ಆಗಿ ನೇಮಕಗೊಂಡಿದ್ದ ಇಂತ್ರು, ಮಾದಕ ವ್ಯಸನಿಯಾಗಿ ಮಾರ್ಪಟ್ಟಿದ್ದ. ಮಿಲಿಟರಿ ಕ್ಯಾಂಪಸ್ಸಿನಲ್ಲಿ ಮಾರಾಟ, ಚಟವನ್ನು ವಿಸ್ತರಿಸಿದ ಅವನು ಇನ್ನೇನು ಸಿಕ್ಕಿಬೀಳುವ ಸುಳಿವು ಸಿಕ್ಕಿದಾಗ ತಪ್ಪಿಸಿ ಕೊಂಡಿದ್ದ. ನಾರ್ಕೋಟಿಕ್ ಸ್ಕ್ವಾಡ್‌ನವರು ಕೋರ್ಟ್ ಮಾರ್ಶಲ್‌ಗಾಗಿ ಇಂತ್ರುವನ್ನು ಹುಡುಕಿಕೊಂಡು ಬಂದಿದ್ದರು.

ಓ ದೇವರೇ, ಎಂದು ಎಲ್ಲರೆದುರು ರೋದಿಸಿದಳು ದುಸ್ತೀನ್. ಮಿಲಿಟರಿ ಮಂದಿ ಹೆಚ್ಚೇನು ಪ್ರಶ್ನಿಸದೇ ಹೊರಟುಹೋದರು.

ಆದಾಗಿ ತಿಂಗಳೊಪ್ಪತ್ತು ಸರಿಯಿತಷ್ಟೇ. ಅದೊಂದು ದಿನ ಬೆಳಗ್ಗೆ, ಜೀವಚ್ಛವವಾಗಿದ್ದ ಬಡಕಲು ಇಂತ್ರು, ಗಡ್ಡ ಮೀಸೆಯೊಂದಿಗೆ ಪ್ರತ್ಯಕ್ಷನಾದ!

ದುಸ್ತೀನ್ ಅಲವತ್ತುಕೊಂಡಳು.

"ಮಿಲಿಟರಿಯವರದ್ದೆಲ್ಲಾ ಕಟ್ಟುಕತೆ... ನಾನಿನ್ನು ಅಲ್ಲಿಗೆ ಹೋಗಲಾರೆ. ಆ ಸೂಳೆಮಕ್ಕಳು ನನ್ನ ಬದುಕನ್ನು ನಿಯಂತ್ರಿಸುವುದು, ಆಳುವುದು ಬೇಕಿಲ್ಲ. ನಾನಿದನ್ನು ಸಹಿಸುವುದಿಲ್ಲ", ಇಂತ್ರು ಏನೇನೋ ಹೇಳಿದ. ದುಸ್ತೀನ್‌ಗೆ ಅರ್ಥವಾದದ್ದು ಇಷ್ಟು ಮಾತ್ರ. ಇಂತ್ರು, ಇನ್ನು ಇಲ್ಲೇ ಇರುತ್ತಾನೆ. ಒಂದು ರೀತಿಯ ನೆಮ್ಮದಿ ಅವಳಿಗೆ.

ನಾಲ್ಕಾರು ದಿನ, ದುಸ್ತೀನಳ ಹಿಂದೆ ಮುಂದೆ, ಮನೆಯಲ್ಲಿ ಓಡಾಡಿಕೊಂಡಿದ್ದ ಇಂತ್ರು, ತಾನು ವ್ಯಾಪಾರ ಮಾಡುತ್ತೇನೆ ಎಂದ. ಪೆಟ್ಟಿಗೆಯೆಲ್ಲಾ ತಡಕಾಡಿ, ಅಂತೋಣಿಯ ಉಳಿತಾಯದೊಂದಿಗೆ ತನ್ನದೂ ಒಟ್ಟುಗೂಡಿಸಿ, ನಾಲ್ಕು ಸಾವಿರ ಮಾಡಿ ಕೈಗೆ ಹಾಕಿದಳು.

ಇಂತ್ರು ಹೊಸ ಸೈಕಲ್ ತೆಗೆದುಕೊಂಡ. ಕ್ಯಾರಿಯರ್‌ಗೆ ಮೀನು ಬುಟ್ಟಿ ಕಟ್ಟಿ, ಪೋಂಯ್

ಪೋಂಯ್ ಅನ್ನುವ ಬಲ್ಪ್‌ಹಾರ್ನ್‌ನೊಂದಿಗೆ ಮೀನು ಮಾರತೊಡಗಿದ. ಕೈಯಲ್ಲಿ ನಾಲ್ಕಾರು ಕಾಸು ಓಡಾಡತೊಡಗಿತು.

ಮಗ ದಾರಿಗೆ ಬಂದ ಎಂದು ಪರಲೋಕ ದಲ್ಲಿರುವ ತಂದೆಯ ಚಿತ್ರದೆದುರು ಮೊಣ ಕಾಲೂರಿದಳು ದುಸ್ತೀನ್‌ಬಾಯಿ.

ಇಂತ್ರು ಕುಡಿಯುವುದಿಲ್ಲ. ಆದರೆ ಅವನ ಪರಿ ವಿಚಿತ್ರ. ಕೆಲವೊಮ್ಮೆ ನಡುಕಹತ್ತಿದಂತೆ ಚಟಪಡಿಸುತ್ತಿದ್ದ. ವಿಚಿತ್ರ ವಾಸನೆಯ ಚುಟ್ಟಾ ಸದಾ ಅವನ ತುಟಿ ಮೇಲಿರುತ್ತಿತ್ತು. ಏನೋ ಒಂದು ಗುಂಗು. ಯಾವುದೋ ಲೋಕದಲ್ಲಿ ಓಲಾಡುತ್ತಿದ್ದಂತೆ. ಕರೆದರೂ ಉತ್ತರವಿಲ್ಲ. ಸ್ವಯ ಇಲ್ಲ.

ಏನೋ ಗಂಡಸಲ್ವೇ. ಏನಾದರೊಂದು ಚಟ ಬೇಕಲ್ಲ. ಇಡೀ ಬದುಕನ್ನು ಬಾಟಲಿ ಯೊಂದಿಗೆ ಸಮನ್ವಯಿಸಿದ ಗಂಡನೊಂದಿಗೆ ಬದುಕು ಹೊರಳಿಸಿಕೊಂಡು ಬಂದ ದುಸ್ತೀನ್, ಬಾಟಲಿಗಿಂತ ಚುಟ್ಟಾ ಸಣ್ಣ ಅಭ್ಯಾಸ ಎಂದು ನೆಮ್ಮದಿಯ ಉಸಿರುಬಿಟ್ಟಳು.

ಅಲ್ಲಲ್ಲಿ ಓಡಾಡಿ, ಧರ್ಮಗುರುಗಳನ್ನು ಕಂಡು, ಶಂಕರಪುರದ ವಲ್ಲೀನಾಯಕರ ಮಗಳು ಅನಿತಾಳನ್ನು ಇಂತ್ರುವಿಗೆ ಗೊತ್ತುಪಡಿಸಿಬಿಟ್ಟಳು ದುಸ್ತೀನ್‌ಬಾಯಿ. ಅನಿತಾಳನ್ನು ನೋಡಿದ ಇಂತ್ರು ಬೇಡ ಅನ್ನಲಿಲ್ಲ.

ಅರಾಲಿನಲ್ಲಿ ಮತ್ತೊಮ್ಮೆ ಮೆರವಣಿಗೆ.

ಮಾವ ಕೊಟ್ಟ ಹೊಸ ಸೂಟು ಬೂಟು ತೊಟ್ಟು, ತೋಳಿನಲ್ಲಿ ಅನಿತಾಳ ಕೈ ಇರಿಸಿಕೊಂಡು ಇಂತ್ರು, ಹೊಸ ಜರ್ಪಿನಿಂದ ಅರಾಲಿನಲ್ಲಿ ಸಾಗಿಬಂದ. ಬಿಳಿಯುಡುಗೆ ತೊಟ್ಟ ಅಪ್ಸರೆ ಅನಿತಾ, ನಡೆದುಬಂದಳು ಬೂತಾಯಿ ಹಕ್ಕಲಿಗೆ, ಕನಸಿನ ಅರಮನೆಗೆ.

ದಿನಗಳು ಅರಳಿದುವು. ಮನೆಯಲ್ಲೇ ಉಳಿದ ಇಂತ್ರು, ಒಳಹೊರಗೆ ಸರಿದಾಡಿ, ನಾಲ್ಕು ನಗೆಯ ಮಾತು ಮಿಂಚಿಸಿದ. ಐದನೇ ದಿನ ''ಬೇಸರವಾಗಿಬಿಟ್ಟಿದೆ. ಕೆಲವು ದಿನಗಳಲ್ಲಿ ಬರುತ್ತೇನೆ'' ಎಂದು ಹೇಳಿ ಹೊರಟುಬಿಟ್ಟ. ಪೆಟ್ಟಿಗೆಯಲ್ಲಿದ್ದ ಮದುಮಗಳ ಚಿನ್ನದ ಕಂಠಹಾರ, ನಾಲ್ಕು ಬಳೆಗಳು ಮಂಗಮಾಯ!

ಹೌಹಾರಿಬಿದ್ದ ಅನಿತಾ, ದುಸ್ತೀನ್‌ಬಾಯಿಗೆ ಹೇಳಿದಳು. ನಿಡುಸುಯ್ದ ದುಸ್ತೀನ್‌ಬಾಯಿ ಏನೊಂದು ಮಾತೂ ಆಡಲಿಲ್ಲ.



ತಿಂಗಳು ಸರಿಯಿತು.

ಅನಿತಾ ವಾಂತಿ ಮಾಡಿಕೊಳ್ಳತೊಡಗಿದಳು...

ಹೌಹಾರಿದ ದುಸ್ತೀನ್‌ಬಾಯಿ ಡಾಕ್ಟರನ್ನು ಕರೆತಂದಳು. ಒಂಟಿ ಜೀವ, ತನ್ನಂತೆ ಮನೆಮಾರು ತೊರೆದು ಬಂದಿದೆ, ಈ ಅನಾಥ ನೆಲಕ್ಕೆ. ಅದು ತನ್ನಂತೆಯೇ ಕೊರಗಬಾರದು.

ಪರೀಕ್ಷೆ ನಡೆಸಿ, ನಕ್ಕು, ಡಾಕ್ಟರರು ಅನಿತಾ ತಾಯಿಯಾಗಲಿದ್ದಾಳೆ ಎಂದು ಸಾರಿದರು. ಶುಭ ಹಾರೈಸಿ, ಆಸ್ಪತ್ರೆಗೆ ಬಂದು ಉಚಿತ ಶಕ್ತಿ ಮಾತ್ರೆ ಪಡೆದುಕೊಳ್ಳುವ ಸಲಹೆ ಕೊಟ್ಟರು.

ಮನೆತುಂಬಿಕೊಂಡಿತು ಸಂತಸದ ಕಿರು ಅಲೆ.

ಇಂತ್ರು ಬಂದುಬಿಟ್ಟ.

''ಹಳೇ ದೋಸ್ತಿ ಒಬ್ಬರು ಗಂಟುಬಿದ್ದರು. ಮದ್ರಾಸ್‌ತನಕ ಹೋಗಿಬಂದೆ'', ಇಂತ್ರು ಹೇಳಿದ. ಸೊಸೆ ಬಸುರಾದ ಸಿಹಿಸುದ್ದಿಯ ನಡುವೆ ಚಿನ್ನದ ಸುದ್ದಿ ಬೇಡವೆಂದು, ದುಸ್ತೀನ್ ಸುಮ್ಮನಾದಳು.

''ಸೈಕಲ್‌ನಲ್ಲಿ ಮೀನುತುಂಬಿ ಮಾರಿದರೆ ಹೆಚ್ಚಿನ ಮುನಾಫೆ ಇಲ್ಲ. ಈಗೆಲ್ಲಾ ಯಾಂತ್ರೀಕೃತ ದೋಣಿಗಳು ಬಂದಿವೆ. ಟ್ರಾಲ್‌ಬೋಟುಗಳು ಬಂದಿವೆ. ನನ್ನೊಬ್ಬ ಸ್ನೇಹಿತ ಪಾಲುಗಾರಿಕೆಗೆ ಸಿದ್ಧನಿದ್ದಾನೆ. ಐವತ್ತು ಸಾವಿರ ಇದ್ದರೆ ಸಾಕು, ಚಿನ್ನ,ಚಿನ್ನ ತೆಗೆಯಬಹುದು. ಭೂಮಿ ಅಡ ಇಟ್ಟು ಸಾಲ ಪಡೆಯುವಾ'', ಇಂತ್ರು ಹೊಸ ಸ್ವರ ಎತ್ತಿದ.

ದುಸ್ತೀನ್ ಒಪ್ಪಲಿಲ್ಲ. ''ಇಲ್ಲ ಅತ್ತೆ. ನನ್ನ ಅಪ್ಪ ಸಹ ದೋಣಿ ಪಾಲುಗಾರಿಕೆ ನಡೆಸುತ್ತಾರೆ.

ಅದರಿಂದ ಹೆಚ್ಚಿನ ಮುನಾಫೆ ಇದೆ'' ಎಂದು ಅನಿತಾ ಸಹ ಒಪ್ಪು ಹಾಕಿದಾಗ, ಹೂಂಗುಟ್ಟಿದಳು.

ಸರಸರನೆ ಪಾದರಸದಂತೆ ಓಡಾಡಿದ ಇಂತ್ರು, ದುಸ್ತೀನ್‌ಬಾಯಿಯನ್ನು ಕರೆದುಕೊಂಡು ಕುಂದಾಪುರಕ್ಕೆ ಓಡಿದ. ಭೂಮಿ ಅಡವಿಟ್ಟು ಐವತ್ತು ಸಾವಿರ ಸಾಲ ಪಡೆದ. ಹೇಳಿದ ಕಡೆ ಹೆಬ್ಬೆಟ್ಟು ಒತ್ತುವುದಷ್ಟೇ ದುಸ್ತೀನ್ ಕೆಲಸ. ಮನೆಮಂದಿಗೆ ಸಿಹಿ ಹಂಚಿದ ಇಂತ್ರು.

ದಿನ ಜಾರತೊಡಗಿತು.

ದೋಣಿ ಸಾಗತೊಡಗಿತು

ಮತ್ತೆ ಇಂತ್ರು ಕೈಯಲ್ಲಿ ಚುಟ್ಟಾ ಬಂತು.

ದಿನ ಉರುಳಿತು, ತಿಂಗಳು ಜಾರಿತು.

ಅನಿತಾ ಹಡೆದಳು ಗಂಡು ಮಗು. ಮುದ್ದು ಮುದ್ದಾಗಿತ್ತು. ಅಜ್ಜನದೇ ಪ್ರತಿರೂಪ ಎಂದು ದುಸ್ತೀನ್, ಅಂತೋಣಿ ಎಂದೇ ಹೆಸರಿಟ್ಟಳು.

ಇಂತ್ರು, ಕಂಟ್ರಿ, ಕೆಲಸ ಮಾಡುವುದಿಲ್ಲ. ಕೈಗೆ ವಾಚು ಬಂದಿದೆ. ಸಿಲ್ಕಿನ ಅಂಗಿ, ಪ್ಯಾಂಟು ಬಂದಿದೆ. ಸಂಜೆಯಷ್ಟೇ ಹೊರಗೆ ಹೋಗುತ್ತಾನೆ. ದೋಣಿ ದುಡಿದು ತಂದ ಮೀನಿನಲ್ಲಿ ಲಾಭದ ಅಂಶ ಸಾಕಷ್ಟು ಇದೆ ಎಂದು ಹೇಳುತ್ತಿದ್ದ. ತಿಂಗಳಲ್ಲಿ ಆರೇಳು ದಿನ ಕೊಯಮತ್ತೂರು, ಮದ್ರಾಸ್ ಎಂದು ಹಾರಿಹೋಗುತ್ತಿದ್ದ.





ಯಾವುದೇ ಮುನ್ಸೂಚನೆಯಿಲ್ಲದೆ ದಾಂಗುಡಿ ಇಟ್ಟಿತ್ತು ಮಳೆಗಾಲ. ಇಡೀ ಕಡಲ ತಡಿ ಒಮ್ಮೆಗೆ ಸ್ತಬ್ಧವಾಯ್ತು. ಘಂಡಿಹಿಡಿದ ಬಲೆ ಗುಡಿಸಲು ಸೇರಿದುವು. ಮೋಟಾರ್ ಬೋಟು ತಟಸ್ಥವಾಯ್ತು.

ಇಂತ್ರು ಕೈ ಗಿಡ್ಡವಾಗತೊಡಗಿತು.

ಒಂದು ದಿನ ಅನಿತಾಳ ಮದುವೆ ಸೀರೆ ಮಾಯವಾಯ್ತು. ಮತ್ತೊಂದು ದಿನ ಆಕೆ ಏಳುವಾಗ ಅವಳ ಕಿವಿಯಲ್ಲಿರುವ ಎರಡು ರಿಂಗ್‌ಗಳು ಮಂಗಮಾಯ. ಅಜ್ಜ ವಲ್ಲೀನಾಯಕರು ಮೊಮ್ಮಗನಿಗೆ ಹಾಕಿದ ಚಿನ್ನದ ಸರವೂ ಮಾಯ! ಅದರೊಂದಿಗೇ ಇಂತ್ರು.

ಹತ್ತು ದಿನ ಬಿಟ್ಟು ಇಂತ್ರು ಬಂದ. ಗಡ್ಡ ಮೀಸೆ ಬೆಳೆದಿತ್ತು.

ಅನಿತಾ ವಿಷಯ ಹೇಳಿದಳು. ಅವನಿಂದ ಚಕಾರ ಶಬ್ದವಿಲ್ಲ.

ಬ್ಯಾಂಕಿನಿಂದ ನೋಟೀಸು ಬರತೊಡಗಿದ್ದುವು.

ಇಂತ್ರು, ಮಾತನಾಡುವುದಿಲ್ಲ. ದಿನವಿಡೀ ಚುಟ್ಟ. ನಕ್ಕರ ನಗುತ್ತಾ ಕೂರುತ್ತಾನೆ. ಮಂಕು ಹಿಡಿದಂತೆ ಕುಳಿತರೆ ದಿನವಿಡೀ ಹಾಗೇ. ಹಣವಿಲ್ಲದಾಗ ತಾಯಿಯ ಮೇಲೆ ಕೈ ಮಾಡಲೂ ಹೇಸುವುದಿಲ್ಲ. ಅನಿತಾ ಹೆದರಿ ಹಿಪ್ಪೆಯಾಗಿದ್ದಾಳೆ.

ಆರು ತಿಂಗಳ ಮಗು ಅಂತೋಣಿ, ಇಡೀ ಮನೆಯನ್ನು ಡೊಗ್ಗಾಲಿನಲ್ಲಿ ಸುತ್ತುತ್ತಾ, ಜೀವಂತ

ವಿರುವ ಎರಡು ಹೆಣ್ಣುಗಳ ನಡುವಿನ ಏಕೈಕ ಕೊಂಡಿಯಾಗಿದ್ದಾನೆ.

ತಿಂಗಳು ಉರುಳಿತು.

ಬ್ಯಾಂಕಿನಿಂದ ಪುನಃ ನೋಟೀಸು ಬಂತು.

ಇಂತ್ರು ಮತ್ತೊಮ್ಮೆ ಪರಾರಿಯಾದ.

ಇಡೀ ಮನೆ ತೊಳೆದಿಟ್ಟಂತೆ ಭಾಸ.

ಬ್ಯಾಂಕಿಗೆ ಹೋದಳು ದುಸ್ತೀನ್‌ಬಾಯಿ. ಇಂತ್ರು ನಯಾಪೈಸೆ ಕಟ್ಟಿರಲಿಲ್ಲ. ಸಾಲ, ಬಡ್ಡಿಯೊಂದಿಗೆ ಹೊರೆಯಾಗಿ ಕುಳಿತಿದೆ.

ಪಾಲುದಾರಿಕೆ ಅಂದವರಲ್ಲಿ ವಿಚಾರಿಸಿದಳು. ಇಂತ್ರು ಎಲ್ಲಿಯೂ ಪಾಲುದಾರಿಕೆ ನಡೆಸಿಲ್ಲ ಎನ್ನುವ ಸತ್ಯ ಹೊರಬಿತ್ತು. ದುಸ್ತೀನ್‌ಬಾಯಿಯ ನಂಬಿಕೆಯ ಅಸ್ತಿವಾರವೇ ಕುಸಿದುಬಿದ್ದಿತ್ತು.

ಜಡಿಮಳೆ. ಸಾಗರ ಉಕ್ಕಿ ಹರಿಯುವಂತೆ ಗರ್ಜನೆ.

ದೂರದ ಅರಾಲಿನಲ್ಲಿ, ತಲೆತಗ್ಗಿಸಿ, ಗೂನುಬೆನ್ನು ಮಾಡಿ ಬಂದವನ ಗುರುತು ಅರಾಲಿನ ಮಬ್ಬು ಬೆಳಕಿನಲ್ಲಿ ಮೊದಲು ಸಿಗಲಿಲ್ಲ ದುಸ್ತೀನ್‌ಳಿಗೆ.

ಅದು ಇಂತ್ರು.

ಎದೆಗೂಡು ಬತ್ತಿ ಹೋಗಿತ್ತು. ಕವಳು ಒಳ ಸರಿದಿತ್ತು.

ಒಂದೂ ಮಾತನಾಡದೆ ಒಳಸರಿದಳು ದುಸ್ತೀನ್. ಯಾರು ಬಂದದ್ದೆಂದು ನೋಡಲು ಹೊರ ಬಂದ ಅನಿತಾ ಕಣ್ಣಗೆ, ಶವಕ್ಕೆ ಉಸಿರು ಕೊಟ್ಟಂತಿರುವ ಇಂತ್ರು. ಕುಸಿದುಬಿದ್ದ ಇಂತ್ರುಗೆ ಕೈಯಾಸರೆ ಕೊಟ್ಟು, ಒಳ ಕರೆತಂದು ಮಂಚಕ್ಕೆ ಒರಗಿಸಿದಳು. ಅಂತೋಣಿ ತೊದಲು ನುಡಿಯಿಂದ ತಾಯಿಯ ಸೀರೆಯನ್ನು ಜಗ್ಗುತ್ತಿದ್ದ.

ದಿನ ಜಾರುತ್ತಿತ್ತು.

ದುಸ್ತೀನ್‌ಬಾಯಿ ಈಗ ಒಂದೂ ಮಾತನಾಡುವುದಿಲ್ಲ.

ಕೆಲವೇ ದಿನಗಳಲ್ಲಿ ಚೇತರಿಸಿಕೊಂಡ ಇಂತ್ರು, ಕುಂದಾಪುರಕ್ಕೆ ಹೋಗಿಬಂದ. "ಬ್ಯಾಂಕಿನ ಸಾಲವನ್ನಂತೂ ತೀರಿಸುವುದು ಅಸಾಧ್ಯ, ಹಕ್ಕಲು ಮಾರಿಬಿಡೋಣ'' ಅಂದ. ದುಸ್ತೀನ್ ತುಟಿ ಒಡೆಯಲಿಲ್ಲ.

ಅದೊಂದು ದಿನ ಏಳುವಾಗ, ತನ್ನ ಎಡ ಹೆಬ್ಬೆಟ್ಟಿಗೆ ಅಂಟಿಕೊಂಡಿದ್ದ ಶಾಯಿ ಗುರುತಿನ ಅರ್ಥವಾಗದೇ, ದುಸ್ತೀನ್‌ಬಾಯಿ, ವಿಸ್ಮಯದಿಂದ, ನಾಲ್ಕು ನಾಲ್ಕು ಬಾರಿ ಸೋಪು ಹಾಕಿ ಅಳಿಸಿಕೊಂಡಳು.

ಮತ್ತೆ ಹತ್ತಾರು ದಿನ ಇಂತ್ರು ಕೈಯಲ್ಲಿ ಹಣ ಓಡಾಡತೊಡಗಿತು.

ಚುಟ್ಟ ಮತ್ತೆ ತುಟಿಗೇರಿತ್ತು.

ನಗು, ಅಳು, ಉನ್ಮಾದ, ವಿಷಾದ.

ಕೊಯಮತ್ತೂರು, ಮದ್ರಾಸು ತಿರುಗಾಟ.

ಕೊನೆಗೊಂದು ದಿನ ಹೋದ ಇಂತ್ರು ಮರಳಿ ಬರಲಿಲ್ಲ. ವರ್ಷ ಜಾರಿತು.

ಮಳೆಗಾಲ ನಿಂತಿತು. ಚಳಿಗಾಲ ಬಂತು. ಗೋವೆ ಮರಗಳು ಅರಳತೊಡಗಿದುವು. ಹೂಮಿಜರು ಬಿಟ್ಟಿತು.



ಅಂತೋಣಿಗೆ ಈಗ ಎರಡು ವರ್ಷ. ತಾಯಿಗಿಂತ ಅಜ್ಜಿಯನ್ನೇ ಹೆಚ್ಚು ಹಚ್ಚಿಕೊಂಡಿದ್ದ. ಎಲ್ಲಿ ಹೋದರೂ ದುಸ್ತೀನ್‌ಬಾಯಿಯ ಬಾಲ ಅಂತೋಣಿ. ಅಂತೋಣಿಯ ಮೇಲೆ ಕನಸು ಹೆಣೆಯತೊಡಗಿದರು ನಿರ್ಭಾಗ್ಯ ಹೆಂಗಳೆಯರು.

ಅದೊಂದು ಕೆಟ್ಟ ಬೆಳಗು.

ಬ್ಯಾಂಕಿನವರು ಬಂದರು. ಅಮೀನರು ಬಂದರು. ಜಾಗವನ್ನು ಅಳೆದರು. ಬ್ಯಾಂಕಿನ ಸಾಲಕ್ಕೆ ಎಕ್ಸ್‌ಪಾರ್ಟಿ ಡಿಕ್ರಿ ಆಗಿ ನಾಲ್ಕೆಕರೆ ತೋಟ ಏಲಂಗೆ ಬಂದಿತ್ತು. ಸೀರೀಪತಿ ಹತ್ತಾರ ಏಲಂನಲ್ಲಿ ನಿಂತು ತೋಟವನ್ನು ಕೊಂಡುಬಿಟ್ಟ. ದುಸ್ತೀನ್‌ಬಾಯಿಯ ಇದಿರು ನಿಂತು ಕೇಕರಿಸಿ ನಕ್ಕ. ಕೋರ್ಟಿನ ಅಮೀನರು ಜಾಗ ಏಲಂ ಮಾಡಿ, ಅಸಲು, ಬಡ್ಡಿ, ಕೋರ್ಟು ಖರ್ಚು

ಕಳೆದು ಉಳಿದ ಹತ್ತು ಸಾವಿರದ ಚೆಕ್ಕು ದುಸ್ತೀನ್‌ಬಾಯಿ ಕೈಗೆ ಹಾಕಿ ದುರ್ದಾನ ತೆಗೆದು ಕೊಂಡವರಂತೆ ಓಡಿದರು.

ಇಡೀ ಊರು, ದುಸ್ತೀನ್‌ಬಾಯಿಯ ತೋಟಕ್ಕೆ ಹೊಸ ಬೇಲಿ ಬೀಳುವುದನ್ನು ಮರುಕ ದಿಂದ ದಿಟ್ಟಿಸಿತು.

ಮತ್ತೆ ಬಂದ ಇಂತ್ರು.

ಈ ಬಾರಿ ಅನಿತಾ ಸಹ ಮಾತನಾಡಿಸಲಿಲ್ಲ. ''ಏಲಂ ಮಾಡಿ ಉಳಿದ ಹಣ ಎಲ್ಲಿ'' ಎಂದು ತಾಯಿಯನ್ನು ಅಬ್ಬರಿಸತೊಡಗಿದ.

ಯಾರೂ ಮಾತನಾಡಲಿಲ್ಲ.

ಕೈ ಎತ್ತಿ ಬಂದ ಇಂತ್ರುವಿನ ಇದಿರು, ದುಸ್ತೀನ್ ಬಾಯಿ ಸೀರೆಯ ಸೆರಗನ್ನು ಸೊಂಟಕ್ಕೆ ಸುತ್ತಿ ನಿಂತಳು. ಗಂಟಲು ನರ ಉಬ್ಬುಬ್ಬಿ ಬರುತ್ತಿತ್ತು. ಸತ್ತು ಹೋದ ಸ್ವರ ಮತ್ತೆ ಹುಟ್ಟಬೇಕು. ಮತ್ತೊಮ್ಮೆ ತಾನು ದೊಂಡೆ ದುಸ್ತೀನ್ ಆಗಬೇಕು. ಆದರೆ ಮಾತು ಹೊರಹೊಮ್ಮದು. ತನ್ನ ಬದುಕು ಮೂರಾಬಟ್ಟೆ ಯಾಗಿದೆ. ಉಳಿದುದನ್ನಾದರೂ ಮಗು ಅಂತೋಣಿಗೆ, ಸೊಸೆಗೆ ಉಳಿಸಿಕೊಳ್ಳಬೇಕು.

ಇಂತ್ರು ಸೀದಾ ಒಳನಡೆದ. ತಡೆಯಲು ಬಂದ ಅನಿತಾಳನ್ನು ಒದ್ದ. ಗೋಡೆಗೆ ಅಪ್ಪಳಿಸಿ ಬಿದ್ದಳು ಅನಿತಾ. ಮಗು ಅಂತೋಣಿ ಅರಚಿಕೊಂಡಿತು.

ಹೊರಗೆ ಬರುವಾಗ ಇಂತ್ರು ಕೈಯಲ್ಲಿ ಡಬ್ಬಲ್‌ಬ್ಯಾರೆಲ್ ಬಂದೂಕು. ತುಕ್ಕುಹಿಡಿದ ಅದರಲ್ಲೆಲ್ಲಿದೆ ಗುಂಡು?

ಇದಿರಿಸಲು ತಯಾರಾದ ದುಸ್ತೀನ್‌ಬಾಯಿ ಯತ್ತ ಇಂತ್ರು ಗನ್ ಎತ್ತಿದ. ಒಂದೇ ಕ್ಷಣ. ತಡೆಯಲು ಅಡ್ಡಬಂದ ಅನಿತಾಳ ತಲೆ ಮೇಲೆ ಎರಗಿತು ಬಂದೂಕು. ತಲೆಚಿಪ್ಪು ಒಡೆದು, ರಕ್ತ ಕೋಡಿ ಹರಿಯಿತು. ಕುಸಿದು ಬಿದ್ದಳು ಅನಿತಾ.

ಗನ್ ಬಿಸಾಡಿ ಓಡಿದ ಇಂತ್ರು.

ತಲೆಒಡೆದು ಬಿದ್ದ ಅನಿತಾ. ದೂರಕ್ಕೆ ಬಿದ್ದ ಕೋವಿ. ಗಗನ ಬಿರಿಯುವ ಮಗುವಿನ ಆಕ್ರಂದನ. ಮಂದಿ ಒಂದಾದರು. ಯಾರೋ ಪೊಲೀಸರಿಗೆ ಸುದ್ದಿ ಮುಟ್ಟಿಸಿದರು. ಸೈರನ್ ಮಾಡುತ್ತಾ ಪೊಲೀಸ್ ಜೀಪು ಬಂತು. ಪೊಲೀಸರು ಬಂದರು, ಸರಕಾರಿ ಡಾಕ್ಟರರು ಬಂದರು. ಹೆಣ ಪೋಸ್ಟ್‌ಮಾರ್ಟಂಗಾಗಿ ತೆರಳಿತು.

ಸಂಜೆ ಬಂತು. ಕುಂದಾಪುರದಿಂದ ಶವ ಪೆಟ್ಟಿಗೆ ಬಂತು. ವಲ್ಲೀ ನಾಯಕರು ಬಂದರು.

ಮರುದಿನ ಅರಾಲಿನಲ್ಲಿ ಶವಯಾತ್ರೆ ಜರ ಗಿತು. ಮೌನ ಮೆರವಣಿಗೆ.

ಏಕೈಕ ಆಸ್ತಿಯಾದ ಒಂಟಿ ಮನೆಯ ಮುಂದೆ ನಿಂತಿದ್ದಳು, ದುಸ್ತೀನ್‌ಬಾಯಿ. ಸೊಂಟದಲ್ಲಿ ಗರಬಡಿದು ಕುಳಿತ ಮಗು ಅಂತೋಣಿ.

ಸಾಗರ ಇನ್ನಿಲ್ಲದಂತೆ ಏರಿಳಿಯುತ್ತಿದೆ.

ದುಸ್ತೀನ್ ಬಾಯಿಯ ಕಣ್ಣಂಚಿನಲ್ಲಿ ಹನಿಯೂ ಇಲ್ಲ.

ದಿನಗಳು ಜಾರಿದುವು. ಇಂತ್ರೂ ಪತ್ತೆ ಇಲ್ಲ.



ತಿಂಗಳುಗಳು ಉರುಳಿದುವು. ಪೊಲೀಸರು ಬರುತ್ತಿದ್ದರು. ಯದ್ವಾತದ್ವಾ ಪ್ರಶ್ನೆ ಕೇಳುತ್ತಿದ್ದರು. ಒಂದಕ್ಕೂ ದುಸ್ತೀನಳಲ್ಲಿ ಉತ್ತರವಿಲ್ಲ.



ದಿನ ಜಾರುತ್ತಿತ್ತು.

ಅದೊಂದು ದಿನ, ಮನೆ ಮುಂದೆ ಲಾರಿ ಬಂದು ನಿಂತಿತು. ಹತ್ತಾರು ಮಂದಿ ಕೂಲಿಗಳು ದಡಬಡನೆ ಇಳಿದು ಬಂದರು. ಹೌಹಾರಿ ನಿಂತಳು ದುಸ್ತೀನ್. ಮತ್ತೆ ಅರಾಲಿನ ಮಂದಿ ಗುಂಪುಗೂಡಿ ಬಂದರು.

ಮಗು ಸಹಿತ, ದುಸ್ತೀನ್‌ಳನ್ನು ಮನೆಯಿಂದ ಹೊರಗೆ ಎಳೆದು ಹಾಕಿದರು ಕೂಲಿಮಂದಿ. ಮನೆಯ ಪಾತ್ರ-ಪಗಡಿ, ಮಡಿಕೆ-ಕುಡಿಕೆ, ಮುರುಕಲು ಕುರ್ಚಿ, ಪೆಟ್ಟಿಗೆ ಹೊರಗೆಸೆದರು.

ದುಸ್ತೀನಳ ಸ್ವಂತ ಇಚ್ಛೆಯಿಂದ ಮನೆಯ ಮರಮಟ್ಟು, ಹೆಂಚು, ಪಕ್ಕಾಸಿ, ಇಟ್ಟಿಗೆ, ಮುರಕಲ್ಲು, ಪಂಚಾಂಗ ಸಹಿತ ವಿಕ್ರಯಿಸಿದ ಬಗ್ಗೆ, ಅದಕ್ಕೆ ದುಸ್ತೀನ್‌ಬಾಯಿಯ ಎಡ ಹೆಬ್ಬೆಟ್ಟಿನ ರುಜುವಿನ ಪತ್ರವನ್ನು, ಕೊಂಡವರು ತಂದು ತೋರಿಸಿದ್ದರು!

ಸಂಜೆಯಾಗುತ್ತಿರುವಂತೆ ಹಂಚು ಇಳಿಯಿತು. ಜಂತಿ ಜಾರಿತು. ಗೋಡೆ ಕೆಡವಿತು. ಒಂದೊಂದೇ ಕಲ್ಲು, ಇಟ್ಟಿಗೆ, ಜಂತಿ, ಪಕ್ಕಾಸಿ ಲಾರಿ ಏರಿದುವು. ಪಂಚಾಂಗ ಅಲುಗಾಡಿತು. ಕೆಲವೇ ಕ್ಷಣದಲ್ಲಿ ಮನೆಯಿದ್ದ ಕುರುಹೂ ಇಲ್ಲದಂತೆ ಬೋಳು ನೆಲ. ಬಾನ ಕೆಳಗೆ ಬಟ್ಟ ಬಯಲು.

ಆಗಲೂ ದುಸ್ತೀನ್‌ಬಾಯಿಯ ಕಣ್ಣಂಚಿನಿಂದ ಹನಿ ಜಾರಲಿಲ್ಲ.

ಇಡೀ ಊರು ಒಂದಾಗಿಬಿಟ್ಟಿತ್ತು. ಆದರೆ ತಡೆಯುವ ಶಕ್ತಿ, ಧೈರ್ಯ ಯಾರಿಗೂ ಇದ್ದಿರಲಿಲ್ಲ. ಸೂರ್ಯ ಸದ್ದಿಲ್ಲದಂತೆ ಪಡುಗಡಲಲ್ಲಿ ಜಾರಿಕೊಂಡ. ಮಗು ಅಂತೋಣಿ ದಿಗ್ಭ್ರಮೆಯಿಂದ ನಿಂತು ನೋಡುತ್ತಿತ್ತು.

ಮಂದಿ ಒಬ್ಬೊಬ್ಬರಾಗಿ ಜಾರಿಕೊಂಡರು.

ಚಂದ್ರನ ಬೆಳಕು ಕಳ್ಳತನದಿಂದ ಲಗ್ಗೆ ಇಟ್ಟಿತು.

ಬೆಳಕು ಮೂಡಿತು.

ಅಲ್ಲಲ್ಲಿ ಬಿದ್ದ ಮಡಿಕೆ, ಕುಡಿಕೆ, ದೂರಬಿದ್ದ ಪೆಟ್ಟಿಗೆಯಲ್ಲಿ ಉಳಿದಿದ್ದ ಹತ್ತು ಸಾವಿರ ಕಣ್ಣಿಗೆ ಬಿತ್ತು.

ದುಸ್ತೀನ್‌ಬಾಯಿ, ಊರಿಡೀ ಅಲೆದು ನಾಲ್ಕಾರು ಹೊರೆ ಮಡಲು ತಂದಳು. ತಾನೇ ಸ್ವತಃ ಗುಣಿ ತೋಡಿ, ಬಿದಿರು ನಿಲ್ಲಿಸಿ, ಮಡಲು ಏರಿಸಿದಳು. ಮಧ್ಯಾಹ್ನ ಬಿಸಿಲು ಏರುವುದರ ಒಳಗೆ ತಲೆಗೊಂದು ಸೂರು ಸಿದ್ಧವಾಯ್ತು.

ಮೂರುಕಲ್ಲುಗಳನ್ನು ಆರಿಸಿ ತಂದು, ಗಂಜಿಗೆ ಇಟ್ಟಳು. ಆಗ ದುಸ್ತೀನ್‌ಬಾಯಿಯ ಕಣ್ಣು ಹನಿಗುಟ್ಟಿತು.

ಮಗು ಅಂತೋಣಿ, ''ಅಜ್ಜಿ ಅಜ್ಜಿ ಅಲಬೇಡ ಅಜ್ಜಿ. ನಂಗೆ ಗಂಜಿ ಬೇಡ ಅಜ್ಜಿ. ಹಸಿವು ಇಲ್ಲ ಅಜ್ಜಿ'' ಎಂದು ದುಸ್ತೀನ್‌ಬಾಯಿಯ ಕೆನ್ನೆ ಸವರಿತು.

ಅದುಮಿಟ್ಟ ಕಡಲು ಉಕ್ಕೇರಿತು. ಇನ್ನಿಲ್ಲದಂತೆ ಅತ್ತಳು ದುಸ್ತೀನ್‌ಬಾಯಿ. ಅಂತೋಣಿಯೂ ಅಳತೊಡಗಿದ.

ಕಂಬನಿ ಒರೆಸುವ ಕೈಯೇ ಇಲ್ಲ.

ದಿನಗಳು ಜಾರುತ್ತಿದ್ದುವು.

ಅರಾಲಿನ ಮಂದಿ ಬರುತ್ತಿದ್ದರು. ಸಾಂತ್ವನ ಹೇಳುತ್ತಿದ್ದರು. ಮೊಮ್ಮಗುವಿಗಾಗಿ ನೀನು ಬದುಕಬೇಕು ಅನ್ನುತ್ತಿದ್ದರು.

ಆಗೆಲ್ಲಾ ನಕ್ಕುಬಿಡುತ್ತಿದ್ದಳು ದುಸ್ತೀನ್‌ಬಾಯಿ.

ಆರ್ಬೆಟ್ಟು ರಾಮಣ್ಣ ಒಂದು ಸಂಜೆ ಬಂದ. ತಡವರಿಸಿ, ತಡವರಿಸಿ ಹೇಳಿದ, ''ಇದೆಲ್ಲಾ ನೆತ್ತರ ಹಾಯ್ಗುಳಿಯ ಕಿತಾಪತಿ ಬಾಯಮ್ಮ. ಇಂತ್ರು ಹುಟ್ಟಿದರೆ ನೀನು ಕೋಲ ಕೊಡ್ತೇನೆ ಅಂದಿದ್ದಿ. ನಿಮ್ಮ ಧರ್ಮ ಬೇರೆ ಹೌದು. ಆದರೇ ದೇವ್ರು ಎಲ್ರಿಗೂ ಒಂದೇ ಅಲ್ವಾ. ನಂಬಿದವ್ರನ್ನ ನೆತ್ತರ ಹಾಯ್ಗುಳಿ ಕೈಬಿಡೋದಿಲ್ಲ. ನೀನು ನಂಬಿದೆ. ಅವನು ಕೊಟ್ಟ. ಆದರೆ ನೀನು ಕೊಟ್ಟ ಮಾತು ಉಳ್ಸಿಕೊಳ್ಳಲಿಲ್ಲ. ನೆತ್ತರ ಹಾಯ್ಗುಳಿ ಮುನಿದರೆ ಮನೆಮಾರು ಹುಡಿಹಾರಿ ಹೋಗುತ್ತೆ. ಸಾಕ್ಷಿ ನೀನೇ ಕಂಡ್ಯಲ್ಲ. ಈಗ್ಲೂ ಕಾಲ ಮಿಂಚಿಲ್ಲ



ಬಾಯಮ್ಮ. ನಿನ್ನ ವಂಶದ ಕುಡಿ ಇದೆ. ಅದು ಬದುಕಬೇಕು. ಕೋಲ ಕೊಟ್ಟುಬಿಡು. ನಾಲ್ಕೈದು ಸಾವ್ರದೊಳ್ಗೆ ನಾನು ಮುಗ್ಸಿಕೊಡ್ತೇನೆ''

''ಆಗ್ಲಿ ದಿನ ನಿಶ್ಚಯ ಮಾಡಿ'', ದುಸ್ತೀನ್ ಬಾಯಿ ಹೇಳಿದಾಗ ಆರ್ಬೆಟ್ಟು ರಾಮಣ್ಣ ನಂಬದೇ ಕಣ್ಣು ಕಣ್ಣು ಬಿಟ್ಟ.

ಕೋಲದ ದಿನ ನಿಶ್ಚಯ ಆಯ್ತು.

ಕೋಲದ ದಿನವೂ ಬಂತು. ಎಲ್ಲೆಲ್ಲೂ ಸಡಗರ. ಅರಾಲಿನ ತುಂಬೆಲ್ಲಾ ತರಾತುರಿ.

ನಲ್ಕೆಯವರು ಬಂದರು. ಪಾಡ್ದನದವರು ಬಂದರು. ಭೂತ ಕಟ್ಟುವವರು ಬಂದರು. ಕುರಿ ಕೋಳಿ ಸಿದ್ಧವಾಯ್ತು.

ಸೂರ್ಯ ಮುಳುಗಿದ.



ಕೋಲ ಪ್ರಾರಂಭವಾಯ್ತು.

ದುಡಿಯ ಧ್ವನಿ. ಡೋಲು, ಕಟ್ಟುವಾದ್ಯಗಳ ನಿನಾದ.

ತಾರಕ ಧ್ವನಿಯ ಕೇಕು-ಕುಣಿತ. ದರ್ಶನದ ಅಬ್ಬರ. ಗಗ್ಗರದ ಧ್ವನಿ. ಜನರ ಕೇಕೆ.

ಸಾಗರದಂಚಿನಲ್ಲಿ ಜನಸಾಗರ.

ಕೇದಕೆ ಬನದಲ್ಲಿ ಬಣ್ಣದ ಓಕುಳಿ.

ದೂರದ ಗುಡಿಸಲಲ್ಲಿ ನಿಂತು ನೋಡುತ್ತಿದ್ದಾಳೆ ದುಸ್ತೀನ್. ಬಗಲಲ್ಲಿ ಅಂತೋಣಿ.

ಕಡಲಂಚಿನ ಅರಾಲಿನಿಂದ ಯಾರೋ ಬರುತ್ತಿರುವಂತೆ ಭಾಸ. ಮಸಕು ಬೆಳಕಿನಲ್ಲಿ ದಾಪುಗಾಲು. ಕಳ್ಳಹೆಜ್ಜೆ. ನಡೆ ಪರಿಚಿತ.

ಅದು ಇಂತ್ರು!

ಫಕ್ಕನೆ ಗುರುತಿಸಿಬಿಟ್ಟಳು ದುಸ್ತೀನ್ ಬಾಯಿ.

''ಅಮ್ಮ, ಪೊಲೀಸರು ಬೆನ್ನು ಬಿದ್ದಿದ್ದಾರೆ. ತಪ್ಪಿಸಿಕೊಳ್ಳಬೇಕು. ಮದ್ರಾಸಿಗೆ ಹೋಗ್ತೇನೆ. ಹಣ ಕೊಡು. ಹತ್ತು ಸಾವಿರ ಉಳಿದಿರಬೇಕಲ್ಲ? ಭೂತದ ಕೋಲ ಮಾಡಿಸಲು ನಿನಗೆ ಹಣ ಇದೆ. ಕೊಡು ಬೇಗ. ಹಾಳಾಗಿ ಹೋಗ್ತೇನೆ'', ಇಂತ್ರು ಆತುರ ವ್ಯಕ್ತಪಡಿಸಿದ.

ಮಗುವನ್ನು ಗುಡಿಸಲಲ್ಲಿ ಕುಳ್ಳಿರಿಸಿಬಂದ

ದುಸ್ತೀನ್‌ಬಾಯಿ, ಸೊಂಟಕ್ಕೆ ಸೆರಗು ಸುತ್ತಿಕೊಂಡಳು.

ಮನೆ, ಹಕ್ಕಲು, ಅನಿತಾ, ಕೋವಿ ಧಿಮಿ ಧಿಮಿ ತಿರುಗಿದಂತಾಯ್ತು.

ದುಡಿಯ ನಾದ ಮುಗಿಲು ಮುಟ್ಟುತ್ತಿದೆ.

ಕೋವಿ ಅಂತೋಣಿ ಹೇಳ್ತಿದ್ದ, ''ತೋರ್‍ಸು, ನಿನ್ನ ನೆತ್ತರ ಹಾಯ್ಗುಳಿಯನ್ನು, ಒಂದೇ ಈಡಿಗೆ ಥಂ ಅನ್ನಿಸಿಬಿಡ್ತೇನೆ''

ಭೂತದ ಕೇಕೆ ಮುಗಿಲು ಮುಟ್ಟುತ್ತಿದೆ.

ದುಡಿಯ ಅಬ್ಬರ, ಕಟ್ಟು ವಾದ್ಯ ತಾರಕಕ್ಕೇರಿದೆ.

ಒಂದೇ ಕ್ಷಣ.

ನರಪೇತಲ ಇಂತ್ರು, ನೆಲಕ್ಕೆ ಒರಗಿದ್ದ. ದುಸ್ತೀನ್‌ಬಾಯಿಯ ಎರಡೂ ಕೈಗಳ ನಡುವೆ ಅವನ ಕುತ್ತಿಗೆ ಲಟಲಟವೆಂದು ಮುರಿಯಿತು. ವಿಲವಿಲನೆ ಒದ್ದಾಡುವ ಕೈಕಾಲುಗಳು.

ದುಡಿಯ ಅಬ್ಬರ ತಾರಕಕ್ಕೇರಿತು...

ಭೂತದ ಕೇಕೆ ಮುಗಿಲು ಮುಟ್ಟುತ್ತಿದೆ...

ನಾಲಿಗೆ ಕಚ್ಚಿ ಕಡಿದುಕೊಂಡ ಇಂತ್ರುವಿನ ಕಡೆ ಬಾಯಲ್ಲಿ ನೆತ್ತರು ಹರಿಯತೊಡಗಿತು.

ತಟಪಟನೆ ಬಡಿದುಕೊಂಡ ಕೈಕಾಲು ತಟಸ್ಥವಾಯ್ತು. ಕಣ್ಣುಗುಡ್ಡೆ ಮೇಲೆ ಸೇರಿತು.

ನಿಡಿದಾಗಿ ಉಸಿರು ಎಳೆದುಕೊಂಡ ದುಸ್ತೀನ್ ಬಾಯಿ ಕೈಗಳು ಸಡಲುವಾಗ ಹೊರ ಬಂದ ಮಗುವಿನ ಸ್ವರ ಕೇಳಿಸಿತು.

''ಯಾರಜ್ಜಿ ಅದು?''

ಏರಿದ ಕಂಠ. ಉರಿಯುವ ಕಣ್ಣುಗಳು. ದುಸ್ತೀನ್‌ಬಾಯಿ ಕೂಗಿಕೊಂಡಳು,

''ಅದು ಭೂತ. ನೆತ್ತರ ಹಾಯ್ಗುಳಿ... ಸತ್ತು ಹೋಯ್ತು. ಸತ್ತೇ ಹೋಯ್ತು... ಶಾಶ್ವತವಾಗಿ ಸತ್ತು ಹೋಯ್ತು... ಬಲಿ ತಗೊಂಡ್ತು ಭೂತ...''

ದುಡಿಯ ಅಬ್ಬರ ಇಳಿದಿತ್ತು.

ದುಸ್ತೀನ್‌ಬಾಯಿಯ ದೊಂಡೆಗೆ ಜನಸಾಗರ ಸೇರತೊಡಗಿತು...





ದುಸ್ತೀನ್‌ಬಾಯಿಯ ಬಾಯಿ ಬೊಂಬಾಯಿಯಾಗ-ತೊಡಗಿದ್ದು ಹೀಗೆ. ತನ್ನ ಸುತ್ತ ಭದ್ರವಾದ ಒಂದು ಕೋಟೆ ಬೇಕು ಎಂದಾಗ, ಆಕೆ ಮೊರೆಹೋದದ್ದು ತನ್ನ ಬಾಯಿಯ ಮೇಲೆ.



# ಅನುಪಮಾ ನಿರಂಜನ

"ಲೇಖಕಿಯ ಬರವಣಿಗೆಗೆ ಮೂಲಾಧಾರವಾಗಿರುವ ಸ್ತ್ರೀಪ್ರಜ್ಞೆಯ ಹರಹು ದೊಡ್ಡದು. ತಾನು ಸ್ತ್ರೀಯೆಂದು ಗುರುತಿಸಿಕೊಳ್ಳುವುದರ ಜೊತೆಗೆ, ಸಮಾಜದಲ್ಲಿ ಆಕೆಗಿರಬಹುದಾದ ಶೋಷಣೆಯ, ತಾರತಮ್ಯದ ನೆಲೆಗಳನ್ನು ಗುರುತಿಸುವುದು ಮೊದಲ ಕಾರ್ಯ. ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಆಕೆಯ ಸಮಾನತೆಗಾಗಿ ಹೋರಾಟ ಕಟ್ಟುವುದು ಎರಡನೆಯ ಹೆಜ್ಜೆ. ಮಾನಸಿಕವಾಗಿ ಇಂಥ ಬಂಡಾಯಕ್ಕೆ ಸಿದ್ಧವಾಗುವುದರ ಜೊತೆಗೆ, ಸ್ತ್ರೀಪರ ಚಳವಳಿಗಳೊಂದಿಗೆ ನಿಕಟ ಸಂಪರ್ಕವಿಟ್ಟುಕೊಳ್ಳುವುದು ಮತ್ತು ಸ್ತ್ರೀಯ ಸ್ಥಾನಮಾನ ಏರಿಕೆಗೆ ಶ್ರಮಿಸುವುದು ಮೂರನೆಯ ಮಜಲು" ಅನುಪಮಾ ನಿರಂಜನ ಅವರ 'ಬರಹಗಾರ್ತಿಯ ಬದುಕು' ಆತ್ಮಕಥಾನಕದ ಈ ಸಾಲುಗಳು, ಪ್ರಥಮ ಓದಿಗೇ, ನನ್ನ ಗಮನವನ್ನು ಹಿಡಿದಿರಿಸಿ, ಹಲವು ದಿನಗಳವರೆಗೂ ಈ ಕುರಿತು ಚಿಂತಿಸುವಂತೆ ಮಾಡಿದವು.

ನನಗೂ, ಇಲ್ಲಿಯ, ಸಾಹಿತ್ಯದಲ್ಲಿ ಆಸಕ್ತಿಯಿದ್ದೂ ಅದರಲ್ಲಿ ಗಂಭೀರವಾಗಿ ತೊಡಗಿಕೊಳ್ಳಲಾಗದಿರುವ ನನ್ನ ಕೆಲವು ಗೆಳತಿಯರನ್ನು ಒಟ್ಟುಗೂಡಿಸಿ, ಸಾಹಿತ್ಯಿಕ ಚರ್ಚೆಗಾಗಿ ವೇದಿಕೆಯೊಂದನ್ನು ರಚಿಸಿಕೊಳ್ಳುವ ಅವಶ್ಯಕತೆ ಮನಗಂಡಿತು. ಆದ್ದರಿಂದಲೇ, ಅನುಪಮಾ ಅವರ 'ಬರಹಗಾರ್ತಿಯ ಬದುಕು' ಪುಸ್ತಕವನ್ನು ನನ್ನ ಗೆಳತಿಯರಿಗೂ ಓದಲು ಕೊಟ್ಟೆ. ಅವರೆಲ್ಲರ ಸಮ್ಮತಿಯಿಂದ, ಮೂರು ವರ್ಷಗಳ ಹಿಂದೆ, 'ಗೆಳತಿಯ ಬಳಗ'ದ ಹೆಸರಿನಲ್ಲೇ, ನಮ್ಮದೇ ಒಂದು ಪ್ರತ್ಯೇಕ ಸಾಹಿತ್ಯ ವೇದಿಕೆಯನ್ನು ಕಟ್ಟಿಕೊಂಡೆವು. ಈಗ ಅದೇ ವೇದಿಕೆ, ಕಳೆದ ಒಂದೂವರೆ ವರ್ಷಗಳಿಂದ 'ಹಾಸನ ಜಿಲ್ಲಾ ಲೇಖಕಿಯರ ಪರಿಷತ್' ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತಿದೆ. ಪರಸ್ಪರ ಪ್ರೋತ್ಸಾಹ, ನಮ್ಮ ಬರಹಗಳ ಗುಣಮಟ್ಟ ವೃದ್ಧಿ, ಉತ್ತಮ ಬರಹಗಳ ಅಧ್ಯಯನದಂಥಾ ಹಲವಾರು ಉದ್ದೇಶಗಳನ್ನಿಟ್ಟುಕೊಂಡು ಮುನ್ನಡೆದಿದ್ದೇವೆ.

ಈ ಅಲ್ಪ ಅವಧಿಯಲ್ಲಿ ಹೆಚ್ಚಿನದನ್ನು ಸಾಧಿಸಿದ್ದೇವೆಂದು ಹೇಳಲಾಗದಿದ್ದರೂ, ವೇದಿಕೆ, ನಮ್ಮಲ್ಲಿನ ಕೀಳರಿಮೆಯನ್ನು ತೊಡೆದು ಹಾಕಿ, ಆತ್ಮವಿಶ್ವಾಸವನ್ನು ಮೂಡಿಸಿರುವುದಂತೂ ಸತ್ಯ. ಟ್ರಂಕಿನಡಿಗಳಲ್ಲಿ ಹೂತುಹೋಗಿದ್ದ, ಕೆಲವೇ ದಿನಗಳಲ್ಲಿ ಹುಡಿಯಾಗಬಹುದಾಗಿದ್ದ ನಮ್ಮಲ್ಲನೇಕರ ಬರಹಗಳು ರಾಜ್ಯಮಟ್ಟದ ಪತ್ರಿಕೆಗಳಲ್ಲಿ ಬೆಳಕು ಕಾಣಲಾರಂಭಿಸಿವೆ. ಸಾಹಿತ್ಯಿಕ ಸ್ಪರ್ಧೆಗಳಲ್ಲಿ ಬಹುಮಾನ ಗಿಟ್ಟಿಸಲಾರಂಭಿಸಿವೆ. ಆಕಾಶವಾಣಿಯಿಂದ ಪ್ರಸಾರವಾಗಲಾರಂಭಿಸಿವೆ. ಇವೆಲ್ಲಾ ಸಾಧ್ಯವಾಗಿದ್ದು ನಮ್ಮ ಸಾಹಿತ್ಯ ವೇದಿಕೆಯಿಂದ! ಇದಕ್ಕೆ ಸ್ಫೂರ್ತಿ 'ಬರಹಗಾರ್ತಿಯ ಬದುಕು' ಎಂಬ ವಿಶಿಷ್ಟ ಪುಸ್ತಕವನ್ನು ಬರೆದ ಅನುಪಮಾ ನಿರಂಜನ ಅವರು! ಅವರು ಪ್ರತ್ಯಕ್ಷವಾಗಿ ಈಗ ನಮ್ಮೊಂದಿಗೆ ಇಲ್ಲದಿದ್ದರೂ, ನಮ್ಮೆಲ್ಲರ ಸಾಧನೆಗಳ ಹಿಂದೆ ಅವರ ಹಾರೈಕೆ ಇದೆಯೆಂಬುದು ನಮ್ಮೆಲ್ಲರ ನಂಬಿಕೆ.



☐ ರೂಪ ಹಾಸನ

# 'ಗಾನ್ ವಿತ್ ದಿ ವಿಂಡ್'ನ ಸ್ಕಾರ್ಲೆಟ್ ಒಹಾರಾ

ಸ್ಕಾರ್ಲೆಟ್ ಒಹಾರಾ! ಮಾರ್ಗರೆಟ್ ಮಿಶಿಲ್‌ಳ ಜಗದ್ವಿಖ್ಯಾತ ಕೃತಿ 'ಗಾನ್ ವಿತ್ ದಿ ವಿಂಡ್'ನ ಕಥಾನಾಯಕಿ.

ಅಮೆರಿಕಾದ ದಕ್ಷಿಣ ನಾಡ ಕೌಂಟಿಯಲ್ಲಿ, ಹತ್ತಿಯ ಹೊನ್ನಬೆಳೆ ಬೆಳೆವ, ಐರಿಶ್ ಮೂಲದ ತಂದೆ ಜೆರಾಲ್ಡ್ ಒಹಾರಾನ ಭೂಮಿಪ್ರೇಮವನ್ನು, ಹದಿಹರೆಯದ ಹುಚ್ಚಿನಲ್ಲಿ ಅರಿಯದೆ ಹೋದ ಮುದ್ದಿನ ಮಗಳು, ಸ್ಕಾರ್ಲೆಟ್. ಸಾಹಿತ್ಯ, ಕನಸುಗಳಲ್ಲೇ ಕಳೆದುಹೋಗುವ ಆಶ್‌ಲಿವಿಲ್ಕ್ಸ್‌ನನ್ನು ಪ್ರೇಮಿಸುತ್ತಿರುವ ಭ್ರಮೆಯಲ್ಲಿ, ಆತ ತನ್ನವನಾಗದ ವ್ಯಗ್ರತೆಯಲ್ಲಿ, ಚಾರ್ಲ್ಸ್‌ನ ಪತ್ನಿಯಾಗುವ ಕ್ಷಣ ನಿರ್ಧಾರದಿಂದ, ಹದಿನಾರರ ವಯಸ್ಸಿಗೇ ಪತ್ನಿಯೂ, ವಿಧವೆಯೂ, ತಾಯಿಯೂ ಆದ ಮನಸ್ವಿನಿ.

ಮೃದು ನಡೆನುಡಿಯ, ಶಿಸ್ತಿನ, ಸೇವಾಮನೋಭಾವದ ತಾಯಿ ಎಲೆನ್‌ಳಂತೇ ಆಗುವ ಆಶೆಯಿದ್ದರೂ, ಹಾಗಿರಲು ಬಹಳಷ್ಟನ್ನು ಕಳೆದುಕೊಳ್ಳಬೇಕಾಗುವುದೆಂಬ ತಿಳಿವಿನಿಂದ, ಮುಂದೆಂದಾದರೂ, ಆಶ್‌ಲಿ ತನ್ನವನಾಗಿ, ಪ್ರಾಯ ಸಂದಾಗ ತಾಯಂತಾಗುವ ಇಚ್ಛೆ ಇರಿಸಿಕೊಳ್ಳುತ್ತಾಳೆ.'ಅಸಭ್ಯ'ನೆಂಬ ಆರೋಪದ ರ್ಹೆಟ್ ಬಟ್ಲರ್‌ನೊಡನೆ ನಡೆವ, ಪ್ರತೀ ಆಕರ್ಷಕ ಸಲ್ಲಾಪದ ಭೇಟಿಯೂ, ಸಿಟ್ಟು, ಅಸಮಾಧಾನದಲ್ಲಿ ಕೊನೆಗೊಂಡಂತೇ, ಆತನನ್ನು ಹೆಚ್ಚು ಹೆಚ್ಚು ದ್ವೇಷಿಸಿ, ಆಶ್‌ಲಿಯನ್ನು ಇನ್ನೂ ಹೆಚ್ಚಾಗಿ ಬಯಸುವ ಚಿಂಗಾರಿ! ರಂಗಿನ ಕಾಣಿಕೆಗಳನ್ನಿತ್ತು, ಶೋಕವಸ್ತ್ರಗಳಿಂದ ಮುಕ್ತಿ ದೊರಕಿಸಿ, ಸಂಘಟನೆಯ ಶಿಬಿರಗಳಲ್ಲಿ 'ಧ್ಯೇಯಕ್ಕಾಗಿ' ನರ್ತಿಸುವ ಅವಕಾಶ ನೀಡಿದ ಆ ಧೂರ್ತ, ಬದಲಿಗೇನು ಕೇಳುವನೋ ಎಂಬ ನಿರೀಕ್ಷೆಯ ಹುಳ್ಳನೆ ಮನದ ಚಂಚಲೆ!

ಯುದ್ಧದ ಕಾವಿಗೆ ತತ್ತರಿಸಿ, ಪಲಾಯನ ಬಯಸಿದಾಗ, ಆಪದ್ಬಾಂಧವನಂತೆ ಬಂದ ರ್ಹೆಟ್, ಉರಿವ ನಗರದ ಹೊರಗೆ ತ್ಯಜಿಸಿ ಹೋದಾಗ, ತನ್ನ ಸಂತ್ರಸ್ತ ಪರಿವಾರದೊಡನೆ ಸ್ಕಾರ್ಲೆಟ್, ತನ್ನ ತಂದೆಯ ಮನೆ ಸೇರುವ ಸಾಹಸದ ಬವಣೆ; ಹಸಿವು ತಾಳದೆ, ಹಿಡಿಮಣ್ಣನ್ನೆತ್ತಿ, ಇನ್ನೆಂದೂ ಹಸಿದಿರಲಾರೆನೆಂದು ಶಪಥಗೈದು, ಐರಿಶ್ ರಕ್ತ ಹೌದೆನ್ನುವಂತೆ ಮಣ್ಣಿನ ಮಗಳಾಗಿ ಬೆಳೆದ ಸಾಧನೆಯ ಅಮರಗಾಥೆ ಈ ಕೃತಿ. ಮನೆ 'ಟ್ಯಾರಾ'ವನ್ನುಳಿಸಲು, ಹಣಕ್ಕಾಗಿ, ರ್ಹೆಟ್‌ನಿಗೆ ತನ್ನನ್ನೇ ಅಡವಿರಿಸಿಕೊಳ್ಳಲು ಸಿದ್ಧವಾದವಳು, ಅದೇ ಹಣಕ್ಕಾಗಿ ಫ್ರಾಂಕ್‌ನನ್ನು ವರಿಸಿ, ಅವನು ಸತ್ತ ನಂತರ, ಗಂಡಂದಿರ ಸರತಿಯಲ್ಲಿನ್ನು ಕಾದಿರಲಾರೆನೆಂದು ಬಂದ ರ್ಹೆಟ್‌ನನ್ನು ಪತಿಯಾಗಿ ಸ್ವೀಕರಿಸಿದರೂ, ಸುಖದ ಸುಪ್ಪತ್ತಿಗೆಯಲ್ಲಿ ಹೊರಳಿದರೂ, ಆಶ್‌ಲಿಯನ್ನು ಬಯಸುವುದನ್ನು ಬಿಡದ ಮೂಢಮತಿ!

ತನ್ನ ಮಹತ್ವಾಕಾಂಕ್ಷೆ, ಬಿಂಕ, ಬಿರುನುಡಿ, ಸ್ವಾರ್ಥದಿಂದ ಸರ್ವರಿಗೂ ಅಪ್ರಿಯಳೇ ಆದರೂ, ತಾನು ಪ್ರೀತಿಸದ - ಕರುಣೆ, ಸೌಜನ್ಯದ ದೇವತಾಮೂರ್ತಿಯಾದ - ಮೆಲನಿ ತೋರಿದ ಪ್ರೀತಿಯನ್ನೇ ತನ್ನ ಪಾಲಿನ ಶಿಲುಬೆಯಾಗಿ ಹೊರಬೇಕಾಗಿ ಬಂದವಳು, ಸ್ಕಾರ್ಲೆಟ್. ಆಶ್‌ಲಿಯನ್ನರಿತಿದ್ದರೆ ಆತನನ್ನು ಪ್ರೀತಿಸುತ್ತಿರಲಿಲ್ಲ; ರ್ಹೆಟ್‌ನನ್ನರಿತಿದ್ದರೆ ಆತನನ್ನು ಕಳಕೊಳ್ಳುತ್ತಿರಲಿಲ್ಲ' ಎಂಬ ಸತ್ಯ ಗೋಚರವಾದಾಗ, ತೀವ್ರ ಹತಾಶೆಯೊಂದೇ ಉಳಿದ ನತದೃಷ್ಟೆ! ಆದರೂ, ರಕ್ತಗತವಾಗಿ ಬಂದ, ಸೋಲರಿಯದ ವಿಶ್ವಾಸದೊಂದಿಗೆ, 'ನಾಳೆಯು ಬೇರೊಂದೇ ದಿನ' ಎಂಬ ತನ್ನ ಧ್ಯೇಯವಾಕ್ಯವನ್ನು ಪಠಿಸುವ ಸ್ಕಾರ್ಲೆಟ್, ವಿಶ್ವಸಾಹಿತ್ಯದಲ್ಲೇ ಚಿರಸ್ಥಾಯಿಯಾದ ಸ್ಫೂರ್ತಿ ಚಿತ್ರ!

□ **ಶ್ಯಾಮಲಾ ಮಾಧವ**



**ಕವಿ ಸಮಯ**



ಕಮಲಾಕರ ಕಡವೆ

# ರಾತ್ರಿ ಹೊತ್ತು ಹಂಸಗಳ ನೆನಪು

ಯಾಕೆ ರಾತ್ರಿಯ ಹೊತ್ತು ಹಂಸಗಳ ನೆನಪು?

ಕಾಗೆಯೋ, ಗೂಬೆಯೋ, ಜೀರು ಕೀಟವೋ ಆಗದೇ
ಹಂಸಗಳ ದಟ್ಟ ನೆನಪೇಕೆ ರಾತ್ರಿ ಹೊತ್ತು?

ಇಲಿಯ ಹಾವಳಿ ಬಹಳ ರಾತ್ರಿ ಹೊತ್ತು
ಕಳ್ಳಕಾಕರ ಭಯ ರಾತ್ರಿ ಹೊತ್ತು
ಥರ ಥರನ ನೆರಳುಗಳು ರಾತ್ರಿ ಹೊತ್ತು; ಆದರೆ
ಹಂಸಗಳ ಬೆಳ್ಳನೆಯ ನೆನಪು ಯಾಕೆ?

ಹಾಲುಗಲ್ಲದ ಹಸುಳೆ ತೊಟ್ಟಿಲಲ್ಲಿ
ಬಿಡದ ಅಳುವಿನ ನಡುವೆ ಕಳ್ನಗೆ ನಕ್ಕಂತೆ
ಅನಿವಾರ್ಯ ಬಯಲಲ್ಲಿ ಊಳಿಡುವ ನರಿಗಳು
ಕಳಕೊಂಡ ಜಾಣತನದಂತೆ, ರಾತ್ರಿ ಹೊತ್ತು
ಬಿಟ್ಟು ಬಿಟ್ಟು ಬರುವ ಬಿಕ್ಕಳಿಕೆಯಂತಲ್ಲದೇ,
ಸಣ್ಣ ಕಿಟಕಿಯ ರೂಮ ಸೆಖೆಯಲ್ಲಿ ಸರ್ರನೇ ಸುಳಿದು
ಹೋದ ತಂಪುಗಾಳಿಯಂತೆ, ಮರುಕ್ಷಣದ ಬೆವರಂತೆ
ಬಂದೆ ಬರುವುದು ಹೇಗೆ ಹಂಸಗಳ ನೆನಪು?

ಹೂವುಗಳು ಬಣ್ಣಗಳ ಹೊತ್ತು ಹಾರಾಡಬಹುದು
ಭಾರದ ದಿನಗಳು ಆ ಹೂವ ಮುಡಿದಾವು
ಮತ್ತದರ ಮಕರಂದ, ಗಂಧವನು ಕನಸುಗಳಿಗೆ
ಬರಮಾಡಿಕೊಂಡಾವು, ಅಂಥ ಕನಸುಗಳಿಗೆ
ದುಂಬಿ ಲಗ್ಗೆ ಹಾಕಲುಬಹುದು; ಆದರೆ
ಹಂಸಗಳ ನೆನಪೇಕೆ ರಾತ್ರಿ ಹೊತ್ತು?



## ಜತೆ

ಆಗದೀ ತನ್ಮಯತೆಯಲ್ಲಿ
ಆ ಸರ್ವಾಂತರ್ಯಾಮಿ ನೊಣವ ಹೊಡೆವ
ಯತ್ನದಲ್ಲಿ ಗಂಟೆ ಕಳೆದರೂ
ಜಾಣಾಕ್ಷ ನೊಣ ಪಟ್ಟುಬಿಡ ಎಂಬಂತೆ ಅತ್ತ
ಸಾಯದೆ, ಇತ್ತ ಕಿರಿಕಿರಿಯನ್ನೂ ಬಿಡದೆ

ಯಾರೂ ಇಲ್ಲದ ಕೋಣೆಯಲ್ಲಿ
ಇವನ ಒಂಟಿತನ ಕಳೆದಿತ್ತು.





## ಮತ್ತೆ ಚಂದಿರ

ಗುಲಾಬಿ ವನಗಳ ಕೆಂಪಲ್ಲಿ ಕರಗಿಹೋಗಿವೆ
ಹಲವು ಹಳ್ಳಿ, ಹಳ್ಳ, ಶಹರ, ಸರ್ವಸಾಗರ.
ಎಷ್ಟೆಲ್ಲ ಲೈಟಲ್ಲಿ ಮರೆತಿದ್ದ ಚಂದಿರನ
ಕಂಡೆ ಮತ್ತೆ. ಗಲ್ಲಿಗಳಲಿ ಶವಯಾತ್ರೆ ಸಾಗುತ್ತಿವೆ.

ಮುಗಿಲು ಮುತ್ತುವ ಈ ಮರವ ನೋಡು
ಅದೆಷ್ಟು ಹೆಣಗಳ ಹೊತ್ತು ಸೋತಿದೆ
ಎಷ್ಟೊಂದು ತಾರೆಗಳು ಕಿಕ್ಕಿರಿದು ಬಾನಲ್ಲಿ
ಮಿಂಚು ಹುಳುಗಳದೇನು ಪಂಚಾಯತಿ.

ಕರಿದಲ್ಲಿ ಮಾತ್ರ ತೋರುವುದು ದಾರ
ನೆರಳಿರದ ಬೆಳಕಲ್ಲಿ ದಿನಕರಗಿದೆ
ಗುಂಡಿಯೊತ್ತಿದರೆ ಬಡಿಯಲೂಬಹುದು ಸಿಡಿಲು
ಊರುಸೂರು ಮಳಿಗೆ ದೇಶ ಬೂದಿ

ಗುಲಾಬಿವನಗಳು ಕರೆದಿವೆ ಕಂಪುಚೆಲ್ಲಿ
ಈ ಶಹರದಲ್ಲಿ, ಹಳ್ಳಿಮನೆ ಮಾತುಗಳು ಮೂಡಿ
ಹಸಿರು, ಮಳೆಯ ಸೆಳಕು, ಮತ್ತೆ ಚಂದಿರ
ನೀನು ಬಂದಂತೆ ನನ್ನ ಮನೆ ಬಾಗಿಲಲ್ಲಿ.

## ನಾಳೆ ಬೆಳಗಾದರೆ

ಈ ಸಂಜೆ
ಪಾರಿವಾಳಗಳ ಕಚ್ಚಾಟ ಕಿವಿತುಂಬಿದೆ
ಬಾನಿಗೆ ಬರೆಹಾಕಿದಂತೆ ತೆಳುಮೋಡ ಹಬ್ಬಿದೆ
ಸಂತಪ್ತ ಮನದ ಭ್ರಮೆಯಂತೆ
ದೃಷ್ಟಿಯಂತ್ಯದವರೆಗೂ ಹೊಗೆಕವಿದಿದೆ.

ಸಲ್ಲದವರ ಸುಳ್ಳು ಪರಿಚಯದ ಬೇಲಿ
ನೆರಳ ಬಿಂಬಿಸದ ಬೆಳಕಿನಂತೆ;
ಬಿಳಿ ಇರುವೆ ಬುಡಸಾರಿ ಬೇರ ತಲುಪಿ
ದನಿಯೆಂಬುದು ಬರೀ ಗೊಗ್ಗರಾಗುತ್ತಿದೆ.

ಎಷ್ಟೆಲ್ಲ ಪೇಟೆಗಳ ದಾಟಿ ಬಂದಿತು ದಾರಿ
ಅರಿತಿದ್ದ ನಿಲುದಾಣಗಳೆಲ್ಲ ದೂರವಾದವು
ದಿಕ್ಕು ಸೆಳೆದೆಡೆಯೆಲ್ಲ ತೂರಿದ ಸವಾರಿ
ಪಯಣವೇ ಗುರಿಯಾಗಿ ಸ್ತಬ್ಧಗೊಂಡಿದೆ.

ಜಗುಲಿಯಲಿ ಧೀಮಂತರ ಚಿತ್ರಪಟಗಳ ಸಾಲು
ಹಿಂದೆ ಗುಬ್ಬಿ ಸಂಸಾರ ಮಾಡಬಹುದಿತ್ತು.
ಗುಜರಿಯಲಿ ಕಂಡ ಗುರಾಣಿ ಬಲುಭಾರ
ಎಂಥ ವಿರಳ ವಿನ್ಯಾಸವಿತ್ತು ಅದಕೆ.

ಈ ಸಂಜೆ
ಗೆದ್ದಲು ಕಟ್ಟಿದ ಕಟ್ಟಡವ ತಿಳಿಯಬೇಕಿದೆ
ಕಿಸೆ ತುಂಬ ಮಕ್ಕಳ ನಗುವಿರಿಸಿಕೊಂಡು
ಹೊಸ್ತಿಲಾಚೆ ಬೇಲಿ ಮೇಲಣ ಹೂ ಕಾಣಬೇಕಿದೆ
ನಾಳೆ ಬೆಳಗಾದರೆ ಕೈತುಂಬ ನಾಳೆಯಿದೆ.



# ಸೋಲೊಪ್ಪಿದ ಕನ್ನಡಿಗಳು



ಸ. ಉಷಾ

ಒಂದು ಕಾಲವಿತ್ತು
ಆಗ
ಮಿಂದ ಕೂದಲ ಕಾಳಿಂದಿ ಸ್ವಚ್ಛಂದ
ಮೆಚ್ಚಿ ಕನ್ನಡಿ
ಕಣ್ಣು ಹೊಡೆಯುತ್ತಿತ್ತು

ಆಪಾದಮಸ್ತಕ
ತಿದ್ದಿ ತೀಡಿ ಘಮಘಮಿಸಿ ನಿನಗೆಂದೆ
ನಿನ್ನೆದುರು ನೆಲ ಬರೆಯುತ್ತ ಕೂತಾಗ
ನಿನ್ನ ಕಣ್ಣ ಹೂ
ಅಡಿಮುಡಿಗಳ ಅಳೆಯಲೆ ಇಲ್ಲ
ಪಾದಗಳ ರಾಗದಲಿ ನಾಚಿ
ಸ್ಥಿರವಾಗಿ ಕೀಲಿಸಿತು

ಹೀಗೇ ಕಾಲು ಕಾಲುಶತಮಾನ ಸವೆಸಿತು
ಸ್ವಚ್ಛಂದ ಛಂದಸ್ಸು ಬಡವಾಗಿ
ರಗಳೆಯಾಯಿತು
ಕಾಳಿಂದಿಯ ಹಾದಿಯಲಿ
ಬೆಳ್ಳಿತರೆಗಳು



ಗುಪ್ತಗಾಮಿನಿಯಾಗಿ ಹೊಳೆದುವು
ಸಾವಿರ ಸಂಕಷ್ಟಗಳ ಸಪ್ತಪದಿ ಸುತ್ತಿ
ಹಾದಿ ನಡೆದು ಪಾದ ಬಿರಿಯಿತು
ನಲವತ್ತರ ನೆರಳು ಕನ್ನಡಿಯಲಿ ಇಣಕಿತು
ಆಗ ನೀನು ಬಂದೆ
ಕರೆಗಂಟೆಯೊತ್ತದೇ ಹೆಜ್ಜೆ ಸದ್ದಿಲ್ಲದೇ
ಕನ್ನಡಿಯಲಿ ನನ್ನ ಹಿಂದೆ

ಭೂಮಿ ಗಿರಿಗಿಟ್ಟಿಯಾಡಿತು
ನನ್ನೂರಿಗೆ ನೀನೇ ಚೆಲುವೆ
ಎಂದವು ನಿನ್ನವೇ ಕಣ್ಣು
ಕಾಳಿಂದಿಯ ಬೆಳ್ಳಿಗೆರೆ
ಕೃಶವಾದ ರಗಳೆ
ಚಾಳೀಶದ ಕಣ್ಣು
ನೀನೇ ಚೆಲುವೆ ಎಂದವು
ಆಗಲೂ ಕನ್ನಡಿ ಸೋಲೊಪ್ಪಿತು

# ವಿಲ ಹೆಜ್ಜೆಯ ಹಿಂದೆ

ರೆ ತೆರೆದ ಬಾಗಿಲ ಚೌಕಟ್ಟಿಗೆ
ಲ್ಲದ ಹಾಗೆ ಆತುನಿಂತು
ಲ್ಲಗೆ ಹೆಜ್ಜೆಯಿಟ್ಟು
ಳಬರುತ್ತಾರೆ
ಕೆಯರು ಒಬ್ಬೊಬ್ಬರೇ
ಯಂತೇಜ ರೇವತಿಯರು
ವ್ಯದರ್ಶನದ ತೇಜಸ್ವಿನಿಯರು
ಚಲ ಧ್ಯಾನದ ಗಾಯತ್ರಿಯರು
ರ್ಥಂಕರಿಯರನರಸಿ
ವಪುರಾಣ ನಿರ್ಮಿಸುವ ನೇಮಿಯರು
ರುತ್ತಾರೆ ಸ್ವಂತದ ಕುದುರೆ ಹತ್ತಿ
ನಪಿನಂತಕ್ಕೆ

ಥವಾ ಕಾಡನವಿಲಿನ ಹಾಗೆ
ದಿಯ ನೀರಿನ ತೇವವನರಸಿ
ನಿನಲ್ಲೇ
ನು ತಲೆತಗ್ಗಿಸಿ
ಡನವಿಲಿನ ಹೆಜ್ಜೆ
ಡುಕುತ್ತೇನೆ



ಲ್ಲಿ ಹಾರಿದೆ ನವಿಲೆ
ನ್ನೆದೆಯ ಮೇಲೊಂದು
ರುತು ಗರಿಯುದುರಿಸಿ ಹಾಕೀ
ಲ್ಲಾಡದ ನವಿಲೇ
ಲ್ಲಿ ಕೂರುವೆನೆಂದು ಹೇಳಿಹೋಗೇ
ನೂ ಹಸಿರು ಹುಲ್ಲಿನ ಮೇಲೆ
ದುರಿದ ಗರಿ ಅರಸುತ್ತ
ಡೆದು ಬರುತ್ತೇನೆ
ಬಾನ ಹಾದಿಗೆ
ಮಣ್ಣ ಹೆಜ್ಜೆ ಕೂಡಿಸುತ್ತ



# ಧ್ಯಾನ

ಇದೋ ಎಲ್ಲ ನೆಲೆಗಳಿಗೆ ವಿದಾಯ
ಕಲರವದ ಕಡಲೆ
ಕಲರಹದ ನಿನಾದವೆ
ಮಾಮರದ ತೋಳುಯ್ಯಾಲೆಯಲಿ
ಕೋಗಿಲೆಯ ಮೌನವೆ
ಸಂಗ ನಿಸ್ಸಂಗದುಯ್ಯಾಲೆಯಲಿ
ಹೊಳೆದ ಸತ್ಯದ ಅಲಗೆ
ಬರಹೋಗುತ್ತ ಕೊಯ್ವ
ಎರಡಲಗಿನ ಒಲವೆ
ಸಾಣೆ ಹಿಡಿದ ಕೈಯೆ
ನಿಸ್ಸಂಗದಲಿ ಕುದಿಸಿ
ಸಂಗದಲಿ ಒಲಿಸಿ
ಅರಿವಿನರಳ ನರಳಿಸುವ ತಳಮಳವೆ
ಇದೊ ನಿಮಗೆಲ್ಲ ವಿದಾಯ

ಮೌನದೇಕಾಂತದ ಧ್ಯಾನ ಕಾಂತಾರದ
ಸುಮ್ಮನದ ನಾಡಿಗೆ
ದಾರಿಯುದ್ದಕ್ಕೂ ಕೊರಳ ಮುತ್ತುಗಳನುದುರಿಸದೆ
ಸರಿದು ಬಿಡುತ್ತೇನೆ
ಕುರುಹನಿಡದೆ
ಹುಲ್ಲಮೇಲೆ ನನ್ನ
ಒರಟು ಹೆಜ್ಜೆಗಳ
ಗಂಧ ಹಿಡಿದು
ನಿಸ್ಸಂಗಿ ಸಂಗ ಬಂದಲ್ಲಿ
ಮೌನ ಸಮಾಧಿಯಿಂದೆದ್ದು
ಅವನನೊಲಿಯುತ್ತೇನೆ



# ಯಕ್ಷಗಾನ

ಕರ್ನಾಟಕದ ಕರಾವಳಿ ಜಿಲ್ಲೆಗಳ ಜನಜೀವನದ ಒಂದು ಅನನ್ಯ ಅಂಗವಾಗಿರುವ ಯಕ್ಷಗಾನದ
ಇರುವ ನೆನಪುಗಳೆಲ್ಲ ರಮ್ಯವಾದವುಗಳೇ. ರಾತ್ರಿಯ ಸಮಯ, ತಡೆಹಿಡಿದ ನಿದ್ದೆ, ತೂಕಡಿಸ
ನೋಡಿದ ಪ್ರಸಂಗಗಳಿಂದಾಗಿ ಅದೆಲ್ಲವೂ ಬೇರಾವುದೋ ಜಗತ್ತಿನಲ್ಲಿ ಘಟಿಸಿಹೋಗಿದ್ದೇನೆ
ಅನಿಸುತ್ತದೆ. ಚಂಡೆಯ ರಿಂಗಣ ನನ್ನಲ್ಲಿ ಹುಟ್ಟಿಸುವ ಭಾವೋದ್ರೇಕವನ್ನು, ಅವ್ಯಕ್ತ ಆನಂದವ
ಬೇರಾವ ಸಂಗೀತವೂ ಹುಟ್ಟಿಸುವುದಿಲ್ಲ.

ಒಂದು ಯಕ್ಷಗಾನ ಪ್ರಸಂಗವೆಂದರೆ ಕೇವಲ ಒಂದು ರಾತ್ರಿಯ ಘಟನೆಯಲ್ಲ. ಆ
ಬೆಳಗಿನಿಂದಲೇ ಅದು ಊರಿನ ಅನುಭವದ ಭಾಗವಾಗತೊಡಗುತ್ತದೆ. ಒಂಬತ್ತು ಗಂಟೆಯ ಹೊ
ಊರಿನ ಬಯಲಲ್ಲಿ ಲಾರಿಗಳಿಂದ ಡೇರೆಯ ಸಾಮಾನು ಇಳಿಸತೊಡಗಿತೊಡನೆ ತಯಾರಿ ಶುರುವಾ
ಹಾಗೆ. ಹೊಂಡ ಅಗೆಯುವುದರಿಂದ ಮೊದಲಾಗಿ, ಎತ್ತರದ ಕಂಬಗಳು, ರಂಗಸ್ಥಳ, ಒರಗು ಕುರ್ಚಿಗ
ಇತ್ಯಾದಿ ಒಂದೊಂದೇ ನಿಧಾನ ಅನಾವರಣಗೊಳ್ಳುತ್ತ, ಪ್ರತಿ ಬಾರಿ ಆ ಬಯಲನ್ನು ಹಾ
ಹೋದಾಗಲೂ ಏನೋ ಒಂದು ಹೊಸ ಬೆಳವಣಿಗೆ ಕಾಣಿಸುತ್ತ, ದಿನವಿಡೀ ಊರಿನ ದೈನಿ
ಭಾಗವಾಗಿ ಬೆಳೆಯುತ್ತ, ಮುಸ್ಸಂಜೆಯ ವೇಳೆಗೆ ಪೂರ್ತಿ ಸಿದ್ಧವಾಗುತ್ತದೆ. ಹಗಲಿನ ಜೊತೆ ಬೆಳೆಯ
ಹೋಗುವ ಡೇರೆ, ಕಣ್ಣಿಗೆ ಬಿದ್ದಾಗಲೆಲ್ಲ ಈವತ್ತು ರಾತ್ರಿ ಯಕ್ಷಗಾನ ಇದೆ ಎಂದು ಪದೇ ಪ
ನೆನಪಿಸುತ್ತ, ಆ ರಾತ್ರಿಯ ಪ್ರಸಂಗ ನೋಡಲಿರುವವರ ಮನಸ್ಸನ್ನು ಸಜ್ಜುಗೊಳಿಸುತ್ತದೆ. ಅಷ್ಟೇ ಅ
ಅವರ ಆ ದಿನದ ಮಧ್ಯಾಹ್ನದ ನಿದ್ದೆಯಿಂದ ಹಿಡಿದು ರಾತ್ರಿಯ ಊಟದ ಸಮಯದವರೆಗೆ ಆವ
ದಿನಚರಿಯಲ್ಲಿ ಬದಲಾವಣೆ ತರುತ್ತದೆ.

ಈ ಕಲೆ ಪ್ರೇಕ್ಷಕರಿಂದ ತುಂಬ ಅಪೇಕ್ಷಿಸುತ್ತದೆ. ನೋಡುಗ ಗಾಢವಾಗಿ ಒಳಗೊಳ್ಳದೇ ಇದ್ದ
ಯಕ್ಷಗಾನ ಒಂದು ಅನುಭವವಾಗಲು ಸಾಧ್ಯವಿಲ್ಲ. ಕಾಣುವ ಕಣ್ಣಿಗೆ ಆ ಚಿಕ್ಕ ರಂಗಸ್ಥಳವೇ ಎಲ್ಲ
ಆಗಬೇಕು. ಇದೋ ಮೇಘದೋಪಾದಿಯಲ್ಲಿ ಎರಗಿ ಬರುತ್ತಿರುವ ಹನ್ನೊಂದು ಅಕ್ಷೋಹಿಣಿ ಸೈ
ಎಂದರೆ ಅಲ್ಲಿ ಅದು ಕಾಣಬೇಕು. ಅದರ ಎದುರು ನಿಂತು ಕಂಪಿಸಿದ ಅರ್ಜುನನನ್ನು ಕಾಣಬೇ
ಕುಣಿತದ ನಂತರದ ತುಸು ಏದುಸಿರಿನಲ್ಲಿ ವರ್ಣಿಸಿದ ಇಂದ್ರನ ಒಡ್ಡೋಲಗ, ಅವನ ಅಹಂಕಾ
ಕಾರಣವಾದಂಥ ವಿಲಾಸದಲ್ಲಿ ನಮಗೆ ಕಾಣಬೇಕು. ಹಿಡಂಬಾಸುರನ ಅಟ್ಟಹಾಸಕ್ಕೆ ನಡು
ಗಾಢಾಂಧಕಾರದ ಅರಣ್ಯ, ವಿದುರ ವಿವರಿಸಿದ ಕುರುಕ್ಷೇತ್ರದ ರಕ್ತಸಿಕ್ತ ಯುದ್ಧಭೂಮಿ, ಹನುಮ




ಕಂಡ ವೈಭವೋಪೇತ ಲಂಕೆ ಎಲ್ಲವನ್ನೂ ಅಲ್ಲಿ, ಆ ರಂಗಸ್ಥಳದಲ್ಲಿ ನಾವು ಪ್ರತ್ಯಕ್ಷಗೊಳಿಸಿಕೊಳ್ಳಬೇಕು. ಹೀಗೆ ಸೃಷ್ಟಿಯಾದ ಸನ್ನಿವೇಶಗಳಲ್ಲಿ ಪಾತ್ರಗಳು ಮೈದಾಳತೊಡಗುತ್ತವೆ. ಮಾತುಗಾರಿಕೆ ಮತ್ತು ಆಯಾ ಸಂದರ್ಭಕ್ಕೆ ಬಳಸುವ ಭಾಷೆ ಕೂಡ ತುಂಬ ಮುಖ್ಯ. ನೃತ್ಯದಲ್ಲಿ ಪರಿಣತನಾದ ಕಲಾವಿದ, ಮಾತುಗಾರಿಕೆಯಲ್ಲಿ ಸೋತರೆ, ಪಾತ್ರಕ್ಕೆ ಅಗತ್ಯವಾದ ತಾತ್ವಿಕ ಆಯಾಮಗಳು, ಒಳತುಮುಲಗಳು ಇಲ್ಲವಾಗುತ್ತವೆ.

ಹೀಗೆ, ಒಂದು ಮಗ್ಗುಲಲ್ಲಿ ನೋಡುಗರ ಕಲ್ಪನಾಶಕ್ತಿಯನ್ನು ಪೂರ್ತಿಯಾಗಿ ಅವಲಂಬಿಸಿದರೂ, ಶಾಸ್ತ್ರಬದ್ಧ ಶಿಸ್ತು ಕೂಡ ಇಲ್ಲಿ ಅಷ್ಟೇ ಮುಖ್ಯ. ಪಾತ್ರಧಾರಿಯ ವೇಷಭೂಷಣಗಳು, ಕಿರೀಟ, ಭುಜಕೀರ್ತಿ, ಅಂಗವಸ್ತ್ರದ ಬಣ್ಣ ಹೀಗೆ ಪ್ರತಿಯೊಂದೂ ಆಯಾ ಪಾತ್ರದ ವ್ಯಕ್ತಿತ್ವವನ್ನು, ಸ್ಥಾನಮಾನವನ್ನು ಸೂಚಿಸುತ್ತವೆ. ಇಂಥ ಅನೇಕ ಸೂಕ್ಷ್ಮ ವಿವರಗಳನ್ನು ಪಾಲಿಸುತ್ತ, ಈ ಕಲಾಶಾಸ್ತ್ರದ ಪ್ರಕಾರ ವೇಷ ಕಟ್ಟಬೇಕು. ಆಂಗಿಕ ಅಭಿನಯ, ಹಸ್ತಮುದ್ರೆಗಳ ಬಳಕೆ, ಪಾತ್ರಪ್ರವೇಶದ ರೀತಿ ಮುಂತಾದವು ಶಾಸ್ತ್ರೀಯ ಚೌಕಟ್ಟನ್ನು ಒದಗಿಸುತ್ತವೆ. ಘನಘೋರ ಕಾಳಗ ನಡೆಯುತ್ತಿರುವ ಅದೇ ರಂಗಸ್ಥಳದ ಒಂದು ಭಾಗದಲ್ಲಿ ಕೂತು, ಪ್ರೇಕ್ಷಕರಂತೆಯೇ ಬಟ್ಟೆ ತೊಟ್ಟು, ಆಗಾಗ ಚಹಾ ಹೀರುತ್ತ ಪ್ರಸಂಗವನ್ನು ಮುನ್ನಡೆಸುವ ಭಾಗವತನನ್ನೂ, ಚಂಡೆ ಮೃದಂಗದವರನ್ನೂ ಪ್ರೇಕ್ಷಕ ಅಗತ್ಯವಾದಾಗ ಮಾತ್ರ ತನ್ನ ಗ್ರಹಿಕೆಯ ಒಳಗೆ ತರಬೇಕು. ನಡುವೆ ಪಾತ್ರಪೋಷಣೆಗೆ ಅಥವಾ ಕಥೆ ಮುಂದುವರಿಯಲು ಅಗತ್ಯವಾದಲ್ಲಿ ಭಾಗವತ ಕೂಡ ಪಾತ್ರದ ಜೊತೆ ಅಶರೀರವಾಣಿಯೋ ಎಂಬಂತೆ ಮಾತನಾಡುವ ಸಂಪ್ರದಾಯವೂ ಇದೆ. ಇದೆಲ್ಲವೂ ಯಕ್ಷಗಾನದಲ್ಲಿ ಸಮ್ಮತವೇ. ಯಾವುದೂ ಪ್ರೇಕ್ಷಕನ ರಸಾನುಭವಕ್ಕೆ ಭಂಗ ತರುವುದಿಲ್ಲ. ಪ್ರೇಕ್ಷಕನ ಕಲ್ಪನಾಶಕ್ತಿ, ಕಲಾಶಾಸ್ತ್ರದ ಶಿಸ್ತು, ಗ್ರಹಿಕೆಯ ಪ್ರಬುದ್ಧತೆಗಳು ಇಲ್ಲಿ ಮೇಳೈಸಿ, ರಂಗಪ್ರಯೋಗದಲ್ಲಿ ಇರಬೇಕಾದ ಆರೋಗ್ಯಕರ ಅಂತರ ಮತ್ತು ಸಂಬಂಧಕ್ಕೆ ಇದೊಂದು ಅತ್ಯುತ್ತಮ ಉದಾಹರಣೆಯಂತಿದೆ. ಯಕ್ಷಗಾನ ತನ್ನ ಸಂರಚನೆಯಲ್ಲಿಯೇ ವಾಸ್ತವ, ಫ್ಯಾಂಟಸಿ, ಭಾಷೆ, ಪುರಾಣಗಳನ್ನು ಏಕಕಾಲಕ್ಕೆ ಹಿಡಿದಿಟ್ಟುಕೊಂಡಿದೆ.

ಯಕ್ಷಗಾನವನ್ನು ಆಸ್ವಾದಿಸಬಲ್ಲ ಪ್ರಬುದ್ಧ ಪ್ರೇಕ್ಷಕರು, ಪುಣ್ಯವಶಾತ್, ಕರ್ನಾಟಕದ ಕರಾವಳಿಯ ಜಿಲ್ಲೆಗಳಲ್ಲಿ ಇನ್ನೂ ಇದ್ದಾರೆ. ಇವರಲ್ಲಿ ಅನಕ್ಷರಸ್ಥರೂ ಇದ್ದಾರೆ. ಇದಕ್ಕೆ ಬೇಕಾಗಿರುವುದು ಮನಸ್ಸಿನ ಪ್ರಬುದ್ಧತೆ ಹೊರತು ಸಾಕ್ಷರತೆಯಲ್ಲ. ಕಣ್ಣಿನ ಹಸಿವು ಟಿವಿಯನ್ನು ಒಂದು ಆಕರ್ಷಕ ಮಾಧ್ಯಮವನ್ನಾಗಿ

ಮಾಡಿರುವಂತೆಯೇ, ಮನಸ್ಸಿನ ಕಲ್ಪನೆಯ ಸಾಧ್ಯತೆಗಳನ್ನು ಕಸಿದುಕೊಳ್ಳುತ್ತ ಹೋಗುತ್ತಿದೆ ಎಂಬುದನ್ನು ನಾವು ಮತ್ತೆ ಮತ್ತೆ ಅರಿವಿಗೆ ತಂದುಕೊಳ್ಳಬೇಕಾಗಿದೆ.

ನಡುನಡುವೆ ಮಾಡುವ ನಿದ್ದೆ ಕೂಡ ಯಕ್ಷಗಾನದ ಅನುಭವದ ಒಂದು ಅಂಗ. ಸಣ್ಣ ನಿದ್ದೆ ಮಾಡಿ ಎದ್ದಾಗಲೂ, ಅದು ಏನನ್ನೂ ತಪ್ಪಿಸಿಕೊಂಡೆವೆಂಬ ಭಾವನೆಯನ್ನು ಕೊಡುವುದಿಲ್ಲ. ಕಥೆ ಎಲ್ಲರಿಗೂ ಗೊತ್ತಿರುವುದರಿಂದ, ಒಂದು ಪ್ರಸಂಗವನ್ನು ಎಲ್ಲಿಂದಲಾದರೂ ಮತ್ತೆ ನೋಡಲು ಶುರುಮಾಡಬಹುದು, ಮುಂದುವರಿಸಬಹುದು. ಅರಿವಿಲ್ಲದೇ ನಿದ್ದೆಗೆ ಜಾರಿದಾಗ ಭೀಕರ ಯುದ್ಧಗಳು, ದೈತ್ಯಸಂಹಾರಗಳು, ಸ್ವಯಂವರಗಳು ಘಟಿಸಿ ಹೋಗಿರುತ್ತವೆ. ಮೋಹಿನಿ ಭಸ್ಮಾಸುರನನ್ನು ಮರುಳುಗೊಳಿಸಿರುತ್ತಾಳೆ. ಈ ನಡುವೆ ಚಂಡೆಯ ಸದ್ದು, ರಾಕ್ಷಸರ ಆಟಾಟೋಪಗಳು ನಮ್ಮನ್ನು ನಿದ್ದೆಯಿಂದ ಎಳೆದುತರಲು ಪ್ರಯತ್ನಿಸುತ್ತಿರುತ್ತವೆ. ಕ್ಷಣಕಾಲ ಎವೆ ಅಂಟಿದಂತೆನಿಸಿ ಫಕ್ಕನೆ ಎಚ್ಚರಾದಾಗ ಕಂಡ ವಿದೂಷಕನ ದಂಡ, ಅವನ ವಿಚಿತ್ರ ಬಟ್ಟೆ, ಅವನ ಅಣಕು ಕುಣಿತ, ಎಲ್ಲವೂ ಈಗ ಯಾವ ಜಗತ್ತಲಿದ್ದೇವೆ ಎಂದು ಒಂದು ಗಳಿಗೆ ಗೊತ್ತಾಗದಂತೆ ಮಾಡಿಬಿಡುತ್ತದೆ. ಭಾರೀ ಡೇರೆಯ ಆಚೆ, ಚಹಾ ಮತ್ತು ಶೇಂಗಾ ಮಾರುವ ಅಂಗಡಿಗಳು, ಅವರ ಗ್ಯಾಸ್‌ಲೈಟಿನ ಬುಸುಗುಡುವ ಸದ್ದು, ಅದರಿಂದ ಹಬ್ಬುವ ಹಾಲಿನಂಥ ಬೆಳಕು, ರಾತ್ರಿಯಿಡೀ ಕ್ಷೀಣವಾಗಿ ಕೇಳಿಸುವ ಜನರೇಟರಿನ ಸದ್ದು, ಚಳಿ ಮತ್ತು ಇಬ್ಬನಿ - ಎಲ್ಲವೂ ಒಂದು ಯಕ್ಷಗಾನ ಅನುಭವದ ಅವಿಭಾಜ್ಯ ಭಾಗಗಳು.

ಯಕ್ಷಗಾನ ಪ್ರೇಮಿಗೆ ಒಂದು ಪ್ರಸಂಗ ಅಂದರೆ ಕನಿಷ್ಠ ಎರಡು ದಿನಗಳ ಅನುಭವ. ಪ್ರಸಂಗದ ದಿನದ ಬೆಳಗಿನಿಂದಲೇ ಶುರುವಾದ ಅದು, ಆಪತ್ತಿನ ರಾತ್ರಿಯ ನಿದ್ದೆಯನ್ನು ಮರಳಿ ಗಳಿಸುವವರೆಗೂ ವಿಸ್ತರಿಸುತ್ತದೆ. ಮಂಗಳ ಹಾಡುತ್ತಿದ್ದಂತೆ, ಆಗಲೇ ಡೇರೆಯ ಸುಮಾರು ಭಾಗ ಬಿಚ್ಚಿಹೋಗಿದ್ದು ಗಮನಕ್ಕೆ ಬರತೊಡಗುತ್ತದೆ. ಬೆಳಗಿನ ಹಿತವಾದ ಚಳಿಯಲ್ಲಿ ಮನೆಗೆ ಧಾವಿಸಬೇಕು. ಶಾಲೆ, ಆಫೀಸುಗಳ ದಿನಚರಿ ಇಟ್ಟುಕೊಂಡೂ, ಹೊತ್ತಲ್ಲದ ಹೊತ್ತಲ್ಲಿ ನಿದ್ದೆ ಮಾಡಬೇಕು. ಇದೆಲ್ಲವೂ ಇದ್ದಾಗಲೇ ಒಂದು ಯಕ್ಷಗಾನದ ಅನುಭವ ಪೂರ್ತಿಯಾಗಲು ಸಾಧ್ಯ. ರಾತ್ರಿಯಿಡೀ ಜರುಗಬೇಕಾದ ಯಕ್ಷಗಾನವನ್ನು ಮೂರು ಗಂಟೆಗೆ ಇಳಿಸಿದಾಗ, ಮಧ್ಯಾಹ್ನದ ಹೊತ್ತು ರವೀಂದ್ರ ಕಲಾಕ್ಷೇತ್ರದ ಸಭಾಂಗಣದಲ್ಲಿ ಉಸಿರುಗಟ್ಟಿಸಿಕೊಂಡು ಕಟ್ಟೆಚ್ಚರದಲ್ಲಿ ನೋಡಬೇಕಾದಾಗ, ಕಳೆದುಹೋಗುವ ಅನುಭವದ ಮಗ್ಗಲುಗಳು ಎಷ್ಟೊಂದು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ದುರದೃಷ್ಟವೆಂದರೆ ಯಾರಿಗೂ ಈಗ ಪುರಸತ್ತಿಲ್ಲ. ರಾತ್ರಿಯಿಡೀ ಕೂತು ನೋಡುವ ತಾಳ್ಮೆಯಿಲ್ಲ. ಮುಖ್ಯವಾಗಿ, ಇಂಥದೊಂದು ಕಲೆಯ ಮಹತ್ವವನ್ನು ಅರಿಯುವ, ಅದನ್ನು ಗೌರವಿಸುವ ಜೀವನಕ್ರಮ ನಿಧಾನವಾಗಿ ಕಣ್ಮರೆಯಾಗುತ್ತಿದೆ. ■





## ಸಾದತ್ ಹಸನ್ ಮಾಂಟೋ

# ದೇಶಚ್ಛೇದದ ಕತೆಗಳು

ಕನ್ನಡಕ್ಕೆ : ಮಾಧವ ಐತಾಳ್



### ನದಿಗಳಿಗೆ ಹೊಸ ದಾರಿ-ಮಾಂಟೋ

1919ರಲ್ಲಿ ಜಲಿಯನ್‌ವಾಲಾಬಾಗ್ ಹತ್ಯಾಕಾಂಡವಾದಾಗ ಮಾಂಟೋ 12ರ ಎಳೆಯ. ಈ ಉಪಖಂಡದ ಅತ್ಯಂತ ಶ್ರೇಷ್ಠ ಕತೆಗಾರರಲ್ಲೊಬ್ಬರಾದ ಆತ, ಅಮೃತಸರದ ಬಡ ಕಾಶ್ಮೀರಿ ಕುಟುಂಬದಲ್ಲಿ ಹುಟ್ಟಿದರು. ಅಮೃತಸರ ಮತ್ತು ಅಲಿಘರ್‌ನಲ್ಲಿ ವಿದ್ಯಾಭ್ಯಾಸ ಪಡೆದ ನಂತರ 1936ರಲ್ಲಿ ಮುಂಬೈಯ ಪತ್ರಿಕೆಯೊಂದರಲ್ಲಿ ಸಂಪಾದಕ ವೃತ್ತಿ ಕೈಗೊಂಡರು. ದೆಹಲಿಯ ಆಕಾಶವಾಣಿ, ನಂತರ ಬಾಂಬೆ ಟಾಕೀಸ್ ಸೇರಿದ ಮಾಂಟೋ, ದೇಶ ವಿಭಜನೆ ನಂತರ ಜನವರಿ 48ರಲ್ಲಿ ಕರಾಚಿಗೆ ವಾಪಸ್ಸಾದರು. ಆಗಸ್ಟ್ 18, 1954ರಲ್ಲಿ ಕುಡಿದು ಕುಡಿದು ತೀರಿಕೊಂಡರು. ಅವರೊಟ್ಟಿಗೆ ಆತನ ಎದೆಯಾಳದಲ್ಲಿದ್ದ ಎಲ್ಲ ಕತೆಗಳೂ ಗೋರಿ ಸೇರಿಬಿಟ್ಟವು.

200ಕ್ಕೂ ಹೆಚ್ಚಿನ ಕತೆಗಳನ್ನು ಬರೆದ ಮಾಂಟೋನ ಮೊದಲ ಪುಸ್ತಕ 1940ರಲ್ಲಿ ಬಂತು. ಅದು ಸಂಪ್ರದಾಯ ಶರಣರಿಂದ 'ಕಾಮ ಮತ್ತು ವ್ಯಭಿಚಾರದ ಗೀಳಿನ ಪುಸ್ತಕ' ಎಂದು ಕಟು ಟೀಕೆಗೊಳಗಾಯ್ತು. ಈ ಪುಸ್ತಕದಿಂದಾಗಿ ಮಾಂಟೋ ಎರಡು ಸಲ ಜೈಲುವಾಸ ಅನುಭವಿಸಿದರು. 1947ರಲ್ಲಿ ಆತ ಬರೆದ ದೇಶ ವಿಭಜನೆ ಕುರಿತ ಬರಹಗಳನ್ನು 'ಸಿನಿಕ ಪ್ರಚಾರಪ್ರಿಯನ ಪುಸ್ತಕ' ಎಂದು ತಿರಸ್ಕರಿಸಿದರು. 'ಸತ್ತವರನ್ನು ಗೋರಿಯಿಂದ ಎಬ್ಬಿಸಿ, ಕತೆ ಬರೆದು ಸಂಗ್ರಹವೊಂದನ್ನು ಮಾಂಟೋ ತಂದಿದ್ದಾನೆ' ಎಂದು ವಿಮರ್ಶಕರು ಕಟು ಟೀಕೆ ಮಾಡಿದರು. ಅದಕ್ಕೆ ಮಾಂಟೋ ಹೇಳಿದ್ದು - ''ನಾನು ದೇಶ ವಿಭಾಗವೆಂಬ ಸತ್ಯವನ್ನು ಯಾವುದೇ ಆತ್ಮಭಂಜನೆಯಿಲ್ಲದೆ ಒಪ್ಪಿಕೊಂಡಿದ್ದೇನೆ. ವ್ಯಕ್ತಿಯೊಬ್ಬ, ಏಕಮನಸ್ಸಿನಿಂದ ಇನ್ನೊಬ್ಬನನ್ನು ಕೊಂದಿದ್ದನ್ನು, ಮನುಷ್ಯ ನಿರ್ಮಿತ ರಕ್ತದ ಮಣಿಗಳ ಶರಧಿಯನ್ನು, ಕೆಲವರ ದ್ವೇಷವನ್ನು, ಕೊಲೆಗಡುಕರ ಕಣ್ಣೀರನ್ನು ಕಂಡಿದ್ದೇನೆ.''

ಹಾಗೆಂದ ಮಾತ್ರಕ್ಕೆ ಆತ ನಿರಾಶಾವಾದಿಯಲ್ಲ. ಆತ ಬರೆದ ಕತೆಯೊಂದರಲ್ಲಿ ಹುಟ್ಟಿದ ಮಗುವಿಗೆ ತಂದೆಯೊಬ್ಬ ಯಾಜೀದ್ ಎನ್ನುವ ಹೆಸರಿಡುತ್ತಾನೆ. ಸುತ್ತಲಿನ ಜನ ಬೆಚ್ಚುತ್ತಾರೆ, ಏಕೆಂದರೆ ಯಾಜೀದ್ ಎಂಬುವನು ನದಿಗಳ ಹರಿವನ್ನು ನಿಲ್ಲಿಸಿದ ರಾಕ್ಷಸ. ಆಗ ಮಗುವಿನ ತಂದೆ ಹೇಳುತ್ತಾನೆ - ''ಯಾಜೀದ್ ನದಿಗಳನ್ನು ನಿಲ್ಲಿಸಲೇಬೇಕೆಂದಿಲ್ಲ. ಆತ ನದಿಗಳಿಗೆ ಹೊಸ ದಾರಿಯನ್ನು ರೂಪಿಸುತ್ತಾನೆ ಕೂಡಾ.'' ಮಾಂಟೋ ಕೂಡಾ ಒಂದರ್ಥದಲ್ಲಿ ಯಾಜೀದ್ ಇಲ್ಲವೇ ಆತನ ವಂಶಜ!



ಈ ಟಿಪ್ಪಣಿಯೊಂದಿಗೆ ಇಲ್ಲಿಯ ಪ್ರಖರ ಕಿರುಗತೆಗಳನ್ನು ಕನ್ನಡಕ್ಕೆ ತಂದುಕೊಟ್ಟಿರುವ ಚಿಂತನಶೀಲ ಪತ್ರಕರ್ತ ಮಾಧವ ಐತಾಳ್, ಬೆಂಗಳೂರಿನಲ್ಲಿ 'ವಿಜಯ ಕರ್ನಾಟಕ' ದೈನಿಕದ ಹಿರಿಯ ಉಪಸಂಪಾದಕರಾಗಿದ್ದಾರೆ.

## ಮೋಸ

ಈ ಗುಂಪಿನಲ್ಲಿ ಹತ್ತೊ, ಇಪ್ಪತ್ತೊ ಹುಡುಗಿಯರಿದ್ದರು. ಇಬ್ಬರು ಗೆಳೆಯರು ಹಣ ತೆತ್ತು ಒಬ್ಬಳನ್ನು ಕೊಂಡರು. ಒಬ್ಬ ಅವಳನ್ನು ಕೇಳಿದ, ''ಏನು ನಿನ್ನ ಹೆಸರು?''

ಹುಡುಗಿ ತನ್ನ ಹೆಸರು ಹೇಳಿದಾಗ ಆತ ಬೆಂಕಿಯಾದ.

''ನಮಗೆ ನೀನು ಬೇರೆ ಧರ್ಮಕ್ಕೆ ಸೇರಿದವಳು ಎಂದು ಹೇಳಿದ್ದಾರಲ್ಲ?'

ಹುಡುಗಿ ಹೇಳಿದಳು, ''ನನ್ನನ್ನು ಮಾರಿದವನು ನಿಮಗೆ ಮೋಸ ಮಾಡಿದ್ದಾನೆ.''

ಆತ ತನ್ನ ಸ್ನೇಹಿತನ ಮನೆಗೆ ಓಡಿಹೋಗಿ ಕೂಗಿದ. ''ಆ ಸೂಳೆಮಗ ನಮಗೆ ಮೋಸ ಮಾಡಿದ್ದಾನೆ. ನಮ್ಮದೇ ಧರ್ಮಕ್ಕೆ ಸೇರಿದ ಹುಡುಗಿಯನ್ನು ನಮಗೆ ಮಾರಿದ್ದಾನೆ. ಈಗೇನು ಮಾಡೋಣ?''





ಕುಸನೂರ

## ವ್ಯತ್ಯಾಸ

''ನಾನು ಆತನ ಗಂಟಲಿಗೆ ಚೂರಿ ಇಕ್ಕಿದೆ. ನಿಧಾನವಾಗಿ, ತುಂಬಾ ನಿಧಾನವಾಗಿ ಅವನನ್ನು ಕೊಂದೆ''

''ಎಂತಹ ಕೆಲಸ ಮಾಡಿದೆ ನೀನು?''

''ಯಾಕೆ?''

''ನೀನು ಅವನನ್ನು ಹಾಗೇಕೆ ಕೊಂದೆ?''

''ನಾನು ಆ ರೀತಿ ಕೊಲ್ಲುವುದನ್ನು ಇಷ್ಟಪಡುತ್ತೇನೆ''

''ನೀನೊಬ್ಬ ಅಯೋಗ್ಯ, ನೀನವನ ಕತ್ತನ್ನು ಒಂದೇ ಏಟಿಗೆ ಕತ್ತರಿಸಿ ಹಾಕಬೇಕಿತ್ತು, ಹೀಗೆ'' ಎಂದವನೇ ಆ ವ್ಯಕ್ತಿ ಗಂಟಲಿಗೆ ಚೂರಿ ಇಕ್ಕಿ ಕೊಲ್ಲುತ್ತಿದ್ದ ಶುದ್ಧ ಕೊಲೆಗಡುಕನ ಕತ್ತನ್ನು ಚಕ್ಕನೆ ಕತ್ತರಿಸಿ ಹಾಕಿದ.





# ನಿಷ್ಪಾಪ

ಬಂದೂಕಿನ ಕುದುರೆಯನ್ನು ಒತ್ತಲಾಯ್ತು. ಗುಂಡು ನಳಿಕೆಯಿಂದ ಹಾರಿತು. ಕಿಟಕಿಯಿಂದ ಹೊರಗೆ ನೋಡುತ್ತಿದ್ದ ನಿಷ್ಪಾಪಿ ವ್ಯಕ್ತಿ ಅಲ್ಲೇ ಕುಸಿದ. ಕುದುರೆಯನ್ನು 2ನೇ ಸಲ ಒತ್ತಿದಾಗ ಇನ್ನೊಂದು ಗುಂಡು ಹಾರಿತು. ಆಗ ನೀರು ಗಂಟಿಯ ನೀರಿನ ಚೀಲ ಒಡೆಯಿತು. ಆತನೂ ಕುಸಿದ. ಆತನ ರಕ್ತ ನೀರಿನೊಡನೆ ಮಿಶ್ರವಾಗಿ, ರಸ್ತೆಯ ಮೇಲೆ ಹರಿಯಲಾರಂಭಿಸಿತು.

ಮೂರನೇ ಗುಂಡು ತನ್ನ ಗುರಿ ತಲುಪಲಿಲ್ಲ. ಒದ್ದೆ ಗೋಡೆಯೊಂದರ ಮೂಲಕ ವ್ಯರ್ಥವಾಗಿ ತೂರಿಹೋಯಿತು.

ನಾಲ್ಕನೇ ಗುಂಡು ವೃದ್ಧೆಯೊಬ್ಬಳ ಬೆನ್ನನ್ನು ಚುಚ್ಚಿತು. ಒಂದು ಚೀರನ್ನೂ ಚೀರದೆ ಆಕೆ ಸತ್ತಳು.

ಐದು, ಆರನೇ ಗುಂಡಿನಿಂದ ಯಾರೂ ಗಾಯಗೊಳ್ಳಲಿಲ್ಲ, ಸಾಯಲಿಲ್ಲ. ಇದರಿಂದ ಆ ಮನುಷ್ಯ ರೊಚ್ಚಿಗೆದ್ದ. ಆತನ ಕಣ್ಣಿಗೆ ರಸ್ತೆಯಲ್ಲಿ ಓಡುತ್ತಿದ್ದ ಚಿಣ್ಣನೊಬ್ಬ ಕಂಡ. ಆತನೆಡೆಗೆ ನಳಿಕೆಯ ಗುರಿ ಹಿಡಿದ.

ಆತನ ಸಂಗಾತಿ ಕೇಳಿದ, ''ನೀನು ಮಾಡುತ್ತಿರುವುದೇನು?''

''ಏಕೆ, ನಾನೇನು ಮಾಡಿದೆ?''

''ಮೂರ್ಖ, ನಿನ್ನ ಪಿಸ್ತೂಲಿನಲ್ಲಿ ಗುಂಡುಗಳಿಲ್ಲ''

ವ್ಯಕ್ತಿ ಹೇಳಿದ, ''ಮುಚ್ಚು ಬಾಯಿ, ಅದು ಆ ಮಗುವಿಗೆ ಹೇಗೆ ಗೊತ್ತಾಗುತ್ತದೆ?''



ಶ್ರೀಪಾದ್

## ಏಕೆ ತಂದೆ?

ದಾಳಿ ನಡೆಯಿತು. ಆ ದಂಪತಿಗಳು ಹೇಗೋ ಮಾಡಿ ಕೆಲವು ವಸ್ತುಗಳನ್ನು ಉಳಿಸಿಕೊಂಡರು. ಆದರೆ ಅವರ ಮಗಳು ನಾಪತ್ತೆಯಾದಳು. ಉಳಿದ ಇನ್ನೊಂದು ಕೂಸು ತಾಯಿಗೆ ಅತುಕೊಂಡಿತು. ಅವರ ಸಮಸ್ತ ಸಂಪತ್ತು ದಾಳಿಕೋರರ ವಶವಾಯ್ತು. ಸಾಕಿದ ಹಸು ಆ ದುಷ್ಟರ ಕಣ್ಣಿನಿಂದ ತಪ್ಪಿಸಿಕೊಂಡರೆ, ಆ ಪುಣ್ಯ ಕರುವಿಗೆ ಇಲ್ಲದೇ ಹೋಯಿತು. ಗಂಡ, ಹೆಂಡತಿ, ಹಸುಗೂಸು ಮತ್ತು ಹಸು ಎಲ್ಲರೂ ಗುಟ್ಟಾಗಿ ಒಂದೆಡೆ ಅಡಗಿಕೂತರು. ಕತ್ತಲಾಯಿತು. ಹೆದರಿದ್ದ ಕೂಸು ಅಳತೊಡಗಿತು. ಕತ್ತಲ ಮೌನದಲ್ಲಿ ಅದರ ಅಳು ಭೇರಿಯನ್ನು ಬಾರಿಸಿದಂತೆ ಕೇಳಿಸುತ್ತಿತ್ತು. ತಾಯಿ ಅಳುತ್ತಿದ್ದ ಮಗುವಿನ ಬಾಯಿ ಮುಚ್ಚಿದಳು. ತಂದೆ ಮಗುವಿನ ಮೇಲೆ ದುಪ್ಪಟಿ ಹೊದೆಸಿ, ಮುಚ್ಚಿಬಿಟ್ಟ. ಆಗ ದೂರದಲ್ಲಿ ಕರು ಕೂಗಿತು. ಕರುವಿನ ಕೂಗಿನಿಂದ ಎಚ್ಚೆತ್ತ ಹಸು ಅತ್ತಿಂದಿತ್ತ ಓಡಾಡತೊಡಗಿತು. ಅದನ್ನು ಸಮಾಧಾನಿಸಲು ಅವರಿಗೆ ಸಾಧ್ಯವಾಗಲಿಲ್ಲ.

ಈ ಶಬ್ದ ಕೇಳಿದ ಶತ್ರುಗಳು ಉರಿಯುವ ಪಂಜುಗಳೊಡನೆ ಅಲ್ಲಿ ಪ್ರತ್ಯಕ್ಷವಾದರು. ಹೆಂಡತಿ ಕಡುಕೋಪದಿಂದ ಗಂಡನಿಗೆ ಉಗಿದಳು, '' ಈ ದರಿದ್ರ ಪ್ರಾಣಿಯನ್ನು ನಮ್ಮ ಜೊತೆಗೆ ಏಕೆ ತಂದೆ?''

## ಸಾವಿಗಾಗಿ ಶೋಕ

ನಗರವನ್ನೆಲ್ಲ ಲೂಟಿ ಮಾಡುತ್ತಿದ್ದ ಗುಂಪಿನವರ ಕಣ್ಣು ಸರ್. ಗಂಗಾರಾಮ್ ಅವರ ಪ್ರತಿಮೆ ಮೇಲೆ ಬಿತ್ತು. ಅವರು ಪ್ರತಿಮೆಯನ್ನು ದೊಣ್ಣೆಯಿಂದ ಹೊಡೆದರು. ಕಲ್ಲು, ಇಟ್ಟಿಗೆಗಳನ್ನು ಎಸೆದರು. ಒಬ್ಬ ಪ್ರತಿಮೆಯ ಮುಖಕ್ಕೆ ಟಾರ್ ಬಳಿದು ಕುರೂಪಗೊಳಿಸಿದ. ಕೆಲವರು ಹಳೆ ಮೆಟ್ಟುಗಳನ್ನು ಸೇರಿಸಿ ಹಾರ ಮಾಡಿದರು. ಒಬ್ಬ ಅದನ್ನು ಪ್ರತಿಮೆಗೆ ಹಾಕಲು ಹೊರಟ.

ಅಷ್ಟರಲ್ಲಿ ಪೊಲೀಸರು ಬಂದರು. ಗುಂಡು ಹಾರಿಸಿದರು.

ಚಪ್ಪಲಿ ಹಾರ ಹಿಡಿದು ಹೊರಟ ವ್ಯಕ್ತಿಗೆ ಗುಂಡು ತಗುಲಿತು. ಅವನನ್ನು ಪ್ರಥಮ ಚಿಕಿತ್ಸೆಗಾಗಿ ಸರ್. ಗಂಗಾರಾಂ ಆಸ್ಪತ್ರೆಗೆ ಕರೆದೊಯ್ಯಲಾಯಿತು!

## ಫಿಫ್ಟಿ - ಫಿಫ್ಟಿ

ಒಬ್ಬನಿಗೆ ಬಿದ್ದಿದ್ದ ಮರದ ಪೆಟ್ಟಿಗೆಯೊಂದರ ಬಗ್ಗೆ ತುಂಬಾ ಆಸೆಯಾಯಿತು. ತುಂಬಾ ಭಾರವಿದ್ದ ಅದನ್ನು ದುರ್ಬಲನಾದ ಆತನಿಗೆ ಎತ್ತುವುದು ಹೋಗಲಿ, ಜರುಗಿಸುವುದು ಕೂಡಾ ಸಾಧ್ಯವಾಗಲಿಲ್ಲ. ದೋಚಲು ಉಪಯುಕ್ತವಾದದ್ದು ಏನೂ ಸಿಗದ ಇನ್ನೊಬ್ಬ, ಮೊದಲಿನವನನ್ನು ಕೇಳಿದ, ''ನಾನೇನಾದರೂ ನಿನಗೆ ಸಹಾಯ ಮಾಡಲೆ?''

ಮೊದಲಿನವ ಸಹಾಯ ಬೇಕೆಂದ ಕೂಡಲೆ ಇನ್ನೊಬ್ಬ ಕೈ ಜೋಡಿಸಿದ. ಪೆಟ್ಟಿಗೆಯನ್ನು ಎತ್ತಿಕೊಂಡ. ತುಂಬಾ ಭಾರವಿದ್ದ ಅದನ್ನು, ದುಡ್ಡಿನ ಆಸೆಯಿಂದ, ಕಷ್ಟಪಟ್ಟು ಹೊತ್ತು ಸುರಕ್ಷಿತ ಸ್ಥಳಕ್ಕೆ ಸೇರಿಸಲಾಯ್ತು. ಪೆಟ್ಟಿಗೆ ಹೊತ್ತಾತ ದುರ್ಬಲನನ್ನು ಕೇಳಿದ, ''ಇದರಲ್ಲಿ ನನ್ನ ಪಾಲೇನು?''

''ಕಾಲು ಭಾಗ''

''ಅದು ಸರಿಯಲ್ಲ, ತುಂಬಾ ಕಡಿಮೆಯಾಯಿತು''

''ಅದೇ ಹೆಚ್ಚು. ಪೆಟ್ಟಿಗೆ ಕಂಡು ಹಿಡಿದದ್ದು ನಾನು''

''ಸರಿ, ಆದರೆ ಹೊತ್ತವನು ನಾನು''

ಕೊನೆಗೆ 50-50 ಭಾಗ ಪಾಲುದಾರಿಕೆಗೆ ಇಬ್ಬರೂ ಒಪ್ಪಿದರು. ಪೆಟ್ಟಿಗೆಯ ಬಾಗಿಲು ತೆಗೆದರು. ಅದರೊಳಗಿನಿಂದ ಕತ್ತಿ ಹಿಡಿದು ಹೊರಬಂದ ವ್ಯಕ್ತಿ ಇಬ್ಬರನ್ನು ಸರಿಯಾಗಿ ನಾಲ್ಕು ತುಂಡು ಮಾಡಿ ಕಡಿದು, ಎಸೆದ.

## ಒಂದು ಎಚ್ಚರಿಕೆ

ದಂಗೆಕೋರರು ಯಜಮಾನನೊಟ್ಟಿಗೆ ಗುದ್ದಾಡಿ, ಹರಸಾಹಸ ಮಾಡಿ ಅವನನ್ನು ಮನೆಯಿಂದ ಹೊರಗೆಳೆದು ಹಾಕಿದರು. ಆತ ಎದ್ದುನಿಂತು, ಬಟ್ಟೆಯ ಮೇಲಿನ ಮಣ್ಣು ಕೊಡವಿಕೊಂಡು ಹೇಳಿದ, ''ನನ್ನನ್ನು ಬೇಕಿದ್ದರೆ ಕೊಲ್ಲಿ. ಆದರೆ ನಿಮ್ಮನ್ನು ಎಚ್ಚರಿಸುತ್ತಿದ್ದೇನೆ-ನನ್ನ ಹಣ ಮುಟ್ಟಬೇಡಿ. ಒಂದು ಪೈಸೆ ಕೂಡಾ ಮುಟ್ಟಕೂಡದು.''

## ಸೂಕ್ತ ಕ್ರಮ

ಆ ಪ್ರದೇಶವನ್ನು ದಾಳಿ ಮಾಡಿದಾಗ, ಅಲ್ಲಿದವರ
ಕೆಲವರು ಸತ್ತರು. ಉಳಿದವರು ಓಡಿಹೋದರು
ದಂಪತಿಗಳಿಬ್ಬರು ಮಾತ್ರ ತಮ್ಮ ಮನೆಯ ನೆಲಮಾಳಿಗೆಯ
ಅಡಗಿಕೊಂಡರು.

ಎರಡು ದಿನ, ಎರಡು ರಾತ್ರಿ, ಅವರು ಕೊಲೆಗಡುಕರಿಗಾ
ವ್ಯರ್ಥ ಕಾಯ್ದರು. ಇನ್ನೆರಡು ದಿನಗಳು ಕಳೆದವು. ಸಾವಿನ ಭಯ
ಕಡಿಮೆಯಾಯ್ತು. ಅನ್ನ, ನೀರಿಗಾಗಿ ತಹತ
ಪ್ರಾರಂಭವಾಯಿತು.

ಇನ್ನೂ ನಾಲ್ಕು ದಿನ ಕಳೆಯಿತು. ಅಷ್ಟು ಹೊತ್ತಿಗೆ ಅವರಿಗೆ
ಸಾವು ಅಥವಾ ಬದುಕು ಎರಡೂ ಅಮುಖ್ಯವಾಗಿಬಿಟ್ಟಿದ್ದವು
ಅವರು ಮರೆಯಿಂದ ಹೊರಬಂದರು.

ಗಂಡ ಹೊರಬಂದು ದುರ್ಬಲ ದನಿಯಲ್ಲಿ ಕೂಗಿದ
''ನಮ್ಮನ್ನು ಕೊಲ್ಲಿ. ನಾವು ನಿಮ್ಮ ವಶವಾಗಲು ಬಂದಿದ್ದೇವೆ.''

''ನಮ್ಮ ಧರ್ಮದಲ್ಲಿ ಕೊಲ್ಲುವುದು ನಿಷಿದ್ಧ'' ಎಂದ ಆ ಜ
ತಮ್ಮ ತಮ್ಮಲ್ಲೇ ಸಮಾಲೋಚಿಸಿದರು. ''ಸೂಕ್ತ ಕ್ರಮ''ಕ್ಕಾ
ಪಕ್ಕದ ಪ್ರದೇಶದ ಜನರ ವಶಕ್ಕೆ ದಂಪತಿಗಳನ್ನು ಒಪ್ಪಿಸಿದರು!

## ಜೆಲ್ಲಿ

ಮುಂಜಾವು ಅರಳುವ ಸಮಯದಲ್ಲಿ, ತಳ್ಳುಬಂಡಿಯ
ಐಸ್‌ಕ್ರೀಂ ಮಾರುತ್ತಿದ್ದವನ ಕೊಲೆ, ಪೆಟ್ರೋಲ್ ಪಂಪ್ ಬ
ಆಯಿತು. 7ರ ತನಕ ಆತನ ಶವ ರಸ್ತೆಯಲ್ಲೇ ಬಿದ್ದಿತ್ತು. ಕರಗುತ್ತಿ
ಮಂಜುಗೆಡ್ಡೆ, ಆತನ ಶರೀರದ ಮೇಲೆ ಹನಿಹನಿಯಾ
ಬೀಳುತ್ತಿತ್ತು. 7.15ಕ್ಕೆ ಪೊಲೀಸರು ಆತನ ಶವವನ
ಕೊಂಡೊಯ್ದರು. ರಸ್ತೆಯ ಮೇಲೆ ಮಂಜುಗೆಡ್ಡೆ ಹಾಗೂ ರ
ಹಾಗೆಯೇ ಉಳಿಯಿತು. ಆಗ ರಸ್ತೆಯ ಮೇಲೆ ಹಾದ
ಹೋಗುತ್ತಿದ್ದ ಟಾಂಗಾದಲ್ಲಿ ತನ್ನ ತಾಯಿಯೊಂದಿಗೆ ಕುಳಿತ
ಮಗು, ತಾಯಿಯ ಸೆರಗು ಎಳೆದು ಹೇಳಿತು, ''ನೋಡಮ್ಮಾ
ರಸ್ತೆಯ ಮೇಲೆ ಜೆಲ್ಲಿ ಹರಡಿದೆ.''

# ...ಡತನದ ವ್ರತ

ರಾಜಕಾರಣದ ಸೆಳೆತಕ್ಕೆ ಒಳಗಾಗಿ, ಅದರ ಸುಳಿಯಲ್ಲಿ ಇಳಿಯುತ್ತಿದ್ದಂತೆ, ನನ್ನನ್ನೇ ನಾನು ...ಳಿಕೊಂಡೆ. ಅನೈತಿಕತೆಯಿಂದಲೂ, ಅಸತ್ಯದಿಂದಲೂ ಹಾಗೂ ಲೋಭದಿಂದಲೂ ಲವಲೇಶವೂ ...ಷ್ಟನಾಗದಂತೆ ನನ್ನನ್ನು ಸಂರಕ್ಷಿಸಿಕೊಳ್ಳುವುದು ಹೇಗೆ? ಆ ಕ್ರಿಯೆ ಅಥವಾ ಪ್ರಕ್ರಿಯೆ, ವೈಯಕ್ತಿಕವಾಗಿ ...ನಗೆ, ಅತ್ಯಂತ ಪವಿತ್ರವೂ, ಸ್ವಾರಸ್ಯಪೂರ್ಣವೂ ಆಗಿದ್ದುದು ಹೌದಾದರೂ, ಇಲ್ಲಿ, ನಿಮ್ಮೆದುರು ಅದರ ...ಲ್ಲ ಸೂಕ್ಷ್ಮ ವಿವರಗಳನ್ನು ಪ್ರಸ್ತಾಪಿಸುವ ಅಗತ್ಯವೇನಿಲ್ಲ. ಆದರೆ ಇಷ್ಟು ಮಾತ್ರ ಹೇಳುತ್ತೇನೆ- ಇಂದಿಗೂ ...ನಗೆ ಪ್ರಸ್ಫುಟವಾಗಿ ನೆನಪಿರುವಂತೆ, ಪ್ರಾರಂಭದ ಘಟ್ಟದಲ್ಲಿ ನಾನು, ನನ್ನೊಂದಿಗೂ, ...ನ್ನಾಕೆಯೊಂದಿಗೂ ಹಾಗೂ ನನ್ನ ಮಕ್ಕಳೊಂದಿಗೂ ಬಲು ತೀವ್ರವಾಗಿ ಸೆಣಸಾಡಬೇಕಾಯಿತು. ...ದೆಲ್ಲದರ ನಡುವೆ, ಯಾವ ಜನ ಸಮುದಾಯದ ಮಧ್ಯೆ ವಿಧಿ ನನ್ನನ್ನು ಹುಟ್ಟಿಸಿತ್ತೋ, ಯಾರ ...ಂಕಷ್ಟಗಳನ್ನು ದಿನಂಪ್ರತಿ ನಾನು ಕಣ್ಣಾರೆ ಕಾಣುತ್ತಿದ್ದೆನೊ, ಅಂಥವರ ಸೇವೆಯಲ್ಲಿ ತೊಡಗಬೇಕೆಂದರೆ ...ನು, ಎಲ್ಲ ರೀತಿಯ ಸಂಪತ್ತನ್ನೂ, ಅನುಭೋಗವನ್ನೂ ತೊರೆಯುವುದು ಅತ್ಯವಶ್ಯಕ ಎಂಬ ವಿಚಾರ ...ನ್ನೊಳಗೆ ದೃಢವಾಗಿ ಬೆಳೆಯುತ್ತ ಬಂದಿತು.

ಇಂಥ ನಂಬಿಕೆ ಬಂದಾಕ್ಷಣವೆ, ನಾನು ಸರ್ವಸಂಪತ್ತನ್ನೂ ತ್ಯಜಿಸಿಬಿಟ್ಟೆ ಎಂದು ಹೇಳುವುದು ಸತ್ಯದ ...ಾತಾಗಲಾರದು. ಪ್ರಥಮ ಪ್ರಯತ್ನದ ಆ ದಿನಗಳು ಸಂಘರ್ಷದಿಂದಲೂ, ನೋವಿನಿಂದಲೂ ...ಂಬಿದ್ದವು. ಆದರೆ ಕಾಲ ಕಳೆದಂತೆ, ನನ್ನವೆಂದು ನಾನು ಪರಿಗಣಿಸಿದ್ದ ಇನ್ನೂ ಹಲವು ...ಸ್ತು-ವಿಷಯಗಳನ್ನೂ ನಾನು ತ್ಯಜಿಸಬೇಕು ಎಂಬುದು ಅರಿವಾಗತೊಡಗಿತು. ಹಾಗೂ ಅಂತಿಮವಾಗಿ, ...ಂಥವೆಲ್ಲ ಸ್ವತ್ತುಗಳನ್ನು ಬಿಟ್ಟು ಕೊಡುವುದೆ ಆತ್ಯಂತಿಕ ಹರ್ಷವನ್ನು ತಂದುಕೊಡತೊಡಗಿತು. ಆ ...ರುವಾಯ ಮಾತ್ರ, ಒಂದರ ಹಿಂದೆ ಇನ್ನೊಂದರಂತೆ, ಅಸಂಖ್ಯ ವಸ್ತು-ವಿಷಯಗಳು, ನನ್ನಿಂದ ...ಳಚಿಕೊಳ್ಳತೊಡಗಿದವು. ನನ್ನ ಹೆಗಲ ಮೇಲಿನ ದೊಡ್ಡ ಹೊರೆಯೊಂದು ಜಾರಿಹೋದಂತೆನಿಸಿ ಹೆಜ್ಜೆ ...ಗುರಾಯಿತು; ಸಹಜೀವಿಗಳ ಸೇವೆ ಹೆಚ್ಚು ಸುಲಭವೂ, ಹೆಚ್ಚು ಸಂತಸದಾಯಕವೂ ಆಗತೊಡಗಿತು; ...ಗ ಭೌತಿಕ ಪದಾರ್ಥಗಳನ್ನೊ, ಸ್ವಂತ ಆಸ್ತಿಯನ್ನೊ ಹೊಂದಿರುವುದೆ ದೊಡ್ಡ ಪೀಡೆಯಾಗತೊಡಗಿತು.



ಆ ದಿವ್ಯಹರ್ಷದ ಮೂಲಕಾರಣವನ್ನು ಅರಸರಸುತ್ತ, ಯಾವುದೇ ಒಂದು ವಸ್ತುವನ್ನು ಸ್ವಾಮ್ಯದ್ವೇಂದು ಹಿಡಿಮುಷ್ಟಿಯಲ್ಲಿ ಬಿಗಿದು ಹಿಡಿದುಕೊಂಡಲ್ಲಿ, ಅದನ್ನು ನಾನು, ಇಡೀ ಜಗತ್ತಿನ ವಿ ಹೋರಾಡುತ್ತ, ಹೆಣಗಾಡುತ್ತ, ನನ್ನ ಸ್ವಾಧೀನದಲ್ಲಿ ಇಟ್ಟುಕೊಳ್ಳಬೇಕಾಗುವುದು ಎಂಬು ಕಂಡುಕೊಂಡೆ. ಅಸಮಾನತೆಯ ನಮ್ಮ ಮಾನವ ಪರಿಸರದಲ್ಲಿ, ಅಂಥದೊಂದು ವಸ್ತುವಿನ ತಿ ಅಗತ್ಯವಿದ್ದೂ ಅದನ್ನು ಪಡೆಯಲಾಗದಂಥ ಅಸಹಾಯಕರು ಅಸಂಖ್ಯರಿದ್ದಾರೆ; ಅಂಥ ಅಭಾವತ್ರ ನನ್ನನ್ನು ಒಂಟಿಯಾಗಿ ಕಂಡಲ್ಲಿ, ನನ್ನ ಕೈಯ ಆ ವಸ್ತುವನ್ನು ನಾನು ಅವರೊಟ್ಟಿಗೆ ಹಂಚಿಕೊಳ್ಳಬೇಕೇ ಒತ್ತಾಯಿಸುವರು. ಅಷ್ಟೇ ಅಲ್ಲ, ಕೆಲವೊಮ್ಮೆ, ಅದನ್ನು ನನ್ನಿಂದ ಕಿತ್ತುಕೊಂಡು ತಮ್ಮದಾಗಿಸಿಕೊಳ್ಳ ಪ್ರಯತ್ನಿಸುವರು. ಅಂಥ ಸನ್ನಿವೇಶದಲ್ಲಿ ನಾನು, ಪ್ರಭುತ್ವವನ್ನೊ, ಪೊಲೀಸರ ಅವಲಂಬಿಸಬೇಕಾಗುವುದು ಎಂಬುದನ್ನು ಅರಿತುಕೊಂಡೆ. ಆಗ ನನಗೇ ನಾನು ಹೇಳಿಕೊಂಡೆ: ಅ ಅದನ್ನು ಬಯಸಿದಲ್ಲಿ, ಅದನ್ನು ನನ್ನಿಂದ ಸೆಳೆದುಕೊಂಡಲ್ಲಿ, ಅವರು ಯಾವುದೇ ದುರುದ್ದೇಶದಿಂದ ವರ್ತಿಸುತ್ತಿರಲಾರರು, ಬದಲಾಗಿ ಅವರ ಅಗತ್ಯ-ಅನಿವಾರ್ಯತೆಗಳು ನನ್ನದಕ್ಕಿಂತ ತೀವ್ರವಾದ್ದರಿ ಅವರು ಹಾಗೆ ನಡೆದುಕೊಳ್ಳುತ್ತಿರುವವರು.

ಅದರ ಹಿಂದೆಯೆ ನಾನು ಮತ್ತೆ ನನಗೆ ಹೇಳಿಕೊಂಡೆ: ಯಾವುದೇ ರೀತಿಯ ಸ್ವ ಆಸ್ತಿ-ವಸ್ತುಗಳನ್ನು ಹೊಂದಿರುವುದು ಒಂದು ಅಪರಾಧ: ಅಂಥದೆ ಆಸ್ತಿ-ವಸ್ತುಗಳನ್ನು ತಾ ಹೊಂದಿರಬೇಕು ಎಂದು ಬಯಸುವ ಇತರರ ಆಸೆ ಫಲಿಸಿದಾಗ ಮಾತ್ರ, ನಾನು ಆ ಆಸ್ತಿ-ವಸ್ತುಗ ಸ್ವಂತವಾಗಿ ಹೊಂದಬಹುದು. ಆದರೆ ನಮಗೆಲ್ಲ ಗೊತ್ತು- ಎಲ್ಲರ ಅನುಭವವೇದ್ಯ ಸಂಗತಿಯಿ ಹೀಗಾಗುವುದು ವಾಸ್ತವದಲ್ಲಿ ಅಸಾಧ್ಯವಾದುದು. ಹಾಗಾಗಿ, ಎಲ್ಲರೂ, ಸ್ವಂತ ಹೊಂದಬಹುದ ಒಂದೇ ಒಂದು ವಿಷಯವೆಂದರೆ, ಏನನ್ನೂ ಹೊಂದದಿರುವುದು; ಸರ್ವಸಾಮಾನ್ಯ ಸ್ವಾ ಸಿಗುವಂಥದು ಬಡತನವೆ ಹೊರತು ಸಿರಿತನವಲ್ಲ, ರಿಕ್ತತೆಯೆ ಹೊರತು ಶ್ರೀಮಂತಿಕೆಯಲ್ಲ. ಅಂ ನಾವೆಲ್ಲ ಸ್ವಯಂ ಪ್ರೇರಣೆಯಿಂದ ನಮ್ಮೆಲ್ಲ ಆಸ್ತಿ-ವಸ್ತುಗಳನ್ನು ಬಿಟ್ಟುಕೊಡಬೇಕು.

ಇಲ್ಲಿ ನೀವು ನನ್ನನ್ನು ಪ್ರಶ್ನಿಸಬಹುದು- 'ಬಯಸಿ ಪಡೆವ ಬಡತನದ ಬಗ್ಗೆ ಇಷ್ಟೆಲ್ಲ ಹೇಳುವ ನಿ ಅಷ್ಟೆಲ್ಲ ವಸ್ತುಗಳನ್ನು ಹೊಂದಿದ್ದೀಯಲ್ಲ?' ಎಂದು. ನಿಮ್ಮ ಕೊಂಕು ಮಾತೂ ಸರಿಯೆ. ಆದರೆ ಮಾತುಗಳನ್ನು ಅಕ್ಷರಶಃ ಅರ್ಥೈಸದೆ, ಅವುಗಳ ಹಿಂದಿನ ಸತ್ಯಸತ್ವವನ್ನು ಅರಿಯಲು ಪ್ರಯತ್ನಿಸಿ ಎ ನಾನು ನಿಮ್ಮಲ್ಲಿ ಪ್ರಾರ್ಥಿಸುತ್ತಿದ್ದೇನೆ. ಈ ದೇಹವನ್ನು ಹೊಂದಿರುವ ತನಕ, ಅದರ ಅಗತ್ಯಕ್ಕಾಗಿ ನ ವಸ್ತುವನ್ನು ಹೊಂದಿರಬೇಕು, ಸರಿ. ಆದರೆ ಆಸೆ ಕನಸಿದಷ್ಟೂ ಅತಿಶಯವನ್ನು ಬಿಟ್ಟು, ಅಗತ್ಯ ಕಾಣಿಸಿದ ಪರಿಮಿತ ಪ್ರಮಾಣವನ್ನು ಮಾತ್ರ ನಾವು ಹೊಂದಿರಬೇಕು. ಮೈಗೊಂದು ಗೂಡು ಬೇಕೇಬೇಕು ನ ಆದರೆ ಅದಕ್ಕೆ ಪುಟ್ಟದೊಂದು ಮನೆ ಸಾಕು, ಅನೇಕ ಅರಮನೆಗಳ ಅಗತ್ಯವಿಲ್ಲ. ಇದೇ ರೀತಿಯಾಗಿ ನ ಆಹಾರ, ಪಾನೀಯ ಇತ್ಯಾದಿಗಳ ವಿಚಾರದಲ್ಲಿಯೂ ಕೂಡ.

ಇಲ್ಲೊಂದು ದ್ವಂದ್ವ ಸಂಘರ್ಷವಿರುವುದನ್ನು ನೀವೆಲ್ಲ ಗಮನಿಸಿರಬಹುದು. ನಮ್ಮೆಲ್ಲರ ಇಂ ನಾಗರಿಕತೆಯ ಪರಿಕಲ್ಪನೆಗೂ, ಇಲ್ಲಿ ನಾನು ದಿವ್ಯಹರ್ಷದ್ದೂ, ಅತ್ಯಪೇಕ್ಷಣೀಯವಾದ್ದೂ ಎಂ ಪ್ರತಿಪಾದಿಸುತ್ತಿರುವ ಸ್ಥಿತಿಗೂ ದಿನನಿತ್ಯದಲ್ಲಿ ಸಂಘರ್ಷವಿದೆ. ಒಂದೆಡೆ, ನಮ್ಮ ಅಗತ್ಯ-ಆಸೆಗಳನ್ನು ಸ ವರ್ಧಿಸಿಕೊಳ್ಳುವುದೆ ಸಂಸ್ಕೃತಿಯ ಯಾ ನಾಗರಿಕತೆಯ ಮೂಲ ಬುನಾದಿ ಎಂಬ ನಂಬಿಕೆಯಿದೆ. ಒಂ ಕೋಣೆಯ ಮನೆಯನ್ನು ಹೊಂದಿದ್ದಲ್ಲಿ ಅದನ್ನು ಎರಡು ಕೋಣೆಯದಾಗಿ ವಿಸ್ತರಿಸಬೇಕು, ಇ ಮುಂದೆ ಮೂರಾಗಿ, ನಾಲ್ಕಾಗಿ..... ಹೀಗೆಯೆ ಹೆಚ್ಚು ದೊಡ್ಡ ಮನೆಯಾದಷ್ಟೂ ಹೆಚ್ಚು ಮನಸ್ಸಂತೋ

ಶ್ಚಿತ ಎಂಬ ತಿಳುವಳಿಕೆಯಿದು. ಅದೇ ರೀತಿ, ಅಂಥ ಮನೆಯನ್ನು ಹೆಚ್ಚು ಹೆಚ್ಚು ಸಾಮಗ್ರಿಗಳು
ಂಬಿದಷ್ಟೂ, ನಮ್ಮ ಮನವೂ ತುಂಬುತ್ತದೆ, ಹೆಚ್ಚು ವಸ್ತುಗಳಿದ್ದಷ್ಟೂ ನಾವು ಹೆಚ್ಚು ಸುಸಂಸ್ಕೃತರು
ನ್ನುತ್ತದೆ ಈ ವಾದ. ನಾಗರಿಕತೆಯ ಇಂಥ ಪರಿಕಲ್ಪನೆಯ ಸಮರ್ಥಕರು ವಾದಿಸುವಷ್ಟು
ಕಂದದೊಂದಿಗೆ ನಾನು ವಾದಿಸಲಾರೆ, ನನ್ನ ಮಾತುಗಳು ಹುಂಬತನದ್ದಾಗಿ ಕಾಣಬಹುದು, ನಿಜ.
ಆದರೆ, ನಾಗರಿಕತೆಯ ಈ ಕಲ್ಪನೆ, ನನಗೆ ಕಾಣುವುದೇ ಹೀಗೆ.

ಇದಕ್ಕೆ ವಿರುದ್ಧವಾಗಿ, ನಮ್ಮ ಒಡೆತನದ ವಸ್ತುಗಳನ್ನು ಕನಿಷ್ಠಗೊಳಿಸಿಕೊಳ್ಳುತ್ತ ಹೋದಷ್ಟೂ ನಾವು, ನಮ್ಮ ಅಗತ್ಯ-ಆಸೆಗಳನ್ನೂ ಕನಿಷ್ಠಗೊಳಿಸಿಕೊಳ್ಳುತ್ತೇವೆ. ಆ ಮೂಲಕ, ಹೆಚ್ಚು ಸ್ವಾವಲಂಬನೆಯನ್ನೂ, ಸಂತೃಪ್ತಿಯನ್ನೂ ಸಂಪಾದಿಸಿಕೊಳ್ಳುತ್ತೇವೆ. ಇಂಥ ಸಂತೃಪ್ತಿಯು ಪಾದಾರ್ಥಿಕ ಜೀವನದ ಬಯಕೆ-ಪೂರೈಕೆಗಳಿಂದ ಬರುವಂಥದ್ದಲ್ಲ. ಬದಲಾಗಿ, ಸಂಪೂರ್ಣ ಸಮರ್ಪಣಾಭಾವದಿಂದ, ನಮ್ಮ ಸಹಜೀವಿಗಳ ಸೇವೆಯಲ್ಲಿ ನಿರತರಾಗುವುದರ ಮೂಲಕ ಪ್ರಾಪ್ತವಾಗುವಂಥದ್ದು, ಜೊತೆಗೆಯೆ, ಅಂಥ ಸೇವೆಗೆ ನಮ್ಮನ್ನು ಇನ್ನೂ ಸ್ಫೂರ್ತಗೊಳಿಸುವಂಥದ್ದು. ಈ ಸೇವೆ ನಮ್ಮ ಆತ್ಮ ದೇಹ ಮನಸ್ಸುಗಳೆಲ್ಲವನ್ನೂ ಬೇಡುವಂಥದ್ದು. ಈ ದೇಹವೂ ನಮ್ಮ ಸ್ವಂತದ್ದಲ್ಲ.

ಸಾಧ್ಯತೆಯಿರುವಷ್ಟೂ ಆಳವಾಗಿ, ಸ್ವಯಂಪ್ರೇರಿತ ರಿಕ್ತತೆಯ ಈ ವ್ರತವನ್ನು ನಡೆಸಿದವರು (ಪರಿಪೂರ್ಣ ಸಿದ್ಧಿ ಎಂದಿಗೂ ಯಾರಿಗೂ ಸಾಧ್ಯವಿಲ್ಲ; ಆದರೆ ಆ ಪರಿಪೂರ್ಣತೆಗೆ ಸಾಧ್ಯವಿರುವಷ್ಟು ಸಮೀಪ ಸಾಗಿಹೋದವರು ಹಲವರಿದ್ದಾರೆ) ಪ್ರತ್ಯಕ್ಷಾನುಭವದ ಸತ್ಯವನ್ನು ಹೇಳುವುದುಂಟು- ಸರ್ವಸ್ವವನ್ನೂ ತೊರೆದಾಗಲೆ, ನಾವು ಸರ್ವಸ್ವಕ್ಕೂ ಒಡೆಯರಾಗುವುದು. ಅರ್ಥಾತ್, ಆಗ ಮಾತ್ರ ನಮಗೆ ವಾಸ್ತವಿಕವಾಗಿ ಅಗತ್ಯವಿರುವುದನ್ನು ನಾವು ನಿಜವಾಗಿಯೂ ಪಡೆದುಕೊಳ್ಳುತ್ತೇವೆ- ಅಂದರೆ ಎಲ್ಲವನ್ನೂ ಪಡೆದುಕೊಳ್ಳುತ್ತೇವೆ. ಆಗ ನಮಗೆ ಆಹಾರದ ಅಗತ್ಯವಿದ್ದರೆ, ಆಹಾರ ತಾನಾಗಿಯೆ ನಮಗೆ ಒದಗುವುದು.

ನೀವೆಲ್ಲ ಪ್ರಾರ್ಥನೆಯ ಶಕ್ತಿಯಲ್ಲಿ ನಂಬಿಕೆಯಿರುವವರು. ನಿಮ್ಮಂತಹ ಅನೇಕ ಕ್ರೈಸ್ತರ ಬಾಯಿಂದ ನಾನು ಸ್ವತಃ ಕೇಳಿದ್ದೇನೆ- ಅವರು ಆಹಾರಕ್ಕಾಗಿ ಪ್ರಾರ್ಥಿಸಿದಾಗ ಆಹಾರ ತಾನಾಗಿ ಅವರ ಬಳಿ ಬರುವುದು, ಮತ್ತೊಂದು ಅತ್ಯನಿವಾರ್ಯ ವಸ್ತುವಿಗಾಗಿ ಪ್ರಾರ್ಥಿಸಿದಾಗ ಅದೂ ತಾನಾಗಿ ಒದಗುವುದು. ಈ ಮಾತು ಸತ್ಯ. ಈಗ ಈ ಸತ್ಯದ ಹಾದಿಯಲ್ಲಿ ಇನ್ನೂ ಒಂದು ಹೆಜ್ಜೆ ಮುಂದೆ ಬನ್ನಿ ಎಂದು ನಾನು ನಿಮ್ಮಲ್ಲಿಕೇಳಿಕೊಳ್ಳುತ್ತಿದ್ದೇನೆ- ಪರಿಶುದ್ಧ ಮನಸ್ಸಿನಿಂದ ಹಾಗೂ ಸ್ವಯಂಪ್ರೇರಣೆಯಿಂದ ಸರ್ವಸ್ವವನ್ನೂ ಧಾರೆಯೆರೆದು ಕೊಟ್ಟವರೆ ಸರ್ವಸ್ವವನ್ನು ಕಂಡುಕೊಳ್ಳಿ ಎಂದು ನಿಮ್ಮಲ್ಲಿ ಬೇಡಿಕೊಳ್ಳುತ್ತಿದ್ದೇನೆ.

ಮತ್ತೊಮ್ಮೆ ಹೇಳುವುದಾದರೆ, 'ಅಗತ್ಯ' ಎಂಬುದನ್ನು ಅಕ್ಷರಶಃ ಅರ್ಥೈಸಬೇಡಿ. ನಾನು ಅನುಭವದಿಂದ ಅರಿತುಕೊಂಡಿರುವಂತೆ ಈ ಜಗತ್ತಿನ ಅತ್ಯಂತ ಶಿಸ್ತಿನ ಒಡೆಯನೆಂದರೆ ದೇವರು. ಆತ ನಮ್ಮನ್ನು ನಿರಂತರವಾಗಿ ಪರೀಕ್ಷಿಸುತ್ತಿರುವಂಥವನು. ನಮ್ಮ ನಿಷ್ಠೆ ಕುಸಿಯುವಂತಹ ಅಥವಾ ದೇಹ ಬಳಲಿಬೀಳುವಂತಹ ಸಂದರ್ಭಗಳಲ್ಲೆಲ್ಲ ಆತ ಖಂಡಿತವಾಗಿಯೂ ನಮಗೆ ಸಹಾಯ ನೀಡುತ್ತಾನೆ, ನಮ್ಮ ಆರ್ತ ಕರೆಗೆ ಎಂದಿಗೂ ಓಗೊಟ್ಟು ಬರುತ್ತಾನೆ. ಆದರೆ ಅದು ನಡೆಯುವುದು ನಾವು ಪ್ರಾಮಾಣಿಕರಾಗಿದ್ದಾಗ ಮಾತ್ರ. ಇದನ್ನು ನಾನು ಸ್ವಂತ ಅನುಭವಿಸಿ ತಿಳಿದಿದ್ದೇನೆ. ಕಡುನಂಬುಗೆಯಲ್ಲಿ ಕೂಗಿ ಕರೆದಾಗ ಆತ, ನನ್ನ ಕೈಹಿಡಿದು ನಡೆಯಿಸದ ಸಂದರ್ಭಗಳೇ ಇಲ್ಲ. ■

(ಗಾಂಧೀಜಿಯವರು ಲಂಡನ್ನಿನ ಗಿಲ್ಡ್‌ಹಾಲ್‌ನಲ್ಲಿ ನೀಡಿದ ಉಪನ್ಯಾಸದಿಂದ.
ಕನ್ನಡಕ್ಕೆ: ಜಸವಂತ ಜಾಧವ. ಆಕರ: ನೀನಾಸಂ 'ಮಾತುಕತೆ'.)



ಮೊಗಳ್ಳಿ ಗಣೇಶ್

# ದಿಬ್ಬವ ಕತ್ತಲಲ್ಲಿ ಇಳಿದು

## ದಿಕ್ಕಿಲ್ಲದ ಸಾಲುಗಳು

ಕೊರೆವ ವ್ಯಾಕುಲದ ಏಕಾಂತ ಹಾಸಿಗೆಯಲ್ಲಿ, ಬೇಸರದಿ ಅಂಗಾತ ಮಲಗಿ, ತೆರೆದುಕೊಂಡ ಆಕಾಶವನ್ನು, ಕಿಟಕಿಯ ಮೂಲಕ ಎಷ್ಟೋ ಹೊತ್ತಿನ ತನಕ ಹಾಗೇ ದಿಟ್ಟಿಸುತ್ತಿದ್ದ. ಹಾಗೆ ನೋಡುತ್ತಿದ್ದುದಕ್ಕೋ, ಯಾವುದಕ್ಕೋ ಕಣ್ಣುಗಳ ತುದಿಯಲ್ಲಿ ನೀರು ಬಂದು ನಿಂತು, ಜಾರಲೋ, ಬೇಡವೋ ಎಂಬಂತೆ, ಅಲ್ಲೇ ಕಾಲಾಂತರದಿಂದ ಅಂಟಿಕೊಂಡಂತೆ ತುಳುಕಾಡುತ್ತಿದ್ದವು. ಕಿಟಕಿಯಿಂದ ಬಿಸಿಲ ಕೋಲುಗಳು ನುಗ್ಗಿ ಬಂದಿದ್ದವು. ಇಡೀ ವಠಾರ, ಸೂರ್ಯದೇವರ ಕಣ್ಣಿಂದ, ಬೆಳ್ಳಂಬೆಳಕಲ್ಲಿ ಮುಳುಗಿತ್ತು. ಕಳೆದ ಹದಿನೈದು ದಿನಗಳಿಂದ ಯಾರೊಬ್ಬರನ್ನೂ ಮಾತನಾಡಿಸದೆ, ಎಲ್ಲೂ ಹೋಗದೆ, ಎಲ್ಲರಿಂದ ಒಂಟಿಯಾಗಿ, ಹುಚ್ಚು ಮನಸ್ಸಿಂದ ಕೊಠಡಿಯೊಳಗೇ ಬೇಯುತ್ತಿದ್ದ ನಾಗರಾಜನಿಗೆ, ಇಡೀ ವಠಾರ ಹೇಸಿಗೆ ಅನಿಸಿಬಿಟ್ಟಿತ್ತು. ಯಾವುದೋ ಪರದೇಶದಲ್ಲಿ, ತಬ್ಬಲಿಯಾಗಿ ಸಾಯುತ್ತಿದ್ದೇನೆಂಬ ಆತಂಕ ಅವನೊಳಗೆ ಹುತ್ತಗಟ್ಟಿತ್ತು. ವಠಾರದ ಜನರಾದರೋ, ಇವನನ್ನು ಕಂಡು ರೋಸಿಹೋಗಿ, ತಮ್ಮ ಎಲ್ಲೆಯಲ್ಲೇ ಅವನನ್ನು ಇರಗೊಡಬಾರದೆಂದು ತೀರ್ಮಾನಿಸಿದ್ದರು. ಅವರೆಲ್ಲ ಒಂದಾಗಿ, ಹಳ್ಳಿಯಲ್ಲಿದ್ದ ಅವನ ಅಪ್ಪನಿಗೆ ಪತ್ರ ಬರೆಸಿ, ನಿಮ್ಮ ಮಗನಿಗೆ ಹುಚ್ಚು ಹಿಡಿದಿದೆ. ದಯಮಾಡಿ ಬಂದು ಕರೆದುಕೊಂಡು ಹೋಗಿ. ಹೆಂಗಸರು ಮಕ್ಕಳಿರುವ ನಮ್ಮ ಸಂಸಾರಗಳ ಮಧ್ಯೆ ಇವನು ವಿಷದ ಮುಳ್ಳಿನಂತಾಗಿದ್ದಾನೆ. ಯಾವುದೇ ಸಾವು, ನೋವು ಆಗುವ ಮೊದಲು ನೀವು ನಿಮ್ಮ ಮಗನನ್ನು, ಬಂದು ಈ ಕೂಡಲೇ ಕರೆದುಕೊಂಡು ಹೋಗಬೇಕು ಎಂದು ಪ್ರಾರ್ಥಿಸುತ್ತೇವೆ. ನಿಮ್ಮ ಮಗನ ಜೀವ ಈಗ ನಿಮ್ಮ ಕೈಯಲ್ಲಿದೆ ಎಂದು ತಿಳಿಸಿದ್ದರು.

ಪತ್ರ ಓದಿಸಿಕೊಂಡು ತಿಳಿದ ಅವನ ಅಪ್ಪನಿಗೆ, ಹುಚ್ಚೇ ಹಿಡಿದಂತಾಗಿ, ಹಿಂದೆ ಮಗನಿಗೆ ಆಗಾಗ ಮೂರ್ಛೆ ರೋಗದಿಂದ ಆಗುತ್ತಿದ್ದ ಧಾವಂತವೆಲ್ಲ ನೆನಪಾಗಿ, ಈಗ ಮತ್ತೆ ಅದರಿಂದ ಏನಾದರೂ ಆಗಿರಬಹುದೆಂದು ಕಂಗಾಲಾದಳು. ನಾಗರಾಜನ ವರ್ತನೆ, ವಠಾರದವರಿಗೆ ವಿಚಿತ್ರ, ಹುಚ್ಚಾಟವಾಗಿ ಕಂಡಿದ್ದರಲ್ಲಿ ಅತಿಶಯವೇನೂ ಇರಲಿಲ್ಲ. ಅಹೋ ರಾತ್ರಿಯಲ್ಲಿ ಎದ್ದು ಕುಳಿತು ಒಬ್ಬನೇ ಅಳುವುದು, ಹಾಡುವುದು, ಕುಡಿದು ಬಂದು ಜೋರಾಗಿ ನಗುತ್ತಾ, ಕೇಕೆ ಹಾಕಿ ಯಾರ್ಯಾರನ್ನೋ ಬೈಯ್ಯುವುದು ಅನೇಕ ಹೆಂಗಸರಿಗೆ ಭೀತಿಯನ್ನುಂಟುಮಾಡಿತ್ತು. ಯಾರಾದರೂ ಬಂದು, ನಿನ್ನ ಸದ್ದು ನಿಲ್ಲಿಸು ಎಂದು ರೇಗಿದರೆ,



ಟೆರಾಕೋಟಾ ಶಿಲ್ಪ : ಜಾನ್ ದೇವರಾಜ್

ಅವರ ಮೇಲೆ ಬಿದ್ದು, ತಾನೇ ಮೈ ತುಂಬ ಹೊಡೆಸಿಕೊಂಡು, ಬಿಟ್ಟು ಬಿಡಿ, ನಾನು ಒಬ್ಬಂಟಿ ತಬ್ಬಲಿ, ಹೊಡೆಯ ಬೇಡಿ ಬಿಟ್ಟುಬಿಡೀ. ನಾನು ಈ ದೊಡ್ಡ ದೇಶದ, ಘನತೆವೆತ್ತ ನಾಡಿನ, ಏಕಾಂಗಿ ದುಃಖಿ ಎಂದು ವಿಚಿತ್ರವಾಗಿ ಕೂಗಿಕೊಳ್ಳುತ್ತಿದ್ದ. ಮತ್ತೆ ಬೆಳಿಗ್ಗೆ, ಹಸನಾಗಿ ಸ್ನಾನ ಮಾಡಿ, ಚಾದಂಗಡಿಯ ಪಳನಿಯಪ್ಪನ ಜೊತೆ ಎಂದೂ ಇಲ್ಲದಷ್ಟು ಹಾಯಾಗಿ ನಗಾಡಿ, ಮಾತಾಡಿ, ವಿನಾಕಾರಣ ವಿಪರೀತ ಬೆವರಿ, ಎಲ್ಲಿಗೋ ನಡೆಯುತ್ತಿದ್ದ. ಬಿರುಬೀಸಾಗಿ ಓಡುವಂತೆ ನಡೆದು, ಎಲ್ಲಿಗೋ ಹೋಗಿ, ಏನನ್ನೋ ನೆನೆದು, ತಾನು ಇಲ್ಲಿಗೆ ಯಾಕೆ ಬಂದೆ ಎಂದು ತಬ್ಬಿಬ್ಬಾಗಿ; ನೆನ್ನೆ ಇಲ್ಲಿಗೆ ಬಾ ಎಂದು ಯಾರೋ ಹೇಳಿದ್ದರಲ್ಲಾ... ಅವರ ಹೆಸರೇ ನೆನಪಿಗೆ ಬರುತ್ತಿಲ್ಲವಲ್ಲಾ... ಅಥವಾ ಕನಸಿನಲ್ಲಿ ಹಾಗೆ ಕಂಡದ್ದೋ ಏನೋ ಗೊತ್ತಾಗುವುದಿಲ್ಲವಲ್ಲಾ ಎಂದು, ಎಷ್ಟೋ ಹೊತ್ತಿನ ತನಕ ತಲೆಬಿಸಿ ಮಾಡಿಕೊಂಡು, ಆಮೇಲೆ ಯಾವುದೋ ಹಚ್ಚಹಸಿರಿನ ಪಾರ್ಕಿನ ಮರದ ಕೆಳಗೆ ಮಲಗಿದ್ದು, ಮುಚ್ಚಿದಂತೆ ಕಣ್ಣ ತೆರೆದು, ತೆರೆದಂತೆ ಕಣ್ಣ ಮುಚ್ಚಿ, ಏನೇನೋ ಮಣಮಣಿಸಿ ಅಲ್ಲಿಂದ ಎದ್ದು ಮತ್ತೆಲ್ಲಿಗೋ ಓಡಿ, ಹಿಂತಿರುಗಿ ಕೊಠಡಿಗೆ ಬರುವಷ್ಟರಲ್ಲಿ ಜರ್ಜರಿತನಾಗಿಬಿಡುತ್ತಿದ್ದ. ಅವನ ವಿಚಿತ್ರಗಳಿಗೆ ವಟಾರದಲ್ಲಿ ಲೆಕ್ಕವಿರಲಿಲ್ಲ. ಯಾರಾದರೂ ಬಾಗಿಲು ತಟ್ಟಿ ವಿಚಾರಿಸಿಕೊಳ್ಳಲು ಬಂದರೆ ಉರಿದುಹೋಗುತ್ತಿದ್ದ. ಒಮ್ಮೆ ಇಡೀ ವಟಾರವೇ ಬೆಚ್ಚುವಂತೆ ವರ್ತಿಸಿದ್ದ.

ಅದೊಂದು ಭಾನುವಾರ, ವಟಾರದ ಜನರೆಲ್ಲ ಅವರವರ ಪಾಡಿಗೆ ಹಾಡಿಕೊಳ್ಳುತ್ತಿರುವಾಗ, ಈತ ಭಯಂಕರವಾಗಿ ಕುಡಿದುಬಂದು, ಕರ್ಕಶವಾಗಿ ಮೊಳಗಿ, ತಾನು ಮನಸ್ಸು ಮಾಡಿದರೆ ಇಡೀ ವಟಾರವನ್ನೇ ಸುಟ್ಟು ಬೂದಿ ಮಾಡಿಬಿಡಬಲ್ಲೆ. ತನ್ನ ಸೊಂಟದಲ್ಲಿ ಕಾಲಾಂತರದ ಬಾಂಬುಗಳಿವೆ. ಒಂದು ಕ್ಷಣ, ಒಂದು ಕಿಡಿ ಅದಕ್ಕೆ ತಾಕಿದರೂ ಎಲ್ಲರೂ ಛಿದ್ರವಾಗಿ ಹೋಗುತ್ತೀರಿ... ಎಂದು ಕೂಗಾಡುತ್ತಾ, ತೂರಾಡುತ್ತಾ, ಎದುರಿಗೆ ಸಿಕ್ಕಿದ ಮಗುವೊಂದನ್ನು ಎತ್ತಿಕೊಂಡು, ಅದಕ್ಕೆ ಮುತ್ತಿಟ್ಟು, ಗಳಗಳ ಅತ್ತು, ಹೇ ಮಗೂ, ನಿನ್ನನ್ನು ನೋಡಿದರೆ ನನಗೆ ಸುಖ ಅನಿಸುತ್ತದೆ. ಹಾಗೇ ಇನ್ನೊಮ್ಮೆ ದಿಟ್ಟಿಸಿದರೆ ದುಃಖ ಎನಿಸುತ್ತದೆ. ಸಂತೋಷ ಯಾಕೆ ಗೊತ್ತಾ? ನಾನೂ ನಿನ್ನ ಹಾಗೆಯೇ ಮುಗ್ಧವಾಗಿ ಇದ್ದೆನಲ್ಲಾ ಎಂದು. ದುಃಖ ಯಾಕೆಂದರೆ, ನೀನೂ ನನ್ನ ಹಾಗೆ ದುಃಖಿಯಾಗ್ತೀಯಲ್ಲಾ ಎಂದು. ಈ ದುಷ್ಟ ಕೂಟದ, ವ್ಯಾಘ್ರ ದೇಶದ ಒಳಗೆ, ರಾಕ್ಷಸರ ಹಿಂಡು ದಂಡು ಬೇಟೆಯೊಳಗೆ, ನಿನ್ನ ಕೋಮಲವಾದ ಒಂದೊಂದೇ ರೆಕ್ಕೆ ಪುಕ್ಕಗಳನ್ನು ಕ್ರೂರ ಕೈಗಳು ಕಿತ್ತು ಕಿತ್ತು ಆಕಾಶಕ್ಕೆಸೆದು, ಪುಷ್ಕಳವಾಗಿ ಉಂಡು ತೇಗಿ ಮಲಗುವಾಗ, ನನ್ನ ಆತ್ಮದ ಜೀವ ಪಕ್ಷಿ ವಿಲವಿಲನೆ ಒದ್ದಾಡುತ್ತದೆ. ನಿನ್ನ ಹಡೆದ ಅಪ್ಪ ಅಪ್ಪಂದಿರ ಕಣ್ಣಲ್ಲಿ, ನಿನ್ನ ನಾಳಿನ ಕರಿನೆರಳ ಅಳಲು ಕಾಣಿಸುವುದೇ ಇಲ್ಲ. ಮನುಷ್ಯರ ಜೊತೆ ಮನುಷ್ಯನಾಗಿರುವುದಕ್ಕೆ ಅಸಹ್ಯವಾಗುತ್ತದೆ ನನಗೆ. ನೀವೆಲ್ಲ ಪಾಪಕ್ಕೆ ಹುಟ್ಟಿದವರು. ಹುಳುಕು ಕಾಳುಗಳ ದೇಶವಿದು. ನಾನೂ ನಿನ್ನಂತೆಯೇ ವ್ಯರ್ಥಕ್ಕೆ, ಶಾಪಕ್ಕೆ ಹುಟ್ಟಿದವನು... ಎಂದು ಅಮಲನ್ನು ತಡೆಯಲಾರದೆ, ಬಿದ್ದು, ಕಕ್ಕಿಕೊಂಡು, ಎಲ್ಲರನ್ನೂ ಕಣ್ಣಿಂದಲೇ ಇರಿದಿದ್ದ.

ಇದೆಲ್ಲ ನಡೆದ ನಂತರ, ಅವನ ಚರಿತ್ರೆಯನ್ನೇ ಕಗ್ಗತ್ತಲ ಮಸಿಗೆ ಅದ್ದಿದಂತಾಗಿತ್ತು. ಇವನ ಬಗ್ಗೆ ಕರುಣೆ, ಪ್ರೀತಿ ತೋರುತ್ತಿದ್ದ ಹುಡುಗಿ, ಪ್ರೇಮಕ್ಕೆ ಕೈ ಮುಗಿದು ಹೊರಟು ಹೋಗಿದ್ದಳು. ವಟಾರದ ಹೆಂಗಸರು, ಈ ಶನಿ ಎಲ್ಲಿಗಾದರೂ ತೊಲಗಲಿ ಎಂದು ಶಾಪ ಹಾಕುತ್ತಿದ್ದರು. ಅವನ ಬಗ್ಗೆ ಭೀತಿಯ ಕತೆಗಳನ್ನು ಕಟ್ಟಿ ಮಕ್ಕಳಿಗೆ ಹೇಳಿ, ಅವನು ಕಂಡ ಕೂಡಲೇ ಬಾಗಿಲು ಮುಚ್ಚಿಕೊಳ್ಳುತ್ತಿದ್ದರು. ಕೊಠಡಿಯ ಮಾಲೀಕ ಬಂದು, ರೂಂ ಖಾಲಿ ಮಾಡಲು ಒಂದು ವಾರದ ವಾಯಿದೆ ಕೊಟ್ಟು, ಇಲ್ಲಾ ಎಂದರೆ ಒದ್ದು ಹೊರ ಹಾಕಬೇಕಾಗುತ್ತದೆಂದು ಎಚ್ಚರಿಸಿ ಹೋಗಿದ್ದ. ಇದೆಲ್ಲ, ಇನ್ನಷ್ಟು ಗಾಬರಿ, ಕಳವಳ ಖಿನ್ನತೆ, ಆವೇಶಗಳನ್ನು ಅವನೊಳಗೆ ಬಲಿಸಿದ್ದವು. ಮುಂದೆ ಎಲ್ಲಿ ಹೋಗಬೇಕೆಂಬ ದಿಕ್ಕೇ ಇಲ್ಲದೆ ಅತೀವ ಅಸಹಾಯಕತೆಯಿಂದ, ಕಿಟಕಿಯ ಮೂಲಕ ತೆರೆದುಕೊಂಡ ನೀಲಾಕಾಶದಲ್ಲಿ ದಿಕ್ಕಿಲ್ಲದೆ ಅಲೆದಾಡುವ ಮೋಡದ ತುಣುಕುಗಳನ್ನೇ ಎಷ್ಟೋ ಹೊತ್ತಿನ ತನಕ ದಿಟ್ಟಿಸುತ್ತಲೇ ಇದ್ದ. ಎಲ್ಲರೂ ಸೇರಿ, ತನ್ನನ್ನು ಹಾಡಹಗಲೇ ಸೂರ್ಯ ಸಾಕ್ಷಿಯಾಗಿ ತುಂಡರಿಸಿ ಕೊಂದರೂ, ಅವನನ್ನು ಯಾಕೆ ಕೊಂದಿರೆಂದು ತನಗಾಗಿ ಕೇಳುವವರು ಯಾರೂ ಇಲ್ಲ ಇಲ್ಲಿ. ಹಸಿದ ಕತ್ತಿಯಲುಗಿನ ಮೇಲೆ ಇಲ್ಲಿ, ಎಷ್ಟಂತ ಹೊರಳಾಡಿ, ಚೀರಾಡಿ ನೆತ್ತರ ಶೃಂಗಾರದಲ್ಲಿ ಕನಸುಗಳ ಕಲಸಿ, ನೀಲಾಕಾಶದ ನಿಶಾನೆಯಲ್ಲಿ ರಂಗುಚೆಲ್ಲುವುದೆಂದು ಮತ್ತೆ ಮತ್ತೆ ಉದ್ವೇಗಗೊಂಡ. ನನಗೆ ವಿಪರೀತ ಹಸಿವಾಗುತ್ತಿದೆ; ಯಾರಾದರೂ ಏನನ್ನಾದರೂ ಒಂದಿಷ್ಟು ತಿನ್ನಲು ಕೊಡಿ ಎಂದು ಬೀದಿ ಮಧ್ಯ ಕೂಗಿಕೊಳ್ಳಬೇಕೆನಿಸಿದ್ದನ್ನು ತಡೆದು, ಮಮ್ಮಲ ಮರುಗಿದ. ಅವ್ವ ಸತ್ತಿದ್ದರೇ ಸರಿಯಿರುತ್ತಿತ್ತು. ತನ್ನವರೆಂಬುವರು ಆಗ ಯಾರೂ ಇರುತ್ತಿರಲಿಲ್ಲವೇನೋ ಎಂದು ಬರಲಾರದ ನಿದ್ದೆಗಾಗಿ ಕಾದ.

## ಗರ್ಭದ ಸಾಲುಗಳು



ವಟಾರದ ಜನ ಬಯಸಿದ್ದಂತೆಯೆ ಆಯಿತು. ಕೆಲವೇ ದಿನಗಳಲ್ಲಿ ನಾಗರಾಜನ ತಾಯಿ ಮಗನೆದುರು ಪ್ರತ್ಯಕ್ಷವಾದಳು. ಮಗನನ್ನು ಕಂಡು

ಗೋಳೋ ಎಂದು ಅತ್ತು ಕರೆದಳು. ಇನ್ನೊಂದು
ಕ್ಷಣವೂ; ಈ ಮಗನನ್ನು ಇಲ್ಲಿ ಬಿಟ್ಟಿರಬಾರದೆಂದು
ನಿರ್ಧರಿಸಿ, ಊರಿಗೆ ಹೊರಟುಹೋಗುವ ನಡೇ
ಎಂದು ದುಂಬಾಲು ಬಿದ್ದು, ಹಠ ಹಿಡಿದಳು.
ಈಗಿಂದೀಗಲೇ ಹೊರಡದಿದ್ದರೆ, ಈ ಮಹಡಿ
ಮೇಲಿಂದ ಕೆಳಕ್ಕೆ ಬಿದ್ದು ಸತ್ತು ಹೋಗುವೆನೆಂದು
ಹೆದರಿಸಿದಳು. ನಾಗರಾಜನಿಗೆ ಬೇರೆ ಯಾವ
ದಾರಿಯೂ ಇಲ್ಲದೆ, ಹಳ್ಳಿಗೆ ಹಿಂತಿರುಗುವ
ಮನಸ್ಸಿಲ್ಲದಿದ್ದರೂ, ತಾಯ ಕರುಳು ಅವನನ್ನು
ಬಿಗಿದು ಕಟ್ಟಿ ಕರೆದುಕೊಂಡು ಹೊರಟಿತು.

ನಾಗರಾಜನನ್ನು ಪೇಟೆಯಿಂದ ಕರೆತರಲು
ಅವನ ಅವ್ವ ಹೋಗಿದ್ದಾಳೆಂಬ ಸುದ್ದಿ, ಆಗಲೆ
ಊರಲೆಲ್ಲ ಹಬ್ಬಿ, ಸಂಜೆ ಹೊತ್ತಿಗೆ ಅದು
ಎಂತೆಂತದೋ ಕುತೂಹಲ ಕೆರಳಿಸಿ, ಹುಚ್ಚು
ಮಗನನ್ನು ಹೇಗೆ ಕರೆತಂದಳೋ ಎಂದು ಜನ
ಬಂದು ನೆರೆದಿದ್ದರು. ನಾಗರಾಜನ ಕಣ್ಣಿಗೆ ಅವರ
ಅನುಮಾನ ಬಡಿದು, ಸ್ವತಃ ಅವರೆಲ್ಲರೂ
ಹುಚ್ಚರಂತೆ ಇವನಿಗೆ ಕಂಡರು. ಪಡಸಾಲೆಯಲ್ಲಿ
ಕುಳಿತ ಇವನನ್ನೇ ತರಾವರಿಯಾಗಿ ನೋಡಿ,
ಹಲ್ಲು ಕಿಸಿದು, ಹಾವಭಾವಗಳಲ್ಲಿ ಮಾತನಾಡಿಸಿ
ಹುಚ್ಚು ವಾಸಿ ಆಗಿದೆಯೇ ಎಂದು ವಿಚಾರಿಸ
ತೊಡಗಿದರು. ಮೊದ ಮೊದಲು ನಾಗರಾಜ
ಇದನ್ನು ಸಹಿಸಿಕೊಂಡರೂ, ನಿತ್ಯವೂ ಒಂದಲ್ಲ
ಒಂದು ಬಗೆಯಾಗಿ ಜನರ ಇಂತಹ ಪ್ರಶ್ನೆಗಳಿಗೆ
ರೋಸಿಹೋಗಿ, ಅವರ ಕೂಡೆ ಯಾವುದೇ
ಮಾತನ್ನೂ ಆಡದೆ, ಅವರು ಕರೆದರೂ ತಿರುಗಿ
ನೋಡದೆ ಯಾರನ್ನೂ ಹತ್ತಿರ ಸೇರಿಸಿಕೊಳ್ಳದೆ,
ಒಂಟಿಯಾಗಿ ತಿರುಗಾಡುವುದರ ಬಗ್ಗೆ ಜನ,
ಹೊಸ ಕತೆಗಳನ್ನು ಜೇಡರ ಬಲೆಯಂತೆ ನೇಯ
ತೊಡಗಿದರು. ದಿನದಿಂದ ದಿನಕ್ಕೆ ತಾಳ್ಮೆಯೇ
ಒಡೆದುಹೋಯಿತು. ಪೇಟೆಯಿಂದ ತಪ್ಪಿಸಿ
ಕೊಂಡು ಇಲ್ಲಿಗೆ ಬಂದರೂ, ಇಲ್ಲೂ ಈ ಜನ
ತನ್ನನ್ನು ಬೇಟೆಯಾಡುತ್ತಿದ್ದಾರೆಂದು ಭಾವಿಸಿದ.
ಇವರಾರ ಸಹವಾಸವೂ ಬೇಡ ಎಂದು ತೋರೆ
ಸಾಲಿನ ಹಸಿರು ತಂಪಿನಲ್ಲಿ ಅಲೆಯುತ್ತಿದ್ದ.
ಒಮ್ಮೊಮ್ಮೆ ಊರ ಗುಡ್ಡದ ತುದಿ ಏರಿ, ಬಂಡೆಗಳ
ಮರೆಯಲ್ಲೋ, ಗವಿಯಲ್ಲೋ, ಅನಂತಕಾಲದ
ದುಃಖಿಯಂತೆ ಉಳಿದುಬಿಡುತ್ತಿದ್ದ. ಹಿಂದೆ,
ಅವನಿನ್ನೂ ಅವನ ತಾಯ ಹೊಟ್ಟೆಯಲ್ಲೇ
ನಾಳೆಯೋ ನಾಡಿದ್ದೋ ಹೊರಬರುವ
ದಿನಗಳಲ್ಲಿ, ಇದೇ ಗುಡ್ಡದ ಬಂಡೆಗಳ ಮರೆಯಲ್ಲಿ
ಅವನ ಅಪ್ಪನನ್ನು ತುಂಡು ತುಂಡು ಮಾಡಿ ಹದ್ದು
ಕಾಗೆಗಳಿಗೆ ಹಂಚಿದ್ದನ್ನು ಊರವರ ಬಾಯಲ್ಲಿ
ಕೇಳಿದ್ದ ನಾಗರಾಜನಿಗೆ, ಅಪ್ಪನ ದೇಹದ ರಕ್ತದ
ಕಲೆ ಇಲ್ಲಿ ಎಲ್ಲಿಯಾದರೂ ಯಾವ ಬಂಡೆ
ಗಾದರೂ ಅಂಟಿದೆಯೋ, ಆ ಅಪ್ಪನ ನೆತ್ತರ
ಚಿತ್ತಾರವನ್ನು ಈ ಕೈಗಳಿಂದ ಮುಟ್ಟಲು ಸಾಧ್ಯವೇ
ಎಂದು ಅನೇಕ ಬಾರಿ ಹುಡುಕಾಡಿದ್ದ. ಆಗ,
ಜಾತಿ ಮತ್ಸರದ ಕಲಹದಲ್ಲಿ ನಾಗರಾಜನ
ಅಪ್ಪನನ್ನು, ಊರವರನ್ನು ಹೆದರಿಸಲು ಹಾಗೆ
ಕೊಲೆ ಮಾಡಿದ್ದರಂತೆ. ತಂದೆಯ ಮುಖವನ್ನೇ
ಕಾಣದಿದ್ದ ನಾಗರಾಜ, ಆ ಬಂಡೆಗಳ ಮೇಲೆ
ಎಲ್ಲೋ ಅಂಟಿಕೊಂಡಿರಬಹುದಾದ ನೆತ್ತರಲ್ಲಿ
ಹುಡುಕಾಡುತ್ತಿದ್ದ. ಯಾವಾಗಲೂ, ಮುಳುಗುವ
ಸೂರ್ಯನ ಜೊತೆಯಲ್ಲೇ, ತಾನೂ ಮುಳುಗು
ತ್ತಿರುವೆನೆಂದುಕೊಳ್ಳುತ್ತಿದ್ದ. ಚಿಮಣಿ ಬುಡ್ಡಿ ಹಚ್ಚಿ,
ಮಗನ ದಾರಿ ಕಾಯುತ್ತಿದ್ದವಳಿಗೆ, ಆತ ಎಲ್ಲಿ ಆತ್ಮ
ಹತ್ಯೆ ಮಾಡಿಕೊಂಡನೊ ಎಂಬ ಆತಂಕವಾಗಿ,
ಕತ್ತಲಲ್ಲಿ ಗುಡ್ಡದ ತುದಿತನಕ ಹೋಗಿ, ಬಂಡೆಗಳಿ
ಗೆಲ್ಲ ತನ್ನ ಕರುಳ ಸಂಕಟ ಬಡಿಯುವಂತೆ ಮಗ
ನನ್ನು ಕೂಗಿಕೊಳ್ಳುತ್ತಿದ್ದಳು. ಕತ್ತಲಾಗಸದ ಅನಂತ
ಮೌನವನ್ನು, ಚೀತ್ಕಾರದ ಅಲೆಯಿಂದ ಕಲಕು
ವಂತೆ ಮಾಡುತ್ತಿದ್ದಳು.

ದಿನದಿಂದ ದಿನಕ್ಕೆ ತನ್ನ ಮಗ ಕರಗಿ ಹೋಗು
ತ್ತಿದ್ದಾನೆಂದು ಈರವ್ವನಿಗೆ ಕಾಡತೊಡಗಿ,
ಯಾವತ್ತಿನಂತೆಯೇ, ದೇವರ ಬಳಿ ಮಗನ ಬಗ್ಗೆ
ಕೇಳಿದಳು. ದೇವರು, ಗುಬ್ಬಿಯಂತಹ ಅವಳ
ಮೇಲೆ ಕಿಡಿಕಾರಿ, ಮಗಳೇ, ನಿನ್ನ ಮಗ ನನ್ನ

ದಾರಿಗೆ ಅಡ್ಡ ಬರುತ್ತಿದ್ದಾನೆ. ಗುಡ್ಡದ ಮೇಲೆ ನನ್ನ
ಸಂಚಾರಕ್ಕೆ ಅಡ್ಡಿಯಾಗುತ್ತಿದ್ದಾನೆ. ನನ್ನ ಮೇಲೇ
ಕಣ್ಣಿಡುವಷ್ಟು ದೊಡ್ಡವನೇನು ನಿನ್ನ ಮಗ? ನನ್ನ
ಕಾರುಬಾರುಗಳಿಗೆ ಅಡ್ಡ ಬಂದ ಯಾರನ್ನೂ
ನಾನು ಉಳಿಸಿಲ್ಲ. ಹಿಂದೆ ನಿನ್ನ ಗಂಡನ ಗತಿ
ಏನಾಯ್ತೆಂದು ಮರೆತುಬಿಟ್ಟೆಯಾ ಮಗಳೇ? ನಿನ್ನ
ಮಗನಿಗೆ, ನನ್ನ ಶಕ್ತಿ ಎಷ್ಟು ಅಂತಾ ಗೊತ್ತಿಲ್ಲ.
ಹುಡುಗು ಬುದ್ಧಿ, ಏನೋ ತಪ್ಪು ಮಾಡಿ
ದ್ದಾನೆಂದು ಕರುಣೆ ತೋರಿ ಬಿಟ್ಟಿದ್ದೇನೆ. ಇಲ್ಲದಿ
ದ್ದರೆ, ಅಲ್ಲೇ, ಆ ದಿನ ನಡುರಾತ್ರಿಯ ಕತ್ತಲ
ಮಡುವಲ್ಲೇ, ನಿನ್ನ ಮಗ ರಕ್ತಕಾರಿ ಉರುಳಿ
ಬೀಳುತ್ತಿದ್ದ. ಇದು ಕೊನೆಯ ಬಾರಿಗೆ ನಿನಗೆ
ಹೇಳುತ್ತಿದ್ದೇನೆ. ನಿನ್ನ ಮಗನ ದಾರಿಯನ್ನು ನೀನೇ
ಬದಲಿಸಿ, ನನ್ನ ಭಯಭಕ್ತಿಯಲ್ಲಿರುವ ಹಾಗೆ
ಮಾಡು. ನನ್ನ ಬಳಿ ಬಂದು, ನನಗೆ ಹರಕೆಯ
ಮುಡಿ ಒಪ್ಪಿಸಿ, ನನ್ನ ಅಂಗಳದ ಕಸಗುಡಿಸಿ,
ಯಾವುದಕ್ಕೂ ತಲೆಹಾಕದಂತೆ ಇದ್ದುಬಿಟ್ಟರೆ ಸರಿ.
ಇಲ್ಲದಿದ್ದರೆ, ಈ ಅಮವಾಸ್ಯೆಯ ದಿನ, ನಿನ್ನ ಮಗನ
ರಕ್ತವನ್ನು, ಅದೇ ಗುಡ್ಡದ ಬಂಡೆಗಳ ಮೇಲೆ
ಚೆಲ್ಲಾಡುವಂತೆ ಮಾಡುತ್ತೇನೆ, ಎಂದು ಹೂಂಕರಿಸಿತ್ತು.

ಈರವ್ವನ ಕರುಳ ಬಳ್ಳಿಗೆ ಯಾರೋ ಅಂಕುಶ
ವಿಟ್ಟು ತಿವಿದು, ಎಳೆದಂತಾಯಿತು. ಮನೆಗೆ
ಬಂದು, ಮಗನ ಮುಂದೆ, ಅಂಗಲಾಚಿ ಬೇಡು
ವಂತೆ, 'ಅಪ್ಪಾ, ಮಗನೇ, ನನಗಿರುವ ಏಕೈಕ
ಆಸರೆಯೇ, ನನ್ನ ಬದುಕಿನ ದೀಪವೇ, ಯಾವಾ
ಗಲೂ ಆರಿಹೋಗುವುದನ್ನೇ ಯಾಕೆ ಬಯಸು
ತ್ತೀಯೆ ನೀನು. ಆ ಗುಡ್ಡದ ಸಂಚಾರವನ್ನು ಬಿಟ್ಟು
ಬಿಡು. ಆ ಗುಡ್ಡ ಕರಿನಾಗರಗಳ ಹುತ್ತ ಮಗನೇ,
ಅದರೊಳಗೆ ಕೈಯಿಟ್ಟು, ನಾಲಿಗೆಯಿಟ್ಟು ವಿಷವನ್ನು
ಪರೀಕ್ಷಿಸಬೇಡ. ದೇವರು ಹೇಳಿದಂತೆ ನಡ್ಕೊ.
ನಮ್ಮ ಪಾಲಿಗೆ ದೇವರಾದರೂ ಇರಬೇಡ
ವೇನೋ ಮಗನೆ? ನಿನ್ನನ್ನು, ಹೆತ್ತವಳಾಗಿ, ಒಡಲ
ಸಂಕಟದ ಪ್ರಾರ್ಥನೆಯಾಗಿ ಕೇಳಿಕೊಳ್ಳುತ್ತೇನೆ
ಮಗನೇ, ದೇವರನ್ನು ಎದಿರುಹಾಕಿಕೊಳ್ಳಬೇಡ'
ಎಂದು ವಿನಂತಿಸಿ, ದೇವರ ಹರಕೆಯನ್ನು ನಾಳೆಯೇ
ಒಪ್ಪಿಸಿ, ಅದರಂತೆ ನಡೆದುಕೋ ಎಂದು ಬಗೆ
ಬಗೆಯಾಗಿ ಬೇಡಿಕೊಂಡಳು. ನಾಗರಾಜನ
ಮನಸ್ಸು, ಕರಗುವ ಬದಲು, ಉದ್ವಿಗ್ನತೆಯಿಂದ
ಉರಿದು, ಆ ದೇವರನ್ನೇ ಧಿಕ್ಕರಿಸಿದ. ನಿನ್ನ
ತಲೆಯೊಳಗೆ ಅಡಗಿರುವ ದೇವರಂತಹ ಹೇಡಿ,
ಈ ಜಗತ್ತಿನಲ್ಲಿ ಬೇರೆ ಯಾರೂ ಇಲ್ಲ. ನಿನ್ನ
ದೇವರನ್ನು ಸಾವಿರ ಬಾರಿಯಾದರೂ ಕೊಲ್ಲ
ಬೇಕೆಂದು ಕನಸು ಕಾಣುವವನು ನಾನು. ನನ್ನ
ಬಗ್ಗೆ ಚೆಂದದ ಕನಸು ಕಟ್ಟಬೇಡ. ನಿನ್ನ ದೇವರು,
ನಿನ್ನ ಈ ಊರು, ಈ ಜನ, ಈ ಬೀದಿ, ಈ
ಅಂಗಳ, ಈ ಓಣಿ, ಈ ದಾರಿ, ಈ ನರಕ, ಈ
ಕೂಪ, ಈ ಸುಳ್ಳು, ಈ ವಂಚನೆ, ಈ ಹೇಸಿಗೆ, ಈ
ಸಂಚು, ಈ ಕ್ರೂರ ವಿಕಾರ ಮುಖಗಳು,
ಅವುಗಳ ತಲೆಗಳು, ಎಲ್ಲ, ಎಲ್ಲವೂ ಸಾಕಾಗಿ
ಹೋಗಿವೆ ನನಗೆ. ಎಲ್ಲವೂ ಬೇಸರದಿ ಬಣಗುಡು
ತ್ತವೆ ಇಲ್ಲಿ. ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು
ಅವ್ವಾ. ನಿನ್ನ ದೇವರ ಮಾತುಗಳು ನಿನಗೆ
ಅರ್ಥವಾಗುವುದಿಲ್ಲ. ಅರ್ಥಪಡಿಸುವುದಕ್ಕೂ
ಆಗುವುದಿಲ್ಲ. ನಿನ್ನ ದೇವರ, ಆ ಪೂಜಾರಿಯ,
ಹರಕೆಯ ಸಂಚು ಕಾಲಾಂತರದ್ದು. ನನ್ನ ದಾರಿಗೆ
ದೇವರೇ ಅಡ್ಡ ಬಂದರೂ, ನಾನು ಸುಮ್ಮನೆ
ಬಿಡುವವನಲ್ಲ ಎಂದು ನಿದ್ದೆಯಲ್ಲೇ ಮಾತನಾಡಿ
ದಂತೆ ಅವ್ವನ ಜೊತೆ ಗೊಣಗಾಡಿ, ನಡು
ರಾತ್ರಿಯ ನಿಶ್ಶಬ್ದ ತಣ್ಣನೆಯ, ತಂಗಾಳಿಯಲ್ಲಿ
ಎದ್ದು ಕುಳಿತ. ಅನಾದಿಕಾಲದ ದಣಿವನ್ನೆಲ್ಲ
ತುಂಬಿಕೊಂಡು, ಒಂದು ಕಣ್ಣಲ್ಲಿ ಕನಸು ಕಾಣುತ್ತಾ,
ಇನ್ನೊಂದು ಕಣ್ಣಲ್ಲಿ ಆ ದಣಿವಾರಿಸಿಕೊಳ್ಳುತ್ತಾ,
ತನ್ನ ಪೂರ್ವಿಕರ ಬಳಿ ಮಗನನ್ನು ಸರಿದಾರಿಗೆ ತನ್ನಿ
ಎಂಬಂತೆ, ಅವನ ತಾಯಿ ನಿದ್ದೆ ಮಾಡುತ್ತಿದ್ದಳು.

ಕಳೆದು ಹೋಗಲೆಂದೇ ಹುಟ್ಟುವ ದಿನಗಳು,
ಕಾಲದ ಜೊತೆ ಕರಗಿಹೋಗುತ್ತಿದ್ದವು. ಯಾಕೋ
ಗುಡ್ಡದ ಮರೆಯಲ್ಲಿ, ವಿಚಿತ್ರ ಭೀಭತ್ಸ ವಾಸನೆ
ಗಳು ನಾಗರಾಜನ ಮೂಗಿಗೆ ಬಡಿಯತೊಡ

ಗಿದವು. ಅಲ್ಲಿ ಏನೋ ನಿಗೂಢವಾದದ್ದು ನಡೆಯುತ್ತಿದೆ ಎಂಬ ಅನುಮಾನದಿಂದ, ಮತ್ತೆ ಮತ್ತೆ ಗುಡ್ಡದಲ್ಲಿ ಅವನ ಸುತ್ತಾಟ ಜಾಸ್ತಿ ಆಯಿತು. ಇದ್ದಕ್ಕಿದ್ದಂತೆ ಒಂದು ದಿನ, ಪೂಜಾರಪ್ಪ, ನೇರ ಮನೆಗೆ ಬಂದು, ವಾಲಾಡುತ್ತ ನಿಂತ. ಈರವ್ವ, ಬೆಚ್ಚಿ, ಭಕ್ತಿಯಿಂದ ನಡುಗಿ, ಧೈನ್ಯದಿಂದ ದೇವರ ಮುಂದೆ ಮಂಡಿಯೂರಿ ಕುಳಿತು, 'ಕ್ಷಮಿಸು, ನನ್ನ ದೊರೆಯೇ, ತಂದೆಯೇ, ನನ್ನ ಗತಿ ಮರೆಯೇ, ನನ್ನ ಮಗನ ತಪ್ಪನ್ನು ಹೊಟ್ಟೆಗೆ ಹಾಕಿಕೋ, ಈ ಬಡಪಾಯಿಗಳನ್ನು ರಕ್ಷಿಸು' ಎಂದು ತಲೆಬಾಗಿ ದೀನಳಾದಳು. ಪೂಜಾರಪ್ಪ, ಆವೇಶದಿಂದ ಉರಿಯುತ್ತ, ಹಲ್ಲು ಕಡಿಯುತ್ತ, 'ಅಹಹಾ! ರುದ್ರಾ' ಎಂದು ಉನ್ಮತ್ತನಾಗಿ, ಅವಳ ಬೆನ್ನ ಮೇಲೆ ಗುದ್ದಿ, ತುಳಿದು, ತಲೆ ಮುಡಿ ಹಿಡಿದು, ರಭಸವಾಗಿ ಮೇಲೆತ್ತಿ ಸುತ್ತಿ, ನೆಲಕ್ಕೆ ಎಸೆದ. ಅದಷ್ಟಕ್ಕೇ ಅವಳ ಬಟ್ಟೆಗಳೆಲ್ಲ ಅಸ್ತವ್ಯಸ್ತವಾಗಿ, ದೇವರ ಮಹಿಮೆ ವಿಜೃಂಭಿಸಿತು. ಎಲ್ಲೋ ಮರೆಯಲ್ಲಿ ಉಳಿಸಿಕೊಂಡಿದ್ದ ಅವಳ ದೇಹದ ಕಸುವು, ದೇವರ ಮುಂದೆ, ಅಸಹಾಯಕತೆಯಿಂದ ಮುಚ್ಚಿಕೊಳ್ಳಲು ತಡಕಾಡಿತು. ಪೂಜಾರಪ್ಪ, ಅವಳ ದೇಹವನ್ನು ಎರಡೂ ಕೈಗಳಿಂದ ಎತ್ತಿಕೊಂಡು, ಆಲಂಗಿಸಿದಂತೆ ಮಾಡಿ, ಸಿಟ್ಟಿನಿಂದ ಅವಳ ಮೈಯನ್ನೆಲ್ಲ ತಟ್ಟಿತು. ವಿಧವೆಯಾಗಿ, ಹೇಗೋ ಒಂಟಿಯಾಗಿ ಬದುಕುಳಿದಿದ್ದ ಅವಳ ಕಾಯವನ್ನು, ದೇವರೇ ಬೆತ್ತಲು ಮಾಡಿದಂತಿತ್ತು. ನಾಗರಾಜ ಗುಡ್ಡದಿಂದ ಹಿಂತಿರುಗಿ ಬಂದಿದ್ದ. ಅಷ್ಟು ಹೊತ್ತಿಗೆಲ್ಲ, ಹೇಗೋ ಈರವ್ವ ಬಿಡಿಸಿಕೊಂಡಿದ್ದಳು. ದೇವರನ್ನು ಮೈದುಂಬಿಸಿಕೊಂಡಿದ್ದ ಪೂಜಾರಪ್ಪ, ಉದ್ವೇಗದಿಂದ, ಉನ್ಮಾದದಿಂದ ತೂಗಾಡುತ್ತಿದ್ದ. ನಾಗರಾಜನನ್ನು ಕಂಡಕೂಡಲೇ, ಒಳಗೆ ಬೆಚ್ಚಿದರೂ, ತೋರಗೊಡದೆ, ಮತ್ತಷ್ಟು ದೇವರ ಮಹಿಮೆಯನ್ನು ಆರ್ಭಟಿಸುತ್ತಾ ಅವನ ಮೇಲೆ ಬಿದ್ದು, ಹೆದರಿಸಲು ನೋಡಿತು. ನಾಗರಾಜನ ರಕ್ತ



ಹೊಸನೂರ್

ಕುದಿಯುತ್ತಿತ್ತು. ಪೂಜಾರಪ್ಪನ ನೆತ್ತರು ಹೀರಿ, ಅವನ ಜೊತೆಯಲ್ಲೇ ಅವನ ದೇವರನ್ನೂ ತುಂಡರಿಸಬೇಕೆಂಬ ಹುಚ್ಚು ಹಿಡಿಯಿತು. ಅವನ ಅವ್ವ, ಮಗನನ್ನು ಹಿಡಿದುಕೊಳ್ಳಲು ನುಗ್ಗುವ ಹೊತ್ತಿಗಾಗಲೇ, ಪೂಜಾರಪ್ಪನ ಮೇಲೆ ನೆಗೆದು, ಕೆಳಕ್ಕೆ ಕೆಡವಿಕೊಂಡು, ಸಿಕ್ಕಿದ ಕಡೆಯಲ್ಲೆಲ್ಲ ಅವನ ಮೈಯನ್ನು ಅಗಿದು, ರಕ್ತ ಹರಿಸತೊಡಗಿದ. ಪೂಜಾರಪ್ಪ ಒಡತೊಡಗಿದ. ಕೇಕೆ ಹಾಕುತ್ತ ದೇವಸ್ಥಾನಕ್ಕೆ ಹಾರಿಬಂದು, ಮತ್ತೊಮ್ಮೆ ಪೂತ್ಕರಿಸಿದಂತೆ ಗುಡುಗಿದ. ಹಾಗೆ ಗುಡುಗಿದ ಕೂಡಲೇ, ದೇವರು ಉಗ್ರವಾಗಿ ಮೈದುಂಬಿ ಬಂದಿದೆ ಎಂದು ಜನರೆಲ್ಲ ಒಮ್ಮೆಗೇ ಬಂದು ನೆರೆಯುತ್ತಿದ್ದರು. ಈಗಲೂ ಹಾಗೆಯೇ ಆಯಿತು.

ಕೇರಿಯ ಮೂಲೆ ಮೂಲೆಯಲ್ಲಿದ್ದವರೆಲ್ಲ ಜಮಾಯಿಸಿದರು. ಏನೋ ಅನಾಹುತವಾಗಿ, ದೇವರು ಸಿಟ್ಟುಗೊಂಡಿದೆಯೆಂದು ಜನ ಕಂಗಾಲಾದರು. ನೋಡನೋಡುತ್ತಿರುವಂತೆಯೇ, ಅವರ ಎದಿರೇ, ನಾಗರಾಜ, ಪೂಜಾರಪ್ಪನನ್ನು ಬಲವಾಗಿ ಗುದ್ದಿ, ಕೆಳಕ್ಕೆ ಕೆಡವಿಕೊಂಡು, ತುಳಿಯತೊಡಗಿದ. ಹೇ, ಅವನನ್ನು ತಡೆಯಿರೀ, ಹಿಡಿಯಿರೀ, ದೇವರ ಮೇಲೇ ಕೈ ಮಾಡಿ ನಾಶವಾಗಿ ಹೋಗುತ್ತಿದ್ದಾನೆ, ಎಂದು ಯಾರೋ ಕೂಗಿದರು. ಮತ್ತಾರೋ, ಈ ದರಿದ್ರ ನಾಯಿ ಬಂದು, ನಮ್ಮ ಕೇರಿಯ ದೇವರನ್ನೇ ಹೊಡೆಯುವಷ್ಟು ಶಕ್ತಿವಂತನಾಗಿಬಿಟ್ಟನೇನು; ಈ ಕುನ್ನಿಗೆ ದೇವರ ಮಹಿಮೆ ಗೊತ್ತಿಲ್ಲ. ಅವನು ರಕ್ತಕಾರಿಕೊಂಡು ಈ ಕ್ಷಣದಲ್ಲೇ ಬಿದ್ದು ಸಾಯುತ್ತಾನೆ. ಸಾಯಲಿ ಬಿಟ್ಟುಬಿಡಿ ಎನ್ನುತ್ತಾ ತಡೆದರು. ನಾಗರಾಜನೂ, ಅವರ ದೇವರೂ, ದೇವಾಲಯದ ಅಂಗಳದಲ್ಲಿ ಮಲ್ಲಯುದ್ಧಕ್ಕೆ ಬಿದ್ದರು. ಗುಡಿಯ ಹಜಾರದಲ್ಲಿ, ಯಾರೋ ಹರಕೆಯವರು ಹಚ್ಚಿದ್ದ ದೊಡ್ಡ ಪಂಜು, ಕೆಂಬಣ್ಣದಿಂದ ಉರಿಯುತ್ತ, ಅಲ್ಲಿದ್ದ ಕತ್ತಲನ್ನೆಲ್ಲ ಸಾದ್ಯಂತವಾಗಿ ದೂರತಳ್ಳಲು ಬುಸುಗುಡುತ್ತಿತ್ತು.

ದೇವರ ಜಗಳವನ್ನು ದೇವರೇ ನೋಡಿಕೊಳ್ಳುತ್ತದೆ ಬಿಡೀ. ಇದರ ವರ್ತಮಾನ ಹೇಗಾಯ್ತೆಂದು ಜನ ಮುಂದೆ ತಿಳಿಯಲಿ. ಬಿಟ್ಟುಬಿಡಿ. ಈತನಿಗೆ ದೇವರೇ ಸರಿಯಾದ ಶಿಕ್ಷೆಯನ್ನು ಕೊಡಲಿ, ಎನ್ನುತ್ತ ಜನ ಒಂದೆಡೆ ನಿಂತರು. ಅವರಾರಿಗೂ, ದೇವರನ್ನು ಜಗಳದಿಂದ ಬಿಡಿಸುವ ಮನಸ್ಸಿರಲಿಲ್ಲವೋ, ಧೈರ್ಯ ಇರಲಿಲ್ಲವೋ ಗೊತ್ತಾಗಲಿಲ್ಲ. ಹಳಕಾಲದ ಆ ಮಂದಿಗೆ, ಇಂತಹ ವಿಚಿತ್ರ ಪ್ರಸಂಗದಲ್ಲಿ ಕೈಕಟ್ಟದಂತಾಯಿತು. ಪೂಜಾರಪ್ಪ ಹೂಂಕರಿಸಿ, ನಾಗರಾಜನ ಕುತ್ತಿಗೆಯನ್ನು ಮುರಿಯುವಂತೆ ಎರಡೂ ಕೈಗಳಿಂದ ಬಲವಾಗಿ ಅಮುಮಿ ಹಿಡಿದು, ನುಲಿಯುತ್ತ, ಹಿಸುಕುತ್ತ, ಬಾಯಿತುಂಬ ರಕ್ತ ಕಾರುತ್ತಿದ್ದ. ಇದು ನನ್ನ ಬಲಿ, ಈ ಬಲಿಯನ್ನ ಮುಗಿಸದೇ ಬಿಡುವುದಿಲ್ಲ ಎಂದು ಪೂಜಾರಪ್ಪ ಕೂಗಿದ ಕೂಡಲೆ, ಜನರೆಲ್ಲ ಅತ್ತಿತ್ತ ಚದುರಿ ನಿಂತು, ಅತೀವ ಭಯದಿಂದ ನಡುಗಿ, ಕೈ ಮುಗಿಯತೊಡಗಿದರು. ನಾಗರಾಜ, ಜೀವ ಹೋದಂತೆ ಆರ್ತಸ್ವರದಿಂದ ಚೀತ್ಕಾರ ಮಾಡುತ್ತಿದ್ದ. ಅವನ ತೊಡೆಯ ಮಾಂಸ ಖಂಡವನ್ನೇ ಅಗಿದು ಕಿತ್ತು, 'ಅಹಹಾ ರುದ್ರಾ' ಎಂದು ಆವೇಶದಿಂದ ಪೂಜಾರಪ್ಪ ಮೊಳಗಿದ. ಕಂದು ಬಣ್ಣದ ಪಂಜಿನ ಬೆಳಕಿನಲ್ಲಿ ನೆತ್ತರು ಚಿಮ್ಮಿ, ಅದರ ವಾಸನೆ ಆವರಿಕೊಂಡಿತು. ತನ್ನ ಎಲ್ಲ ಶಕ್ತಿಯನ್ನೂ ಒಗ್ಗೂಡಿಸಿ ನಾಗರಾಜ ಎದ್ದು, ಪೂಜಾರಪ್ಪನನ್ನು ಇನ್ನೆಂದೆಂದೂ ಬಿಡಲಾರದಂತೆ ಬಿಗಿ ಹಿಡಿದು ತಾನೂ ಸಿಕ್ಕಲ್ಲೆಲ್ಲ ಕಚ್ಚಿ, ಕೆಳಕ್ಕೆ ಕೆಡವಿಕೊಂಡು ಒಂದೇ ಸಮನೆ, ತಕಥೈ ಕುಣಿಯುವಂತೆ ಬಲವಾಗಿ ಅವನ ಹೊಟ್ಟೆಯ ಮೇಲೆ ತುಳಿಯತೊಡಗಿದ.

ತುಳಿಯುತ್ತ ತುಳಿಯುತ್ತ ನಾಗರಾಜ ದೇವರಿಗಿಂತಲೂ ಮಿಗಿಲಾಗಿ ಹೂಂಕರಿಸಿ, ಕೇಕೇ ಹಾಕಿ ಮತ್ತೂ ತುಳಿದ. ಪೂಜಾರಪ್ಪ, ಕೆಳಗೆ ಬಿದ್ದು ವಿಲವಿಲನೆ ಒದ್ದಾಡುತ್ತಿದ್ದವನು, ಒಮ್ಮೆ ಮಾತ್ರ, ಕ್ಷೀಣವಾಗಿ ಹಾss ಎಂದವನು, ಮತ್ತೆ ಉಸಿರೆತ್ತಲಿಲ್ಲ. ದೇವರು ಮೈಯಿಂದ ಇಳಿದು ಹೋಗುತ್ತಿದೆಯೆಂದು, ಜನ ಹತ್ತಿರ ಬಂದರು. ನಾಗರಾಜ ರೋಷದಿಂದ ಮೈಮರೆತು ತುಳಿಯುತ್ತ, ಎದೆ ಮೇಲೆ ಗುದ್ದುತ್ತಿದ್ದ. ಜನ ಸುಮ್ಮನೆ ನೋಡುತ್ತಲೇ ಇದ್ದರು. ದೇವರ ಜೊತೆ ಹೀಗಾಗಲುಂಟೇ ಎಂದು ಮಂಕಾಗಿ ದಿಕ್ಕು ತೋಚದಾಗಿದ್ದರು. ನಾಗರಾಜ ದಣಿದು ಹೋಗಿದ್ದ. ತೊಡೆಯ ಮಾಂಸಖಂಡ ಕಿತ್ತು ಬಂದಿದ್ದರಿಂದ, ರಕ್ತ ಸೋರುತ್ತಿತ್ತು. ನಿತ್ರಾಣವಾಗಿ, ಪೂಜಾರಪ್ಪನಿಂದ ಅಷ್ಟು ದೂರ ಹೋಗಿ, ಬಿದ್ದುಕೊಂಡ.

ಜನ ಮತ್ತೂ ಸಮೀಪ ಬಂದರು. ದೇವರು ಹೊರಟುಹೋಗಿದೆ; ಆ ಪೂಜಾರಪ್ಪನನ್ನು

ಮೇಲೇಳಿಸಿ ಎಂದು ಯಾರೋ ಯಜಮಾನರು ಆದೇಶಿಸಿದ್ದರು. ಅವರಿವರು ಹೋಗಿ ಎಬ್ಬಿಸಲು ಕೈ ಇಟ್ಟರು. ಅವರ ಕೈಗೆ ನೆತ್ತರು ಅಂಟಿಕೊಂಡಿತು. ಪೂಜಾರಪ್ಪನ ತಣ್ಣನೆಯ ದೇಹ ಹಿಡಿದು ಕೊಂಡಿತು. ತಟ್ಟನೆ ಅವರಿಗೆಲ್ಲ ಅರಿವಾಗಿ, ಅಯ್ಯೋ, ಪೂಜಾರಪ್ಪ ಹೊರಟುಹೋಗಿದ್ದಾನೆ, ಬನ್ರೋ ಎಂದು ಕೂಗಿಕೊಂಡರು. ಆವೇಶ ದಿಂದ ನಾಗರಾಜ, ಹೊಟ್ಟೆಯನ್ನೆಲ್ಲ ತುಳಿಯುತ್ತ, ಕಿಬ್ಬೊಟ್ಟೆಯ ತಳವನ್ನು ಜಜ್ಜುವಂತೆ ಕಾಲಿಂದ ಒದ್ದು ಹೊಸಕುವಾಗ, ಪೂಜಾರಪ್ಪನ ಗುಪ್ತಾಂಗಕ್ಕೆ ಬಲವಾಗಿ ಪೆಟ್ಟು ಬಿದ್ದಿತ್ತು. ಜನ, ಮೊದಲಿ ಗಿತಂಲೂ ಈಗ ಹೆಚ್ಚು ಭಯಭೀತರಾಗಿ ಪೂಜಾ ರಪ್ಪನ ಹೆಣದ ಬಳಿ ಬಂದರು. ಮಿಂಚಿನಂತೆ ನಾಗರಾಜನಿಗೆ ಪೂಜಾರಪ್ಪನ ಸಾವು ಗೋಚರಿಸಿ, ಅವರೆಲ್ಲ ಬಂದು, ಇವನನ್ನು ಒಂದೇ ಗುಕ್ಕಿಗೆ ಕುಕ್ಕಿ ತಿನ್ನುವ ಮೊದಲೇ ಎದ್ದು, ಕತ್ತಲಲ್ಲಿ ಓಡಿಹೋಗಿ ಕಣ್ಮರೆಯಾದ.

### ಕತ್ತಲ ಸಾಲುಗಳು



ನಡುರಾತ್ರಿಯ ಕತ್ತಲಿಗೆ, ಪೂಜಾರಪ್ಪನ ಹೆಣ, ನಾಲಿಗೆ ಚಾಚಿಕೊಂಡು, ಎಲ್ಲರನ್ನು ಕಂಗೆಡಿಸಿತು. ಆ ನಾಗರಾಜನನ್ನು ಅಟ್ಟಿಸಿಕೊಂಡು ಹೋಗಿ, ಹುಡುಕಾಡಿ, ಸಾಕಾಗಿ, ಹಿಂತಿರುಗಿ ಬಂದು, ಆವೇಶದಿಂದ, ಸುಸ್ತಿನಿಂದ, ಏದುಸಿರು ಬಿಡುತ್ತಾ, ಅವನು ಸಿಕ್ಕಿದ್ದಿದ್ದರೆ ಅಲ್ಲೇ ಅವನ ದೇಹವನ್ನು ಈ ಕತ್ತಿಗೆ ಆಹುತಿ ಕೊಡುತ್ತಿದ್ದೆವು. ಮಾಯಾವಿಯೇ ಇರಬೇಕವನು, ಎಲ್ಲೆಲ್ಲೋ ಹೋಗಿಬಂದವನು, ಹತ್ತಾರು ಕೆರೆಯ ನೀರು ಕುಡಿದು, ಮಾಟ, ಮಂತ್ರ, ಮೋಡಿ ಕಲಿತು ಬಂದವನು, ನಮ್ಮ ನೆಮ್ಮದಿಗೆ ಬೆಂಕಿಹಚ್ಚಿ ಮಾಯವಾಗಿದ್ದಾನೆ, ಅವನ ಬಿಸಿರಕ್ತವನ್ನು ದೇವಾಲಯದ ಅಂಗಳದಲ್ಲಿ ಚೆಲ್ಲಲೆಂದು, ನಾವು ಶಕ್ತಿ ಮೀರಿ, ಒಟ್ಟಾಗಿ ಅಟ್ಟಿಸಿಕೊಂಡು ಹೋದೆವು, ಅವನ ಅದೃಷ್ಟ ಚೆನ್ನಾಗಿತ್ತು, ಈ ರಾತ್ರಿ ಬದುಕುಳಿದಿದ್ದಾನೆ ಅಷ್ಟೇ, ಈ ಕತ್ತಲು ಹರಿದು ಬೆಳಗು ಮೂಡಲಿ, ಆತ ಎಲ್ಲೇ ಅವಿತಿದ್ದರೂ ಹಿಡಿದು ತಂದು ಊರ ಬಾಗಿಲ ಮುಂದೆ ತುಂಡರಿಸದೇ ಬಿಡೆವು, ದೇವರ ಸರ್ಪದ ಎಡೆಯ ಕೆಳಗೆ ಕುಳಿತು ಸರಸವಾಡಿ ಕೊಂದಿರುವ ಅವನನ್ನು ಸುಮ್ಮನೇ ಬಿಟ್ಟುಬಿಟ್ಟರೆ, ಆಮೇಲೆ ದೇವರು ನಮ್ಮನ್ನು ಸಂಪೂರ್ಣವಾಗಿ ಮರೆತುಬಿಡುತ್ತಾನೆ ಎಂದು ಕುಳಿತವರ ಮುಂದೆ ಹಾಡುತ್ತಿದ್ದರು. ಪೂಜಾರಪ್ಪನ ಕಡೆಯವರು ರೋಧಿಸುತ್ತಿದ್ದೂ, ನಾಗರಾಜ ಯಾವಾಗ ಹೆಣ ವಾಗಿ ಉರುಳುವನೋ ಎಂದು ಶಾಪ ಹಾಕುತ್ತಿ ದ್ದರು. ಸತ್ತವನ ತಮ್ಮಂದಿರು, ಮಾರುದ್ಧದ ಕತ್ತಿಗಳನ್ನು ಹಿಡಿದು, ಕತ್ತಲಲ್ಲಿ, ನಾಗರಾಜನಿಗಾಗಿ ಇನ್ನಿಲ್ಲದಂತೆ ಹುಡುಕಾಡುತ್ತಿದ್ದರು. ಅವನ ಅಪ್ಪ ಇದೆಲ್ಲದರಿಂದ ಜರ್ಜರಿತಳಾಗಿ ಕತ್ತಲಲ್ಲಿ ಮಾಯ ವಾಗಿದ್ದಳು.

ಕಾಲಾಂತರದ ಸೂರ್ಯ ಕಣ್ಣು ತೆರೆದಂತೆ, ಸುದ್ದಿ ತಿಳಿದು, ಸುತ್ತೇಳು ಹಳ್ಳಿಯ ಕುತೂಹಲಿ ಗರೂ, ಬಂಧುಗಳೂ, ಎಲ್ಲರೂ ಬಂದು ಸೇರಿ ದರು. ಇಂತಹ ವಿಚಿತ್ರ ಘಟನೆ, ಆ ಯಾವ ಹಳ್ಳಿಗಳಲ್ಲೂ, ಹಿಂದೆಂದೂ ನಡೆದಿರಲಿಲ್ಲ. ಇದು ದೇವರ ಗುಡ್ಡನ ಸಾವೆಂದರೆ, ನಮ್ಮ ಕೇರಿಯ ನಮ್ಮ ಸಾವೆಂದು ಯಾರೋ ದೊಡ್ಡದಾಗಿ ಹೇಳುತ್ತಿದ್ದರು. ದೇವರು ಮೈ ಮೇಲೆ ಇದ್ದಾಗಲೇ ಸತ್ತ ಈ ದೇವರ ಮಗನನ್ನು, ಯಾವ ರೀತಿ ಮಣ್ಣು ಮಾಡಬೇಕೆಂದು ಹಳೆಯ ತಲೆಗಳು ಕ್ರಿಯಾವಿಧಿ ಗಳನ್ನು ಸೂಚಿಸುತ್ತಿದ್ದವು. ದೇವರಿಗೆ ಶೃಂಗರಿಸು ವಂತೆ, ಅದನ್ನು ಮೆರವಣಿಗೆಗೆ ಅಣಿಮಾಡುವಂತೆ ಎಲ್ಲವನ್ನೂ ಸಜ್ಜುಗೊಳಿಸುತ್ತಿದ್ದರು.

ಅಷ್ಟರಲ್ಲಿ, ಐದಾರು ಜನ, ನಾಗರಾಜನನ್ನು ಹಿಡಿದು, ರಭಸವಾಗಿ ಎಳೆದುಕೊಂಡು ಬರುತ್ತಿದ್ದರು. ಆ ಮುಂಜಾವಿನಲ್ಲಿ ತೂರೆಯ ಕಡೆ ಹೋಗಿದ್ದವರು, ಅಲ್ಲಿ ನಾಗರಾಜ ಒಂದು ಮರದ ಕೆಳಗೆ ರಕ್ತಸಿಕ್ತವಾಗಿ ಬಿದ್ದಿದ್ದನ್ನು ಕಂಡು,

ಸೆರೆಹಿಡಿದಂತೆ ಕರೆತಂದಿದ್ದರು. ನಾಗರಾಜ ರಕ್ತ ಸ್ರಾವದಿಂದ ತೊಯ್ದುಹೋಗಿದ್ದ. ತೊಡೆಯ ಮಾಂಸಖಂಡ ಕಿತ್ತು ಬಂದು ರಕ್ತ ಸುರಿಯುತ್ತಿತ್ತು. ಒಮ್ಮೆಲೇ, ಹತ್ತಾರು ಮಂದಿ, ನಾಗರಾಜನನ್ನು, ಒಂದೊಂದೇ ಹರಿತವಾದ ಕ್ರೌರ್ಯಗಳಿಂದ ಬಗೆದು ಹಾಕಲು ಮುಂದಾದರು. ಅಷ್ಟರಲ್ಲಿ ಊರ ಯಜಮಾನ ನುಗ್ಗಿಬಂದು, ತಡೆಯಿರೀ ತಡೆಯಿರೀ, ದೇವರ ಗುಡ್ಡನ ಹೆಣವನ್ನು ಮುಂದಿಟ್ಟುಕೊಂಡು ಈ ಕ್ಷಣದಲ್ಲೇ ಹೀಗೆ ಮಾಡಲು ಬರುವುದಿಲ್ಲ. ದೇವರ ಮಗನ ಮಣ್ಣು ಮಾಡಿದ ಮೇಲೆ ಅವನನ್ನು ವಿಚಾರಿಸಿಕೊಳ್ಳುವ. ಆತನನ್ನು ಇಲ್ಲಿಗೆ ಕರೆತರಬೇಡಿ. ಮೊದಲು ಆತನನ್ನು, ಅಲ್ಲಿ ಎಲ್ಲಾದರೂ ಮರೆಯಲ್ಲಿ ಬಂಧಿಸಿ ಕೂಡಿಹಾಕಿ ಎಂದು ಆದೇಶಿಸಿದ ಕೂಡಲೇ, ಯಾರೋ ದರದರ ಎಳೆದುಕೊಂಡು ಹೋಗಿ, ಕತ್ತಲ ಕೋಣೆಗೆ ನೂಕಿ, ದಪ್ಪ ಬೀಗವನ್ನು ಜಡಿದು ಬಂದರು. ಎಲ್ಲರು ದುಃಖತಪ್ತರು. ಬೆಂದ ಮನದವರು, ಹತಾ ಬದುಕಿನಲ್ಲಿ ನಾಳೆಗಾಗಿ ಕಾಯುವವರು ಪೂಜಾರಪ್ಪನ ಹೆಣ ಹೊತ್ತು ಸ್ಮಶಾನದ ಕ ಹೊರಟರು.



ನಾಗರಾಜನಿಗೆ, ತಾನು ಎಲ್ಲಿಯಾದರು ಮರೆಯಾಗಿ ಹೋಗಿ ಬದುಕುವ ಆಸೆಯ ದಹಿಸಿಹೋಗಿತ್ತು. ಅವನ ಅಪ್ಪನನ್ನು ಯಾರು ಹುಡುಕುವ ಗೋಜಿಗೆ ಹೋಗಲಿಲ್ಲ ಪೂಜಾರಪ್ಪನ ಅಣ್ಣತಮ್ಮಂದಿರು ನಾಗರಾಜ ರಕ್ತಕ್ಕಾಗಿ ದಾಹದಿಂದ ಕುದಿಯುತ್ತಿದ್ದರು. ಕತ್ತ ಕೋಣೆಯಲ್ಲಿ ನಾಗರಾಜ ನೇಣುಹಾಕಿಕೊಳ್ಳ ನೋಡಿದ. ಆ ಬಗೆಯ ಸಾವು ಯಾಕೋ ಬೇ ಎನಿಸಿ, ತನ್ನ ಬದುಕು ನೆತ್ತರಲ್ಲದ್ದಿ ಬರೆ ಚಿತ್ರದಂತಿದೆಯೆಂದು, ಆ ನೋವಿನಲ್ಲೂ ತಾನು ಪ್ರೇಮಿಸಬಹುದಾಗಿದ್ದ ಪೇಟೆಯ ಹುಡುಗಿಯನ್ನು ನೆನೆದ. ಕ್ಷಣದಿಂದ ಕ್ಷಣಕ್ಕೆ ಅವನ ಮನಸ್ಸು, ಹುಚ್ಚು ಕುದುರೆಯನೇ ಹಾರಾಡುತ್ತಿತ್ತು. ರೆಕ್ಕೆ ಮುರಿದ ಹಕ್ಕಿಯಂ ಉಸಿರಾಡುತ್ತಿದ್ದ. ಯಾವತ್ತೂ ಕನಸಿಗೆ ಬರುತ್ತಿ ಚಿತ್ರ, ಅವನ ಕಣ್ಣಾಳದಿಂದ ಎದ್ದುಬಂತು ದೃಷ್ಟಿಯ ಉದ್ದಕ್ಕೂ, ದಿಗಂತದಾಚೆಯಿಂ ಹಿಂಡು ಹಿಂಡು ಜನ, ಹಸಿದ ಬಟ್ಟಲ ಹಿಡಿದು, ಅದರ ತುಂಬ ಅನಂತ ಕನಸುಗ ಕಾಳುಗಳ ತುಂಬಿಕೊಂಡು, ಅವನ್ನ ಭೂಮಿಯುದ್ದಕ್ಕೂ ಬಿತ್ತುತ್ತಾ, ಕಣ್ಣೀರ ನೀ ಉಣಿಸುತ್ತಾ, ಕಾಲಾಂತರದಿಂದಲೂ ಕನ ಸುಗ್ಗಿಯ ಪದವ, ತಾರಕ ಸ್ವರದಲ್ಲಿ, ಆಕಾ ದಗಲಕ್ಕೂ ತೂರುತ್ತಾ ಬರುವ ನೋ ಎದುರಾಗಿ, ಈ ಈಗಲೂ ಇಂತಹ ಸಾ ಸಂಜೆನಲ್ಲೂ, ಇದು ಯಾಕೆ ನನ್ನೊಳಗೆ ಬರ ತ್ತದೆಂದು ಕಸಿವಿಸಿಯಾದ. ಹಾಗೆ ಬರು ಅವರೆಲ್ಲ, ತನ್ನ ಪೂರ್ವಿಕರೇ ಇರಬೇಕೆಂದ ಕೊಳ್ಳುತ್ತಿದ್ದ. ಇಂತಹ ಕನಸುಗಳಿಂದಲೇ

ಗರಾಜ, ಎಷ್ಟೋ ಬಾರಿ, ಹುಚ್ಚು ಹಿಡಿದವ
ಂತೆ ವರ್ತಿಸುತ್ತಿದ್ದ. ಹಸಿದ ಬಟ್ಟಲ ದಂಡು,
ಕ್ಷಾಂತರ ರೂಪಗಳಲ್ಲಿ ಬೆಳೆಯುತ್ತಾ
ಂದಂತೆಲ್ಲ ನಡುಗುತ್ತಿರುವಂತೆಯೇ, ಅವರೆಲ್ಲ,
ಡೀ ಭೂಮಿಯನ್ನು, ತಮ್ಮ ಬಗರಿ ಮೂಳೆ
ಳಿಂದ ಉಳುತ್ತಿರುವಂತೆ ಕಂಡು, ಭೀತಿಯಿಂದ
ರಳುತ್ತಿದ್ದ. ಸ್ಮಶಾನದ ಕಡೆಯಿಂದ, ಪೂಜಾ
ಪ್ಪನ ಹೆಣದ ಅಂತ್ಯಕ್ರಿಯೆಗಳ ತಮಟೆ,
ಗಾರಿಗೆಳ ಅರ್ಭಟದ ಸದ್ದು ಮೊರೆಯುತ್ತಿತ್ತು.

ಹೆಣವನ್ನು ಮಣ್ಣು ಮಾಡುವ ಹೊತ್ತಿಗೆ,
ತ್ತಲು ಮುದುಕಿಯಂತೆ, ಕೋಲೂರಿ, ಮೆಲ್ಲಮೆಲ್ಲಗೆ
ರುತ್ತ ಊರನ್ನು ತುಂಬಿಕೊಂಡಿತು. ಗಾಳಿ
ಶ್ಚಲವಾಗಿ, ಎಲ್ಲ ಸದ್ದೂ ಅಡಗಿ, ಎಲ್ಲರ
ನಸ್ಸೂ ಕವಡಿಹೋಗಿತ್ತು. ಊರಜನ, ಈ
ಾತ್ರಿ ಪಂಚಾಯ್ತಿಯವರು ನಾಗರಾಜನಿಗೆ
ಂತಹ ಶಿಕ್ಷೆ ವಿಧಿಸುತ್ತಾರೆಂದು ಕುತೂಹಲದಿಂದ
ಾದರು. ಮಣ್ಣುಮಾಡಿ ಬಂದವರೆಲ್ಲ, ಗುಡಿಯ
ಂಗಳದಲ್ಲಿ ಸತ್ತವನ ಆತ್ಮದ ಸಂಕೇತವಾಗಿ
ಟ್ಟಿದ್ದ ದೀಪಕ್ಕೆ ಕೈ ಮುಗಿಯುತ್ತಿದ್ದರು.
ಪಂಚಾಯ್ತಿ ಕಟ್ಟೆಗೆ ಎಲ್ಲರೂ ಬರಬೇಕೆಂದು
ತಂಗೂರ ಬಾರಿಸುವ ಅಗತ್ಯವೇ ಇರದೆ,
ವರೆಲ್ಲ ಈಗಲ್ಲಿಗೆ ಬಂದು ಕುಳಿತಿದ್ದರು.
ಾಗರಾಜನನ್ನು ಗುಡಿಯ ಕಂಬಕ್ಕೆ ಬಿಗಿದು
ಟ್ಟಲಾಗಿತ್ತು. ಕಳೆದ ರಾತ್ರಿ ಹಚ್ಚಿದ್ದಂತೆಯೇ,
ೊಡ್ಡ ಪಂಜುಗಳನ್ನು ದೇವಾಲಯದ ಹಜಾರ
ದಲ್ಲಿ ಹಚ್ಚಿದ್ದರು. ಆ ಬೆಳಕಿನಲ್ಲಿ, ಅಲ್ಲಿದ್ದವರ
ಸ್ಪಷ್ಟ ಕಂದುಗಪ್ಪು ಮುಖಗಳು ತಮ್ಮ ನೆರಳುಗಳ
ೊಡೆ ವಾಲಾಡುತ್ತಿದ್ದವು. ಕೆಮ್ಮುವವರು ಕೆಮ್ಮುತ್ತ,
ೀಡಿ ಸೇದುವವರು ಸೇದುತ್ತ, ಬುಸುಗುಡು
ವವರು ಬುಸುಗುಡುತ್ತ, ಅಳುವವರು ಒಳ
ೊಳಗೇ ಅಳುತ್ತ, ತರಾವರಿಯಾಗಿ, ಒಬ್ಬೊ
ರೂ ಪಂಚಾಯ್ತಿ ಕಟ್ಟೆಯನ್ನು ಆವರಿಸಿದ್ದರು.
ೊರಗಿನಿಂದ ಬಂದ ನೆಂಟರಿಷ್ಟರೂ, ಅವರಿ
ರೂ, ಎಲ್ಲರೂ, ಕೂಡಲೇ, ಅವನಿಗೆ ಯಾವ
ಶಿಕ್ಷೆಯನ್ನು ಕೊಡಬೇಕೋ ಕೊಟ್ಟು, ಈ ಹೆಣದ
ಸೂತಕವನ್ನು ಮುಗಿಸಿ ಎಂದು ಬಲವಂತ
ಪಡಿಸುತ್ತಿದ್ದರು.

ಅಲ್ಲೀಗ, ಅವನನ್ನು ಹೇಗೆ ಕೊಲ್ಲಬೇಕೆಂದು
ಪೂಜಾರಪ್ಪನ ಕಡೆಯವರು ಲೆಕ್ಕಿಸುತ್ತಿದ್ದರು.
ಬಂದ ಹಿರಿಯ ಯಜಮಾನರು, ಗುಡಿಯ ಪಡ
ಸಾಲೆಯ ಮೇಲೆ ಕುಳಿತು, ನ್ಯಾಯ ದೇವತೆಯನ್ನು
ನೆನೆಯುತ್ತಿದ್ದರು. ಇರುಳ ನಾಲಿಗೆಯ ಮೇಲೆ
ಅವರ ಪಾಡು ನಡೆಯುತ್ತಿತ್ತು. ಇವನ ಒಂದೊಂದು
ತೊಟ್ಟು ರಕ್ತವಲ್ಲೂ, ಕೊಲೆಗಡುಕರಿದ್ದಾರೆಂದು,
ಯುವಕನೊಬ್ಬ, ಸಿಟ್ಟಿನಿಂದ, ಅವನಿಗೆ
ಹೊಡೆಯಲು ಮುಂದಾಗುವುದನ್ನು ತಡೆದು,
ಯಜಮಾನರು ಮಾತಿಗಾರಂಭಿಸಿದರು. ಈ
ಪಾಪಿಮುಂಡೆಮಗ ಯಾಕಾದರೂ ನಮ್ಮ
ಊರಿಗೆ ಹಿಂತಿರುಗಿಬಂದು ಈಗ ಹೀಗೆ
ಸಿಲುಕಿದನೋ ಎಂದು, ನಾಗರಾಜನ ಬಗ್ಗೆ,
ಯಾಕೋ ದೊಡ್ಡ ಯಜಮಾನರಿಗೆ ಒಂದಿಷ್ಟು
ಕನಿಕರ ಬಂತು. ವಿಚಾರಣೆ ನಡೆಸಲು ಅಲ್ಲಿ
ಅವರಿಗೇನು ಕಾಣಲಿಲ್ಲ. ಶಿಕ್ಷೆಯೊಂದೇ
ಅವರೆಲ್ಲರ ಮುಂದೆ ನಲಿಯುತ್ತಿತ್ತು. ಆಕಸ್ಮಿಕವಾಗಿ
ಜಗಳದಲ್ಲಿ ಏನೋ ಆಗಿಹೋಗಿದೆ. ಇವನು
ನಮ್ಮ ಕಣ್ಣ ಮುಂದೆಯೇ ಬೆಳೆದ ಹುಡುಗ. ಇವನ
ಅಪ್ಪನ ನೆತ್ತರನ್ನೂ ಕಂಡವರು ನಾವು. ಇವನೂ
ನೆತ್ತರಲ್ಲಿ ಮುಳುಗಿಹೋಗುವುದಕ್ಕೆ ವಿಧಿ ಹಣೆ
ಬರಹವನ್ನು ಬರೆದಂತಿದೆ. ಇವನು ಮಾಡಿರುವ
ತಪ್ಪಿಗೆ, ಕೈಯೋ, ಕಾಲನ್ನೋ ಕಡಿದು
ಹಾಕಬಹುದು. ಆದರೆ ಅಷ್ಟೊಂದು ನರಕ ಬೇಡ.
ಈತ, ಎಲ್ಲಿಯಾದರೂ ದೂರ, ಎಂದೆಂದೂ
ಇಲ್ಲಿಗೆ ಹಿಂತಿರುಗದ ಸೀಮೆಗೆ ಹೊರಟುಹೋಗಿ
ಅಲ್ಲೆಲ್ಲಾದರೂ ಬದುಕಿಕೊಳ್ಳಲಿ. ಆದದ್ದಾಯಿತು,
ಇವನನ್ನು ಬಿಟ್ಟು ಬಿಡುವಾ ಎಂದು ತೀರ್ಮಾನಿಸಿ
ದಂತೆ ಹೇಳಿದರು. ಈ ಮಾತುಗಳನ್ನು ಕೇಳು
ತ್ತಿದ್ದಂತೆಯೇ, ಪೂಜಾರಪ್ಪನ ಬಂಧುಗಳು
ಗದ್ದಲವೆಬ್ಬಿಸಿ, ಇಂತಹ ನ್ಯಾಯದ ಮಾತುಗಳನ್ನು

ಆಡಲು ನಾಚಿಕೆಯಾಗುವುದಿಲ್ಲವೇ ಎಂದು ಆರ್ಭಟಿಸಿ, ತಾವೇ ಶಿಕ್ಷೆಯ ತೀರ್ಮಾನವನ್ನು ಕೊಡುತ್ತೇವೆಂದೂ, ಇಲ್ಲದಿದ್ದರೆ ಅವನನ್ನು ನಮ್ಮ ವಶಕ್ಕೆ ಕೊಟ್ಟು ಬಿಡಿ ಎಂದು ಕೂಗಾಡಿದರು. ಅವನನ್ನು ತುಂಡು ತುಂಡು ಮಾಡುವ ಬಗೆ ಬಗೆಯ ಮಾತುಗಳು, ಅಲ್ಲಿಲ್ಲ, ಕಳೆದ ರಾತ್ರಿ ಅದೇ ಅಂಗಳದಲ್ಲಿ ಚೆಲ್ಲಾಡಿದ ನೆತ್ತರಿನಂತೆಯೇ ಅಂಟಿಕೊಂಡವು. ಕ್ಷಮೆಯ ಮಾತೇ ಉಳಿಯಲಿಲ್ಲ.

ಕೊಲ್ಲುವ ಮಾತುಗಳು ಒಂದು ಹದಕ್ಕೆ ಬಂದ ಮೇಲೆ, ಎಲ್ಲೆಡೆ, ನಿಶ್ಯಬ್ದ ಕಪ್ಪು ಮೋಡಗಳಂತೆ ಕವುಚಿಕೊಂಡಿತು. ಪೂಜಾರಪ್ಪನ ದೊಡ್ಡಪ್ಪ, ತನ್ನ ಹಳೆಯ ಕಾಲದ ಶಿಕ್ಷಾವಿಧಿಯನ್ನು ಮಂಡಿಸಿದ. ಅದೇ ಇವನಿಗೆ ಕಡಿಮೆ ಶಿಕ್ಷೆ ಎಂದು ಯಾರೋ ಅನುಮೋದಿಸಿದರು. ಯಜಮಾನರೂ ಹೆಚ್ಚು ಕಡಿಮೆ ಅದೇ ದಡಕ್ಕೆ ಬಂದು ನಿಂತಿದ್ದರು. ಬಹಳ ಹಿಂದೆ, ಇದೇ ದೇವರ ಗುಡಿಯ ಒಡವೆಗಳನ್ನು ಕದ್ದಿದ್ದವನನ್ನು ಹಿಡಿದು, ಅವರ ಸಂಪ್ರದಾಯದ ಪ್ರಕಾರ ಊರ ಮೊಲೆದಿಬ್ಬದ ಬೆಟ್ಟದ ಕೋಡುಗಲ್ಲ ಎತ್ತರಕ್ಕೆ ಕರೆದುಕೊಂಡು ಹೋಗಿ, ಆ ಮೇಲಿಂದ ಕೆಳಕ್ಕೆ, ಕಣಿವೆಯಾಳಕ್ಕೆ ತಳ್ಳಿಬಿಟ್ಟಿದ್ದರು. ಅದೇ ಶಿಕ್ಷೆಯಿಂದ ಇವನನ್ನು ಮುಗಿಸಬೇಕೆಂದು ಅನೇಕರು ಒಕ್ಕೊರಲಿನಿಂದ ಗುಡುಗಿದರು. ಹಿಂಸೆಯ ನೆತ್ತರ ಉನ್ಮಾದ, ಸನ್ನಿ, ಅವರನ್ನು ವಿಕಾರವಾಗಿ ಹಿಡಿದುಕೊಂಡಿತ್ತು.

ಎಲ್ಲರೂ, ಈಗಲೇ ಇದು ಮುಗಿದು ಹೋಗಬೇಕೆಂದು ತುದಿಗಾಲಲ್ಲಿ ನಿಂತರು. ಬೀಸುವ ತಂಗಾಳಿ ಅವರ ನಡುವೆ ಬೀಸುತ್ತಲೇ ಇತ್ತು. ಬಿರಿಯುವ ಕತ್ತಲೆ ಬಿರಿಯುತ್ತಲೇ ಇತ್ತು. ಯಾರದೋ ಹಿತ್ತಿಲ ಮಲ್ಲಿಗೆ ಮೆಳೆಯಿಂದ ಹೂಗಳು ಅರಳಿ, ಗಮ್ಮನೆ ಗಾಳಿ ತೇಲುತ್ತಿತ್ತು. ನಾಗರಾಜ ಎಲ್ಲವನ್ನೂ ತಣ್ಣನೆ ಕೇಳಿಸಿಕೊಂಡು, ನಿರ್ವಿಕಾರನಂತೆ ಕಣ್ಣುಗಳನ್ನು ಆಕಾಶದ ನಕ್ಷತ್ರಗಳ ತೋಟಕ್ಕೆ ನೆಟ್ಟಿದ್ದ. ನಿನ್ನನ್ನು ಕೊಲ್ಲುತ್ತೇವೆ ಎಂದಾದರೂ ಒಂದು ಮಾತನ್ನು ಕೇಳಿ, ಆ ಮುಠ್ಠಾಳನಿಗೆ, ಎಂದು ಯಜಮಾನರು ಸಿಟ್ಟಿನಿಂದಲೋ ಕರುಣೆಯಿಂದಲೋ ಯಾರಿಗೋ ಹೇಳಿದರು. ಅದು ಗದ್ದಲದಲ್ಲಿ ಕರಗಿಹೋಯಿತು. ಇವನನ್ನು ಹಿಡಿದುಕೊಂಡು, ನಡೆಯೋಣವೇ ಎಂದು ಯಜಮಾನರನ್ನು ಇನ್ಯಾರೋ ಕೇಳುತ್ತಿದ್ದರು.

## ಮೊಲೆಹಾಲ ಸಾಲುಗಳು



ನಾಗರಾಜ ಎಲ್ಲದಕ್ಕೂ ಸಿದ್ಧನಾಗಿದ್ದ. ನಿಮ್ಮ ಆಸೆಯಂತೆಯೇ, ಎಲ್ಲರ ಸಾಕ್ಷಿಯಲ್ಲೇ, ಈ ರಾತ್ರಿಯೇ, ಆ ಕೋಡುಗಲ್ಲ ತುದಿ ಏರಿ, ಕತ್ತಲ ಪ್ರಪಾತದ ಆ ಕಣಿವೆಯಾಳಕ್ಕೆ ನೆಗೆದು ಬಿದ್ದು ಪ್ರಾಣಬಿಡಲು ಒಪ್ಪಿದ್ದೇನೆಂದು, ಕ್ಷೀಣವಾದ ದನಿಯಲ್ಲಿ ನುಡಿದ. ನಡೆಯಿರಿ, ಈಗಲೇ ಅಲ್ಲಿಗೆ ಹೋಗುವ. ಈ ಇರುಳು ಹರಿಯುವುದರಲ್ಲಿ ಎಲ್ಲವೂ, ನಿಮ್ಮ ಬಯಕೆಯಂತೆಯೇ ಮುಗಿದು ಹೋಗಲಿ ಎಂದು, ತಾನೇ ಮುಂದಾಗಿ ನಡೆವಂತೆ, ಈ ಕಟ್ಟುಗಳನ್ನು ಬಿಚ್ಚಿ ಎಂದ.

ನಿನ್ನ ತಂತ್ರಗಳನ್ನೆಲ್ಲ ನಾವು ಚೆನ್ನಾಗಿ ಬಲ್ಲೆವು. ಕತ್ತಲಲ್ಲಿ ಓಡಿಹೋಗಲು, ನಿನ್ನ ನೆರಳನ್ನೂ ನಾವು ಬಿಟ್ಟುಕೊಡುವುದಿಲ್ಲ. ನಿನ್ನನ್ನು ನಾವು ನಂಬುವುದಿಲ್ಲ. ನಮ್ಮ ನಂಬಿಕೆಯ ದೇವರನ್ನು ಕಿತ್ತುಹಾಕಲು ಬಂದವನು ನೀನು. ನಿನ್ನ ಕೊನೆಯಾಸೆ ಏನಿದೆಯೋ ಬೇಗ ಹೇಳಿಬಿಡು ಎನ್ನುತ್ತ, ಅವರಿವರು ಆತುರಪಡಿಸಿದರು. ನಾಗರಾಜನಿಗೆ ಎಲ್ಲವೂ ಬೇಸರವಾಗಿತ್ತು. ಯಾವುದೂ ಬೇಡವಾಗಿತ್ತು. ಸಾಯುವುದೊಂದೇ ನನ್ನ ಕೊನೆಯಾಸೆಯೆಂದು ತಲೆ ತಗ್ಗಿಸಿದ. ಅವರೆಲ್ಲ ಕ್ಷಣ ಕ್ಷಣಕ್ಕೆ ಉನ್ಮಾದದ ಆವೇಶದಲ್ಲಿ ಬಿರಿಯುತ್ತಿದ್ದರು.

ಎಲ್ಲರೂ ಅವನನ್ನು ಗುಡ್ಡದ ಹಾದಿಯಲ್ಲಿ ನಡೆಸಿಕೊಂಡು ಹೊರಟರು. ಅವನ ಜೊತೆ ಇಡೀ ಊರೇ, ಆ ಕಣಿವೆ ಕಡೆ ನಡೆದಿತ್ತು. ಎಲ್ಲೆಡೆ ಕತ್ತಲು ನಲಿಯುತ್ತಿತ್ತು. ಒಬ್ಬೊಬ್ಬರ ರಕ್ತವರ್ಣದ ಕಣ್ಣುಗಳೂ, ಆ ಪಂಜುಗಳ ಬೆಳಕಿನಲ್ಲಿ ಅವನ

ಮೇಲೇ ನಡೆಯುತ್ತಿದ್ದವು. ಅವನು ಆ ಕಣಿವೆಗೆ ಹೇಗೆ ಹಾರಿ ಬೀಳುವನೋ ಎಂದು ಅನೇಕರು ಕಲ್ಪಿಸುತ್ತಿದ್ದರು. ಉದ್ವೇಗದಿಂದ, ಬಿರುಬೀಸಾಗಿ, ಓಡುವಂತೆ ನಡೆಯುತ್ತಾ, ದೌಡಾಯಿಸುತ್ತಾ, ದಿಬ್ಬದ ಎತ್ತರ ಏರಿ, ಕೋಡುಗಲ್ಲ ಬಳಿಗೆ ಬಂದರು.

ಪಂಜು ಹಿಡಿದ ಅನೇಕರು, ಹೆಬ್ಬಂಡೆಯನ್ನು ಬೆಟ್ಟದ ತುದಿಗೆ ನೂಕುವಂತೆ, ಅಲ್ಲಲ್ಲ, ಗಾಢವಾಗಿ ಆವರಿಸಿಕೊಂಡು ಕೇಕೆ ಹಾಕುತ್ತಿದ್ದ ಕತ್ತಲನ್ನು, ಕಷ್ಟಪಟ್ಟು ತಳ್ಳಲು, ಯಮ ಪ್ರಯತ್ನ ಮಾಡುತ್ತಿದ್ದರು. ಆ ಅಗಾಧವಾದ ಕತ್ತಲು, ಅವರ ಮುಂಗೈಗಳ ಸುತ್ತಲೇ ನುಲಿದುಕೊಳ್ಳುತ್ತಿತ್ತು. ಊರ ಹಿರಿ ಯಜಮಾನರು, ಮಾರ್ಮಿಕವಾಗಿ, ನಾಗರಾಜನನ್ನೇ ದಿಟ್ಟಿಸಿ, ನಿನಗೆ ಇದೆಲ್ಲ ಒಪ್ಪಿಗೆಯೇ ಎಂದರು. ಅವರ ಮಾತನ್ನು ತಿರಸ್ಕರಿಸುವಂತೆ ಎತ್ತಲೋ ನೋಡುತ್ತ, ನನ್ನ ಈ ಎರಡೂ ಕೈಗಳಿಗೆ, ಎರಡು ಉರಿವ ಪಂಜುಗಳನ್ನು ಕೊಡಿ. ಈ ಎತ್ತರದ ತುದಿಯಲ್ಲಿ ನಿಂತು, ಕೊನೆಯ ನಾಲ್ಕು ಮಾತುಗಳನ್ನು ನಿಮ್ಮ ಜೊತೆ ಆಡಬೇಕಾಗಿದೆ. ನನ್ನ ಬಗ್ಗೆ ಯಾರೂ ಅನುಮಾನಿಸದಿರಿ. ಇಲ್ಲಿಂದ, ನಿಮ್ಮಿಂದ ತಪ್ಪಿಸಿಕೊಂಡು ದೂರ ಹೋಗಲು ನನಗೆ ಇನ್ನೊಂದು ಜಗತ್ತಿದೆ ಎಂದು ನಂಬಲಾರೆ. ಈ ಕಣಿವೆಯಾಳದಲ್ಲಿ, ಅಸ್ಥಿಪಂಜರಗಳ ಗೂಡಿನಲ್ಲಿ ಮಲಗಲು ನಾನೆಂದೂ ಹೆದರುವುದಿಲ್ಲ. ಈ ಬಂಡೆಗಳ ಮೇಲೆ, ಕಣಿವೆಯಾಳದ ತಳದಲ್ಲಿ, ಅನಾಥರ, ನನ್ನಂತಹ ತಬ್ಬಲಿಗರ, ಯಾರ್‍ಯಾರದೋ ಮೊಲೆಹಾಲು ಚೆಲ್ಲಾಡಿದೆ. ಆ ಹಾಲು ಯಾರ್‍ಯಾರದೋ ಪಾದಗಳಿಗಂಟಿ, ತಾಯ ಮೊಲೆಹಾಲು ಒಡೆದುಹೋಗಿದೆ ಎನ್ನುತ್ತ, ಹಾಗೇ ಆ ಕೋಡುಗಲ್ಲ ತುದಿ ಏರಿ, ಕೆಳಕ್ಕೆ ಹಾರಲು ಸಿದ್ಧನಾಗಿ ನಿಂತ.

ಜನ, ಆ ಕತ್ತಲ ಅಸ್ಪಷ್ಟ ಪಂಜು ಬೆಳಕಲ್ಲಿ, ಅವನನ್ನೇ ದಿಟ್ಟಿಸುತ್ತಿದ್ದರು. ಯಾರೋ ಪಂಜುಗಳ ತುದಿಯನ್ನು ತಿವಿದು, ಕಿಟ್ಟವನ್ನು ತೆಗೆಯುತ್ತಾ, ಅದಕ್ಕೆ ಎಣ್ಣೆ ಹುಯ್ದು, ಬೆಳಕಿನ ದೊಂದಿಯನ್ನು ಅಲ್ಲಲ್ಲ ವಿಸ್ತರಿಸುತ್ತಿದ್ದರು. ಊರ ಹೆಂಗಸರು, ಹೀಗಾಗಬಾರದಿತ್ತು ಎಂಬಂತೆ ಚಿಂತಿಸುತ್ತಾ, ಸಾವಿನ ಸುದ್ದಿ ತರುವವರನ್ನು ಮನಸ್ಸಿನಲ್ಲೇ ಹಳಿಯುತ್ತಿದ್ದರು. ಆಕಾಶದ ತಾರೆಗಳು ನಿದ್ದೆಗಣ್ಣಿನಿಂದ ಇವರನ್ನೇ ನೋಡುತ್ತಿರುವಂತಿದ್ದವು. ನಾಗರಾಜನ ಎರಡೂ ಕೈಗಳಲ್ಲಿ ಪಂಜುಗಳು ಉರಿಯುತ್ತಿವೆಯೋ, ಸ್ವತಃ ಅವನೇ ಉರಿಯುತ್ತಿರುವನೋ, ಎಂಬುದು ಆ ಎತ್ತರದ ಕತ್ತಲಲ್ಲಿ, ಕೆಳಗೆ ನಿಂತಿದ್ದವರಿಗೆ ಸರಿಯಾಗಿ ಕಾಣುತ್ತಿರಲಿಲ್ಲ. ಈಗಾತ ಮಾತನಾಡುತ್ತಿದ್ದ.

ನಾನೀಗ ಸಾಯುತ್ತೇನೆಂದು ಭಾವಿಸಬೇಡಿ. ಇಲ್ಲಿ, ಈ ದೇಶದಲ್ಲಿ ನಾನು ಸಾವಿರ ಸಲ ಹುಟ್ಟಿ, ಸಾವಿರ ಸಲ ಸತ್ತಿದ್ದೇನೆ. ನನ್ನ ಈ ಊರು, ನನ್ನ ನರನಾಡಿ ಬೇರು; ತಾಯ ಮೊಲೆಹಾಲು ಎಂದು ಇಲ್ಲಿಗೆ ಬಂದವನು ನಾನು. ಈಗ ಇದೇ ಮೊಲೆದಿಬ್ಬ, ಇದೇ ತಾಯ ಗರ್ಭದಂತಹ ಈ ಕಣಿವೆ, ಪ್ರೀತಿಯಿಂದ ಕೈಬೀಸಿ ಕರೆಯುತ್ತಿದೆ ನನ್ನನ್ನು. ನನ್ನ ಕನಸುಗಳನ್ನು ಎಲ್ಲೂ, ಯಾರಲ್ಲೂ ಹೇಳಿಕೊಳ್ಳಲಿಲ್ಲ ನಾನು. ಸಾಯುವ ಮೊದಲು ನಾಲ್ಕು ಮಾತಾಡಿ ಸಾಯಿ ಎಂದು ಅವಕಾಶ ಕೊಟ್ಟದ್ದೀರಿ. ಎಷ್ಟೇ ಆಗಲಿ, ನಾನು ಕಣ್ಣೆದುರಿನ ಹುಡುಗ. ನೀವು ನನ್ನ ಬಗ್ಗೆ, ಇಂತಹ ಹುಚ್ಚನೊಬ್ಬ, ಈ ಊರಲ್ಲೇ, ನಮ್ಮ ಕೇರಿಯಲ್ಲೇ, ನಮ್ಮ ರಕ್ತ ಹಂಚಿಕೊಂಡು ಬದುಕಿದ್ದವನು, ಒಂದು ದಿನ, ಈ ಕೋಡುಗಲ್ಲ ತುದಿ ಏರಿ, ತನ್ನ ಕನಸ ಕಾಳುಗಳನ್ನು ಇಲ್ಲೆಲ್ಲ ಚೆಲ್ಲಾಡಿ, ಕಣಿವೆಯಾಳಕ್ಕೆ ಹಕ್ಕಿಯಂತೆ ತೇಲಿ, ತೇಲಿ ಹಾರಿ ಬಿದ್ದು ಪ್ರಾಣ ಬಿಟ್ಟ ಎಂದು ಕತೆ ಮಾಡಿ, ನಿಮ್ಮ ಮಕ್ಕಳಿಗೆ ಹೇಳಿ. ಕನಸೇ ಇಲ್ಲದ ಮನಸ್ಸುಗಳಿಗೆ ನನ್ನ ನೆನಪ ಕಾಳುಗಳನ್ನು ಬಿತ್ತಿ. ನಿಮ್ಮ ಪಾಪದ ಬಟ್ಟಲನ್ನು ಈ ಕಣಿವೆಗೆ ಎಸೆದುಬಿಡಿ.

ನಮ್ಮ ಪೂರ್ವಿಕರ ಅನಾಥ ಸೊಲ್ಲುಗಳ ಬುತ್ತಿ

ಕಟ್ಟಿಕೊಡಿ. ಕೊನೆ ಇಲ್ಲದ ಪಯಣದ ನನ್ನ ಬೆನ್ನಿಗೆ, ಎಲ್ಲ ವಿಕಾರಗಳನ್ನೂ ಹೇರಿ ತಳ್ಳಿಬಿಡಿ. ಅವ್ವಂದಿರ ಅವಮಾನದ ದಣಿವು, ದಾಹವನ್ನೆಲ್ಲ ನನ್ನ ನರಗಳಿಗೆ ಬಿಗಿದು ಕಳಿಸಿಕೊಡಿ. ನಿಮ್ಮ ಮಕ್ಕಳ ಹಸಿವನ್ನು, ನನ್ನ ಕಾಲಾಂತರದ ಒಡಲಿಗೆ ತುಂಬಿಕೊಡಿ. ನಿಮ್ಮ ನೋವುಗಳನ್ನೂ ನನ್ನ ರಟ್ಟೆಗೆ ಕಟ್ಟಿಕೊಡಿ. ಸದಾ ನಗುವೆಂಬ ಮಾಯಕಾತಿ ನಿಮ್ಮ ಮುಂದೆ ನರ್ತಿಸುತ್ತ ಬಿದ್ದಿರಲಿ. ಹೂ ಕೋಮಲ ಚೆಲುವೆಯರು, ಜೋಗುಳ ಹಾಡುತ್ತಾ, ಸಲ್ಲಸಲಲ್ಲೆ ಮಾತುಗಳನ್ನು ಆನಂದದಿ ಸವಿಯುತ್ತಿರಲಿ. ತಾಯಂದಿರ ಎದೆ ಹಾಲು ಜಿನುಗುತ್ತಾ, ಎಂದೆಂದೂ ಹೆಪ್ಪಿಡುವ ಕೈಗಳಿಗೆ ಒಳಗಾಗದಿರಲಿ. ಚೀತ್ಕಾರಗಳು, ಭೂಮಿಯ ಯಾವ ಮೂಲೆಯಲ್ಲೂ, ಇನ್ನೆಂದೂ ಕೇಳಿಸದಿರಲಿ. ಕ್ಷುದ್ರತೆಗಳು ನಾಶವಾಗಿ, ಮನುಷ್ಯನ ಸಹಜವಾದ ರಾಗಗಳು, ಎಲ್ಲೆಡೆ ಉಲಿಯಲಿ. ನಿಮ್ಮ ಕೈಗಂಟಿರುವ ಭೀಕರ ಕೃತ್ಯಗಳನ್ನು ಕಿತ್ತುಕೊಡಿ ನನಗೆ. ಸುಖದ ಸುಗ್ಗಿ, ಅದು ಎಲ್ಲಿರುವುದೋ, ಅದು ಯಾವತ್ತೂsss ನಿಮ್ಮ ಮನಸ್ಸಾಗಿರಲಿ ಎಂದು ನಾಗರಾಜ, ತನ್ನ ಪೂರ್ವಿಕರನ್ನೆಲ್ಲ ಆತ್ಮಕ್ಕೆ ತುಂಬಿಕೊಂಡಂತೆ ಮಾತನಾಡುತ್ತಿದ್ದ. ಅವನ ನುಡಿಗಳಿಗೆ, ಆ ಕತ್ತಲ ವಾತಾವರಣದಲ್ಲಿ ವಿಚಿತ್ರ ಗಾಂಭೀರ್ಯ ಬಂದುಬಿಟ್ಟಿತ್ತು. ದಿವ್ಯವಾದ ಸಂತನಂತೆ ಅವನ ಮುಖ ಹೊಳೆಯುತ್ತಿತ್ತು.

ನಾಗರಾಜ, ತನ್ನ ಹಾಡನ್ನು ಸಾವೇರಿ ರಾಗದಲ್ಲಿ, ಅಹೋರಾತ್ರಿಯಲ್ಲಿ ಹಾಡುವಂತೆ ನುಡಿಯುತ್ತಿದ್ದ. ನನ್ನ ಮಾತುಗಳನ್ನು ದಯಮಾಡಿ ಆಲಿಸಿ. ನನ್ನ ಬಗ್ಗೆ, ನಿಮ್ಮದೇ ನಾಲಿಗೆಯ ಉಯಿಲಿನಲ್ಲಿ, ನಿಮ್ಮದೇ ಆತ್ಮದ ಸಾಕ್ಷಿಯಲ್ಲಿ, ನಿಮ್ಮದೇ ಜೀವದ ಲಯದಲ್ಲಿ, ಉಸಿರಿನಲ್ಲಿ, ನೆತ್ತರಲ್ಲಿ, ಒಂದು ಪುಟ್ಟ ಹಾಡನ್ನು ಕಟ್ಟಿ, ಲಾಲಿ ಪದವಾಗಿಸಿ, ಮಕ್ಕಳ ಹಾಲುಗಲ್ಲದ ಗೆಜ್ಜೆ ಸದ್ದಿನಲ್ಲಿ, ಅವ್ವಾ ಎಂಬ ಕರೆಯಲ್ಲಿ, ನಾಳಿನವರ ಮುಂದೆ ಹಾಡಿಬಿಡಿ. ಕೊಲ್ಲುವ ಕೈಗಳು, ಹೂ ಮೊಗ್ಗಿನಂತೆ ಬಿರಿಯಲಿ. ಎಲ್ಲರೂ ಒಂದೇ ತೊಟ್ಟಿಲಲ್ಲಿ, ಒಂದೇ ಬೇರಿನಲ್ಲಿ, ಅನಂತತೆಯ ಹಾದಿಯಲ್ಲಿ ಸಾಗಲಿ ಎನ್ನುತ್ತ, ಎರಡೂ ಕೈಗಳ ಪಂಜುಗಳನ್ನು, ನಿಡಿದಾದ ಕೈಗಳಲ್ಲಿ, ಆಲಂಗಿಸಿಕೊಳ್ಳಲು ಕರೆವ ರೀತಿಯಲ್ಲಿ ಹಿಡಿದುಕೊಂಡಿದ್ದ. ಕೆಳಗೆ ನಿಂತಿದ್ದವರಿಗೆ ಯಾಕೋ ಕಸಿವಿಸಿಯಾಗುತ್ತಿತ್ತು. ಆ ಯಜಮಾನ, ನಾಗರಾಜನ ಬಳಿ ಬರಲು ಯತ್ನಿಸುತ್ತಾ, ಬದುಕುವ ಆಸೆಯಿದ್ದರೆ ಈಗಲಾದರೂ ಹೇಳು, ಎಂದ. ಆ ಮಾತು ನಾಗರಾಜನ ಹತ್ತಿರಕ್ಕೂ ಸುಳಿಯಲಿಲ್ಲ. ಅವನು ಹಿಂತಿರುಗದ ದಾರಿಗೆ ಹೊರಟುಹೋಗಿದ್ದ. ಕತ್ತಲ ಗರ್ಭದಲ್ಲಿ ಅವರೆಲ್ಲ ಮುಳುಗುತ್ತಿದ್ದರು.

ಎಲ್ಲರನ್ನೂ ಕೊನೆಯ ಬಾರಿಗೆ ಕತ್ತಲ ಅಸ್ಪಷ್ಟ ಬೆಳಕಲ್ಲಿ ನೋಡುತ್ತಾ, ನಿಟ್ಟುಸಿರು ಬಿಟ್ಟು, ಅವ್ವಾ ಅವ್ವಾ ಅವ್ವಾ ಎಂದು, ಕಣಿವೆಯು ಕಾರಿರುಳು ಮೊಳಗುವಂತೆ ಚೀತ್ಕಾರಗೊಂಡ. ಅವನ ಅಪ್ಪನ ಯಾವತ್ತಿನದೋ ನೆತ್ತರ ಕಲೆ ಬಂಡೆಮೇಲೆ ಅಂಟಿಕೊಂಡು, ಕಾಲದ ಮಡಿಕೆಗಳಲ್ಲಿ ಮುಚ್ಚಿಕೊಂಡದ್ದು, ಆ ಕೂಗಿಗೆ ಬೆಚ್ಚಿತು. ಜನಗಳ ಮಧ್ಯೆ ಯಾರೋ, ಅಯ್ಯೋ, ನೀನು ಸಾಯಬೇಡ; ಬಂದುಬಿಡು. ನಿನ್ನನ್ನು ನಾವು ಕ್ಷಮಿಸುತ್ತೇವೆ, ಹಿಂತಿರುಗು ಎಂದು ಕೂಗಿಕೊಂಡರು. ನಾಗರಾಜ, ಕೋಡುಗಲ್ಲ ತುದಿಯಲ್ಲಿ, ಕೊನೆಯ ಉಸಿರನ್ನು ಎಳೆದುಕೊಳ್ಳುತ್ತಿದ್ದ. ಯಾರೋ ಅವನನ್ನು ಹಿಡಿದುಕೊಳ್ಳಲು ಅವನೆಡೆಗೆ ಹೆಜ್ಜೆಹಾಕಿದರು. ನಿಲ್ಲೀ ಅಲ್ಲೇ ನಿಲ್ಲಿ. ಒಂದು ಇಂಚೂ ಮುಂದೆ ಬರದಿರಿ. ಈ ತುದಿಯ ಕಡಿದಾದ ಗರಿಯ ಮೇಲೆ ನಿಂತಿರುವ ನನ್ನನ್ನು ನೀವ್ಯಾರೂ ಹಿಡಿಯಲಾರಿರಿ. ನನಗೆ ಹಿಂತಿರುಗಿ ಬರುವ ದಾರಿಯೇ ಗೊತ್ತಿಲ್ಲ ಎಂದು ಸರಿಸುತ್ತಾ, ಕೆಳಕ್ಕೆ ಹಾರಿಬಿಡುತ್ತೇನೆ ಹೊರಟು ಹೋಗಿ ಎಂದ. ಅವನನ್ನು ಹಿಡಿದುಕೊಳ್ಳಲು ಸಾಧ್ಯವಿರಲಿಲ್ಲ. ಹಿಡಿಯ ಹೋದರೆ, ತಮ್ಮನ್ನೂ ಅಪ್ಪಿಕೊಂಡು ಕೆಳಕ್ಕೆ ಹಾರಿದರೇ ಎಂದು, ಹಾಗೇ,

ಅಲ್ಲೇ ಕೆಳಗೆ, ಅಸಹಾಯಕತೆಯಿಂದ, ಅಯ್ಯೋ ಬಾರೋ, ನೀನು ಸಾಯುವುದು ನಮಗೆ ಇಷ್ಟವಿಲ್ಲ, ಬಂದು ಬಿಡು ಎಂದು ಯಾರ್‍ಯಾರೋ ಗೋಗರೆದರು.

ಇನ್ನು ತಡ ಮಾಡಬಾರದೆಂದು ನಾಗರಾಜ, ಓಡಿಹೋಗಿ, ಆಳ ಪ್ರಪಾತಕ್ಕೆ ಧುಮುಕುವಂತೆ, ಕಣಿವೆಯಾಳಕ್ಕೆ ಜಗಿದ. ಅವನ ಎರಡೂ ಕೈಗಳಿಂದ ಪಂಜುಗಳು ರಭಸವಾಗಿ ಉರಿಯುತ್ತ, ಅವನು ಹೇಗೆ ಬೀಳುತ್ತಿದ್ದಾನೆಂದು ಆ ಕಣ್ಣುಗಳಿಗೆ ತೋರುತ್ತಾ, ಈ ಕತ್ತಲಲ್ಲೀ ಕಣಿವೆಯಲ್ಲಿ, ಮೆಲ್ಲಮೆಲ್ಲಗೆ ತೇಲಿ, ಹಾರಿ, ಜಾರು ಎಂಬಂತೆ ಆ ಬೆಳಕು ದಾರಿ ತೋರುತ್ತಿತ್ತು. ಓ, ಅವನು ಹೊರಟೇ ಹೋದನಲ್ಲಾ ಎಂದು ಯಜಮಾನರು ತಲೆ ಮೇಲೆ ಕೈ ಹೊತ್ತು ಕಾಲಾಂತರದಿ ದಣಿದವರಂತೆ ಕುಳಿತುಬಿಟ್ಟರು. ಇನ್ಯಾರೋ, ಇದೆಲ್ಲ ಆಗಬೇಕೆಂದು ಮೊದಲೇ ನಿರ್ಧಾರವಾಗಿರುತ್ತದೆ, ಇದನ್ನು ನಾವು ಮಾಡಿದ್ದಲ್ಲ, ನಡೆಯಿರಿ ಎಂದು ಸಮಾಧಾನ ಹೇಳುತ್ತಿದ್ದರು.

ಎಲ್ಲರೂ ಇಳಿದುಹೋಗಿದ್ದರು. ಎಂಥದೋ ಸಂಕಟ ಈಗವರನ್ನು ಸುತ್ತಿಕೊಂಡಿತು. ಎಂದೆಂದೂ ಸಾವಿನಿಂದ ಸುಸ್ತಾದವರಂತೆ, ಭಾರವಾದ ಮನಸ್ಸಿನಿಂದ, ದಿಬ್ಬವನ್ನು ಕತ್ತಲಲ್ಲಿ ಇಳಿಯತೊಡಗಿದರು. ಆಗಲೇ ಪಂಜುಗಳು ಉರಿದು ತೀರಿಹೋಗಿದ್ದವು. ಆಕಾಶದ ನಕ್ಷತ್ರಗಳು ಮಂಜುಗಣ್ಣು ಬಿಡುತ್ತಿದ್ದವು. ಅವನು ಸಾಯಬಾರದಿತ್ತೆಂದು ಈಗವರೇ ಹಪಹಪಿಸುತ್ತಿದ್ದರು. ಮತ್ತೆ ಮತ್ತೆ ಆ ಬೆಟ್ಟದ ತುದಿಯಲ್ಲಿ ಅವನದೇ ಮಾತುಗಳು ಮೊಳೆಯುತ್ತಿದ್ದವು. ಬೆಟ್ಟದ ಕಿಬ್ಬರಿಗೆ ಇಳಿಯುವ ಹೊತ್ತಿಗೆ, ಕೋಳಿ ಕೂಗುವ ಸದ್ದು ಕೇಳಿಸಿತು. ಅವರೆಲ್ಲ ಸಾವಿನ ಸೂತಕದಿಂದ ಕಂಗಾಲಾಗಿದ್ದರು. ಅವನ ಅವ್ವ ಅಳಲ ಹಾಡನ್ನು ಮುಂಜಾವದ ಕೋಳಿಗಳ ಗಂಟಲಿಂದ ಉಲಿಯುತ್ತಿದ್ದಳು. ಮೂಡಲಲ್ಲಿ, ಅದೇ ಕೋಡುಗಲ್ಲ ಕಣಿವೆಯ ಇಕ್ಕಟ್ಟಿನಲ್ಲಿ ಸೂರ್ಯ, ಮೂಡಲು ದಿಗಂತವನ್ನು ಆಗಲೇ ಕೆಂಬಣ್ಣದ ಓಕುಳಿಗೆ ಸಿದ್ಧಗೊಳಿಸುತ್ತಿದ್ದ. ಚಿಗುರಿರುವ ಹಗಲು, ಕತ್ತಲೆಯನ್ನು ಜಗಿಯುತ್ತಾ, ಬಿಸಿಲನ್ನು ಈಗ ಅಲ್ಲೆಲ್ಲ ಚೆಲ್ಲಾಡುತ್ತಿತ್ತು.



ಬೆಟ್ಟದ ಜನ ಬಯಸಿದ್ದಂತೆಯೆ ಆಯಿತು





ಜನಪದ ಬಂಗಾಳಿ

ಸಂಗ್ರಹ: ಎ.ಕೆ. ರಾಮಾನುಜನ್
ಕನ್ನಡಕ್ಕೆ: ಮಹಾಬಲೇಶ್ವರರಾವ್

# ಐದನೆಯ ಮಡಕೆ

ಕನಸುಗಾರರಾದ ಓರ್ವ ಬಡದಂಪತಿಗಳ ನೆರೆಮನೆಯಲ್ಲಿ ಗೋಪಾಲಭಾರ್ ವಾಸವಾಗಿದ್ದ. ಈ ದಂಪತಿಗಳ ಹಗಲುಗನಸು ಕಾಣುವ ಪ್ರವೃತ್ತಿಯನ್ನು ಯಾರಿಂದಲೂ ತಿದ್ದಲು ಸಾಧ್ಯವಾಗಲಿಲ್ಲ. ಒಂದು ದಿನ ಈ ದಂಪತಿಗಳು, ತಾವು ಕಂಡ ಹಗಲುಗನಸುಗಳನ್ನು ಪರಸ್ಪರ ಹೇಳಿಕೊಳ್ಳುತ್ತಿದ್ದುದನ್ನು ಗೋಪಾಲ ಕೇಳಿಸಿಕೊಂಡ. ಗಂಡ ಹೇಳಿದ, ''ನನ್ನ ಕೈಯಲ್ಲಿ ಒಂದಿಷ್ಟು ಕಾಸಾದರೆ, ನಾನೊಂದು ದನ ಕೊಂಡುಕೊಳ್ತೇನೆ.'' ಆಗ ಅವನ ಹೆಂಡತಿ, ''ನಾನು ಹಾಲು ಕರೆಯುತ್ತೇನೆ. ಆಗ ನಮಗೆ ತುಂಬ ಮಡಕೆಗಳು ಬೇಕಾಗುತ್ತವೆ. ಪೇಟೆಗೆ ಹೋಗಿ ನಾನು ಕೆಲವು ಮಡಕೆಗಳನ್ನು ಕೊಂಡುಕೊಳ್ಳಬೇಕು'' ಎಂದಳು.

ಮರುದಿನ ಅವಳು ಪೇಟೆಗೆ ಹೋಗಿ ಮಡಕೆಗಳನ್ನು ಕೊಂಡುಕೊಂಡಳು.

''ಏನು ಕೊಂಡುಕೊಂಡೆ?'' ಎಂದು ಗಂಡ ಕೇಳಿದ.

''ಏನಿಲ್ಲ, ಮಡಕೆಗಳನ್ನು ಕೊಂಡುಕೊಂಡೆ, ಒಂದು ಹಾಲಿಗೆ, ಒಂದು ಮಜ್ಜಿಗೆಗೆ, ಒಂದು ಬೆಣ್ಣೆಗೆ, ಇನ್ನೊಂದು ತುಪ್ಪಕ್ಕೆ.''

''ಅದು ಸರಿ. ಆ ಐದನೆಯ ಮಡಕೆ ಯಾವುದಕ್ಕೆ?''

''ಹೆಚ್ಚಿಗೆ ಉಳಿಯುವ ಹಾಲನ್ನು ನನ್ನ ತಂಗಿಗೆ ಕೊಡ್ಲಿಕ್ಕೆ.''

''ಏನು? ನಿನ್ನ ತಂಗಿಗೆ ಹಾಲು ತಕ್ಕೊಂಡು ಹೋಗಿ ಕೊಡ್ತೀಯಾ? ಎಷ್ಟು ಸಮಯದಿಂದ ನೀನಿದನ್ನು ಮಾಡ್ತಾ ಇದ್ದೀಯಾ? ನನಗೆ ನೀನು ಇದನ್ನು ಹೇಳಲೇ ಇಲ್ಲ? ನನ್ನ ಹತ್ರ ಒಂದು ಮಾತು ಕೇಳಬೇಡವೇ?'' ಎಂದು ಗಂಡ ಕಿರುಚಿದ. ಹೆಂಡತಿಯ ಮೇಲಿನ ಸಿಟ್ಟಿನಿಂದ, ಆ ಮಡಕೆಗಳನ್ನು ನೆಲಕ್ಕೆ ಅಪ್ಪಳಿಸಿ, ಪುಡಿ ಮಾಡಿದ.

ಹೆಂಡತಿ ಗೊಣಗಿದಳು, ''ದನ ನೋಡಿಕೊಂಡು ಹಾಲು ಕರೆಯುವವಳು ನಾನು. ಹೆಚ್ಚಿಗೆ ಉಳಿದ ಹಾಲನ್ನು ನನ್ನ ಖುಷಿ ಬಂದಂತೆ ವಿಲೇವಾರಿ ಮಾಡ್ತೇನೆ.''

''ದರಿದ್ರ ಹೆಣ್ಣೇ, ಇಡೀ ದಿನ ಬೆವರು ಸುರಿಸಿ ದುಡಿದು ದನ ಕೊಂಡುಕೊಳ್ಳುವವನು ನಾನು ಹೆಚ್ಚಿಗೆ ಉಳಿದ ಹಾಲನ್ನು ನೀನು ನಿನ್ನ ತಂಗಿಗೆ ಕೊಡ್ತೀಯಾ? ಮೊದ್ಲು ನಿನ್ನನ್ನು ಕೊಂದುಬಿಡ್ತೇನೆ'' ಎಂದು ಗಂಡ ಗುಡುಗಿದ. ಇನ್ನೂ ಕೆಲವು ಮಡಕೆಗಳನ್ನು, ಪಾತ್ರೆಗಳನ್ನು ಅವಳ ಮೈ ಮೇಲೆ ಎಸೆದ.

ಪರಿಣಾಮ ವಿಪರೀತವಾಗುತ್ತದೆಂದು ಭಾವಿಸಿದ ಗೋಪಾಲ, ಅವರ ಮನೆಗೆ ಹೋದ. "ಏನು ವಿಷಯಾ? ನೀನ್ಯಾಕೆ ಪಾತ್ರೆ-ಪಗಡಿ ಎಲ್ಲ ಎಸೀತಿದ್ದೀಯಾ?" ಎಂದು ಮುಗ್ಧವಾಗಿ ಕೇಳಿದ.

"ಇವಳು ನಮ್ಮ ದನದ ಹಾಲನ್ನು ತನ್ನ ತಂಗಿಗೆ ಕೊಡ್ತಿದ್ದಾಳೆ."

ಗೋಪಾಲ ಕೇಳಿದ "ನಿಮ್ಮ ದನವೇ?"

"ಹೌದು, ನನ್ನ ಕೈಯಲ್ಲಿ ಕಾಸಾದಾಗ ನಾನು ಕೊಂಡುಕೊಳ್ಳುವ ದನ."

"ಓ! ಅದಾ! ಈಗ ನಿನ್ನ ಹತ್ರ ದನ ಇದ್ಯಾ? ಇಲ್ಲವಲ್ಲಾ!" ಎಂದ ಗೋಪಾಲ.

ಆಗ ಗಂಡ ಹೇಳಿದ, "ಸ್ವಲ್ಪ ತಡಿ, ನಾನು ಒಂದು ದನ ತರುವವನಿದ್ದೇನೆ."

"ನಿಜವಾಗ್ಲೂ! ಈಗ ನನ್ನ ಹಿತ್ತಲಲ್ಲಿ ಏನಾಗ್ತಿದೆ ಅಂತ ಗೊತ್ತಾಯ್ತು!" ಎಂದು ಹೇಳಿದ ಗೋಪಾಲ ಒಂದು ಕೋಲು ತಕ್ಕೊಂಡು ಅವನನ್ನು ಹೊಡೆಯತೊಡಗಿದ.

"ನಿಲ್ಲಿಸು ಮಹಾರಾಯ! ನಿಲ್ಲಿಸು. ಯಾಕೆ ಹೊಡೀತಾ ಇದ್ದೀಯಾ!"


ದೇವದಾಸ್

"ನಿನ್ನ ದನ! ನಿನ್ನ ದನ ನನ್ನ ಹಿತ್ತಲಲ್ಲಿರುವ ಅವರೆಗಿಡ ಹಾಗೂ ಕುಂಬಳ ಬಳ್ಳಿಯನ್ನು ತಿನ್ತಾ ಇದೆ. ನೀನು ನನ್ನ ಹಿತ್ತಲಿಗೆ ದನ ಬಿಡ್ತಾ ಇದ್ದೀಯಾ?"

"ಏನು? ಅವರೆ ಮತ್ತು ಕುಂಬ್ಳ ಬಳ್ಳಿಯೆ? ನಿನ್ನ ಹಿತ್ತಲು ಎಲ್ಲಿದೆ?" "ಅದಾ? ನಾನು ಆ ಗಿಡಗಳನ್ನು ನನ್ನ ಹಿತ್ತಲಲ್ಲಿ ನೆಡುವವನಿದ್ದೇನೆ. ನಾನು ಕೆಲವು ತಿಂಗಳಿಂದ ಆ ಬಗ್ಗೆ ಯೋಚಿಸಿದ್ದೇನೆ. ಆದರೆ ನಿನ್ನ ದನ ಎಲ್ಲವನ್ನು ಹಾಳು ಮಾಡ್ತಿದೆ."

ನೆರೆಮನೆಯವರಿಗೆ ಎಲ್ಲಾ ಅರ್ಥವಾಯಿತು. ಈಗ ಅವರು ಜೋರಾಗಿ ನಕ್ಕುಬಿಟ್ಟರು.



(ನ್ಯಾಷನಲ್ ಬುಕ್ ಟ್ರಸ್ಟ್‌ನ 'ಭಾರತೀಯ ಜನಪದ ಕತೆಗಳು' ಪುಸ್ತಕದಿಂದ)

ಸಾಹಿತ್ಯಿಕ ಮಾತುಕತೆಗಾಗಿ ಈ ತಿಂಗಳಿಂದ 'ಮಂಟಪ' ಹೆಸರಿನಲ್ಲಿ ಅಂಕಣವೊಂದನ್ನು (ಪುಟ 150) ಆರಂಭಿಸುತ್ತಿದ್ದೇವೆ. 'ಭಾವನಾ'ದಲ್ಲಿ ಪ್ರಕಟಗೊಂಡ ಬರಹಗಳ ಕುರಿತ ಅಥವಾ ಸ್ವತಂತ್ರ ಹೊಸ ಹೊಳಹು, ಚಿಂತನೆಗಳನ್ನು ಪ್ರಸ್ತಾಪಿಸುವ ಕಿರುಬರಹಗಳಿಗೆ ಈ ಮುಕ್ತಾಂಗಣ ಮೀಸಲು.




ಪ್ರೊತ್ರ್ನ ಎರಡು ದಿನವಾಯಿತು. ರಸೂಲ ಭಾಯಿ ಮಸೀದೆ ಬಿಟ್ಟು ಈಚೆಗೆ ಬರಲಿಲ್ಲ.

ಮೊನ್ನೆ, ಬೆಳಗಿನ ನಮಾಜಿಗೆಂದು ಮನೆಯಿಂದ ಮಸೀದೆಗೆ ಹೋದವನು, ಹಸಿವು, ನೀರಡಿಕೆ ಎನ್ನದೆ, ಕೈಯಲ್ಲಿ 'ತಸ್‌ಬಿ' ಹಿಡಿದುಕೊಂಡು, ''ಬಿಸ್ಮಿಲ್ಲಾ...ಬಿಸ್ಮಿಲ್ಲಾ'' ಎಂದು ಕುಳಿತೇ ಇದ್ದ. ಗಂಡನ ಅವಸ್ಥೆಗಾಗಿ ನೂರಬಿ, ಮನೆಯಲ್ಲಿ ಮುಸಿಮುಸಿ ಎನ್ನುತ್ತ ಕುಳಿತಿದ್ದರೆ, ತಂದೆಯನ್ನು ಮನೆಗೆ ಎಬ್ಬಿಸಿಕೊಂಡು ಹೋಗಲು ಬಂದ ಆದಮ್‌ನು ಚಡಪಡಿಸುತ್ತಲೇ ಹಿಂತಿರುಗಿದ್ದ.

ಹೀಗೆ ಕುಳಿತಿದ್ದರೆ, ಎಪ್ಪತ್ತು ವರ್ಷದ ಅವನ ದೇಹಸ್ಥಿತಿ ಏನಾಗಬೇಕು ಎಂದು, ಮಸೀದೆಯ ಪೇಶ್ ಇಮಾಮರು, ಜಮಾತಿನ ಹಿರಿಯರಾದ ಇಬ್ರಾಹಿಂ ಸಾಹೇಬರು ಕಳವಳಿಸಿದರು. ಬಂಡೆಗಲ್ಲಿನ ಮೌನದಲ್ಲಿದ್ದ ಅವನನ್ನು ಅಲ್ಲಾಡಿಸಲು ಅವರಿಂದ ಸಾಧ್ಯವಾಗಲಿಲ್ಲ. ಅದಮ್ಯ ಜಿಗುಟುತನದ ಆ ಬಡಕಲು ಶರೀರವನ್ನು ತಳಮಳದ ಅಚ್ಚರಿಯಲ್ಲಿ ಗಮನಿಸುತ್ತ ಕುಳಿತರು.

ಟಪ್ಪುಗಲ್ಲಿಯ ಕೆಲವರು, ಅವನ ಈ ವರ್ತನೆಯನ್ನು, ನಾಟಕ ಎಂಬಂತೆ ಗಪ್ಪಚುಪ್ಪನೆ ಆಡಿಕೊಂಡರು. ಬಹಳಷ್ಟು ಮಂದಿ, ಸಂಭಾವಿತ ಹಟ



ಅಬ್ಬಾಸ್ ಮೇಲಿನಮನಿ

# ರಸೂಲಭಾಯಿ ಎಂಬ ಮನುಷ್ಯ



ಹಿಡಿದು ಕುಳಿತಿದ್ದಾನೆಯೆಂದರೆ, ಆಘಾತವೇ ಕಾದಿದೆ ಎಂಬಂತೆ, 'ಏನಾದರೂ ಹೆಚ್ಚು-ಕಮ್ಮಿಯಾದರೆ ಗಲ್ಲಿ ರಣರಂಗವಾಗುವುದೋ, ಕಬರ್‌ಸ್ತಾನವೋ?' ಎಂದು ಭೀತಿಯಲ್ಲಿ ಹೊಯ್ದಾಡಿಕೊಂಡರು. ಹೀಗೆ ಹೊಯ್ದಾಡುವ ಮನಸ್ಸುಗಳು ರಸೂಲ ಭಾಯಿಗಾಗಿ ಮರುಗತೊಡಗಿದವು. ಅವರ ದೃಷ್ಟಿಯಲ್ಲಿ ಅವನು ಪರಿಶುದ್ಧ ಮನುಷ್ಯನಾಗಿದ್ದ, ಗಲ್ಲಿಯ ಹೃದಯವಾಗಿದ್ದ.

ಅವನಿಗೆ ಗಲ್ಲಿಯ ಒಳಪದರುಗಳೆಲ್ಲ ಗೊತ್ತು. ಅಲ್ಲಿ ನಾಲ್ಕಾರು ಮನೆಯವರು ಅಮೀರರು. ಪರಸ್ಪರ ಸ್ಪರ್ಧೆಯಲ್ಲಿ ತೊಡಗಿದವರು. ಇನ್ನುಳಿದ ಬಹುಪಾಲು ಮಂದಿ ಗರೀಬರು. ಬಳೆ ಮಾರುವವರು, ಸೀರೆ ನೇಯ್ಯುವವರು, ಮೋಡಕಾ ಸಂಗ್ರಹಿಸುವವರು, ಊರೂರು ಸಂತೆ ಅಲೆದು, ಚಪ್ಪಲಿ, ರೆಡಿಮೇಡ್ ಅರಿವೆ, ಮಸಾಲಿ ಮಾರುವವರು, ಬೀಡಿ ಕಟ್ಟುವವರು, ಹಮಾಲಿ ಮಾಡುವವರು, ಬದುಕಿಗಾಗಿ ತಡಕಾಡಿದರೆ, ಜೀವನೋಪಾಯಕ್ಕೆ ತಮ್ಮದೂ ಅಳಿಲು ಸೇವೆ ಎಂಬಂತೆ ಶಾಲೆಗೆ ಬೆನ್ನು ತಿರುಗಿಸಿದ ಮಕ್ಕಳು, ಗ್ಯಾರೇಜು, ಹೋಟೆಲ್, ಸೈಕಲ್ಲು, ಕಿರಾಣಿ ಅಂಗಡಿಗಳಲ್ಲಿ ತಮ್ಮ ಹೊಂಗನಸುಗಳನ್ನು ಒತ್ತೆ ಇಟ್ಟಿರುವರು. ರಸೂಲಭಾಯಿಯ ಅಂತಃಕರಣ ಅವರೊಂದಿಗೆ ಸಂಗಮಿಸಿರುವುದು. ಹೀಗೆ ಆಗಬೇಕಾಗಿತ್ತು ಎಂದು ಅವರು ಹೇಳಿದರೆ ತೀರಿತು, ಅವನು ಕೂಡಲೇ ಅವರಿಗೆ ನೆರವಾಗುವನು. ಅಬ್ದುಲ್‌ಖಾದರ್ ರೇಶನ್ ಕಾರ್ಡ್ ಬೇಡಿದರೆ ತಂದುಕೊಟ್ಟಾನು. ಗಂಡನನ್ನು ಕಳೆದುಕೊಂಡ ನಜಿಮಾಳಿಗೆ ವಿಧವಾ ಪೆನ್ಶನ್ನು, ಬುಡನ್‌ಸಾಬನಿಗೆ ವೃದ್ಧಾಪ್ಯ ವೇತನ, ಕಾಲಿಲ್ಲದ ನೂರಾಲಿಗೆ ಸಾಲ ಸೌಲಭ್ಯ ಒದಗಿಸಿ ಕೊಟ್ಟಾನು. ಓದಿದ ಹುಡುಗ ಅಕಬರ್‌ನಿಗೆ ಕೆಲಸ ಕೊಡಿಸುವಲ್ಲಿ ಆಸ್ಥೆ ವಹಿಸಿಯಾನು. ಮಸೀದೆಯ ಕೆಲಸವೆಂದರೂ ಸರಿ, ಸಮಾಜದ ಕಾರ್ಯವೆಂದರೂ ಸರಿ, ಮನೆಯ ಚಿಂತೆ ಮರೆತು ಬರುವನು. ಅದಕ್ಕಾಗಿ ಪೇಶ ಇಮಾಮರು ಅವನನ್ನು 'ಗಲ್ಲಿಯ ಕಾಮಧೇನು' ಎಂದು ಬಾಯಿ ತುಂಬಿ ಕರೆದದ್ದು.

ರಸೂಲ್‌ಭಾಯಿ ಯಾವಾಗಲೂ ಧರಿಸುತ್ತಿದ್ದುದು ಸ್ವಚ್ಛ ಖಾದಿ ಧೋತಿ. ಮೇಲೊಂದು ನೆಹರೂ ಶರ್ಟು. ಅದರ ಮೇಲೊಂದು ಹಸಿರು ಜಾಕೀಟು. ತಲೆಯ ಮೇಲೆ ನೀಟಾದ, ಶುಭ್ರ ಗಾಂಧಿ ಟೊಪ್ಪಿಗೆ. ಅವನನ್ನು ರಾಜಕಾರಣಿ ಎಂಬಂತೆ ಅವು ನಿರೂಪಿಸುತ್ತಿದ್ದವು. ನಿರೂಪಿಸುವುದೇನು, ಅವನು ರಾಷ್ಟ್ರೀಯ ಪಕ್ಷವೊಂದರ ಕಾರ್ಯಕರ್ತನಾಗಿದ್ದ. ದೇಶಕ್ಕೆ ಸ್ವಾತಂತ್ರ್ಯ ಬರುವಾಗಿನ ಸಂದರ್ಭದಿಂದಲೂ ಆ ಪಕ್ಷದಲ್ಲಿಟ್ಟುಕೊಂಡ ಅವನ ನಿಷ್ಠೆ, ಶ್ರದ್ಧೆಗಳು ಯಾವ ಕ್ಷಣಕ್ಕೂ ಪಲ್ಲಟಗೊಂಡಿರಲಿಲ್ಲ. ಸ್ವಾತಂತ್ರ್ಯ ಚಳವಳಿ ಸಮಯದಲ್ಲಿ ಅವನಿಗೆ ಹದಿನಾರರ ವಯಸ್ಸು. ಮಹಾತ್ಮಾಗಾಂಧಿಯವರ ಮೋಡಿಗೆ ಒಳಗಾಗಿ, ವಾರಿಗೆಯವರೊಂದಿಗೆ ಕೂಡಿ, ರಾತ್ರಿಯೆಂದರೆ ರಾತ್ರಿ; ಹಗಲೆಂದರೆ ಹಗಲು, ವಿದ್ಯುತ್ ಕಂಬದ ತಂತಿ ಕತ್ತರಿಸಿದ್ದು, ಸರಕಾರಿ ಕಛೇರಿಗಳ ಮೇಲೆ ಭಾರತದ ಧ್ವಜ ಹಾರಿಸಿ "ವಂದೇ ಮಾತರಂ" ಎಂದು ಘೋಷಿಸಿದ್ದು, ಬ್ರಿಟಿಷರು ಓಡಾಡುವ ರಸ್ತೆಗೆ ಕಲ್ಲು ಹಾಕಿದ್ದು, ಲಾಟಿಯ ಏಟು ತಿಂದು

ಜೇಲಿಗೆ ಬಿದ್ದದ್ದು. ಅದಕ್ಕೆ ಸಾಕ್ಷಿಯೋ ಎಂಬಂತೆ,
ಅವನ ಬಲಗಾಲಿನ ಮೀನಗುಂಡದ ಮೇಲೆ, ಗಾಯದ
ಗುರುತು ಸ್ಪಷ್ಟವಾಗಿರುವುದು. ಪೊಲೀಸರ ಬೂಟು
ಗಾಲಿನ ಒದೆತದ ಕುರುಹು ಅದು. ಬೂಟಿನ
ಅಟ್ಟೆಯ ಮೊಳೆಯೊಂದು ಅವನ ಮೀನಖಂಡದ
ಮಾಂಸವನ್ನೇ ಕಬಳಿಸಿ, ರಕ್ತ ಕೆಡಿಸಿ, ಕೀವು ಬಸಿದು
ನರಕಯಾತನೆ ನೀಡಿದ್ದನ್ನು ಈಗಲೂ ಅವನು
ನೆನಪಿಸಿಕೊಳ್ಳುವನು. ಇಷ್ಟಾದರೂ ಅವನು ಸ್ವಾತಂತ್ರ್ಯ
ಯೋಧರ ಪಿಂಚಣಿಯನ್ನಾಗಲಿ, ಸರ್ಕಾರದ ಯಾವುದೇ
ಸವಲತ್ತುಗಳನ್ನಾಗಲಿ ಸ್ವೀಕರಿಸಲು ತಯಾರಿ
ದಿಲ್ಲ. ತನ್ನ ದೇಶಕ್ಕಾಗಿ ಆ ಕೆಲಸ ಮಾಡಿದ್ದು
ಎಂದು, ನಿರುಮ್ಮಳಾಗಿ ಹೇಳುವ ಮನುಷ್ಯ ಅವನು.
ಪಕ್ಷದಲ್ಲೂ ಹಾಗೆಯೇ ಕೆಲಸ ಮಾಡುವನು.

ಅವನ ಮುಂದೆ ಹುಟ್ಟಿದ ಕೂಸುಗಳಿಲ್ಲಿ, ಈಗ
ಗರಿಗರಿ ಖಾದಿಯಲ್ಲಿ, ಪ್ರಚಂಡ ರಾಜಕಾರಣಿ
ಗಳಂತೆ ಡೌಲಾಗಿರುವರು. ಅವರಿಗೆ ಗಾಂಧಿ
ಗೊತ್ತಿಲ್ಲ. ಗುಲಾಮಗಿರಿಯ ತಳಮಳವಿಲ್ಲ.
ಸ್ವಾತಂತ್ರ್ಯದ ಅರ್ಥವೂ ಗೊತ್ತಿಲ್ಲ. ಹೋರಾಟ
ವೆಂದರೆ ಅಧಿಕಾರಕ್ಕಾಗಿ ಕಚ್ಚಾಡುವುದು, ರಾಕ್ಷಸ
ನಾಗುವುದು. ಪ್ರಳಯದ ಆಟವಾಡುವುದು
ಎಂಬ ಗ್ರಹಿಕೆಯಲ್ಲಿ ಊರ್ಧ್ವಗೊಳ್ಳುವ ಅವ
ರನ್ನು, ರಸೂಲಭಾಯಿ ತಣ್ಣಗೆ ನೋಡುವನು.
ಒಮ್ಮೊಮ್ಮೆ ಅವರ ಹತ್ತಿರ ಕುಳಿತರೆ, ಪಕ್ಷದ
ಹಿತಾಸಕ್ತಿ ಕುರಿತು ತೀವ್ರವಾದ ಕಾಳಜಿ ಅಭಿವ್ಯಕ್ತಿ
ಸುವನು. ಬಡವರ ಪರ ಕೆಲಸ ಮಾಡಲು ಒತ್ತಾ
ಯಿಸುವನು. ದೇಶವನ್ನು, ಗಾಂಧಿಯಂತೆ ಹಚ್ಚಿ
ಕೊಳ್ಳುವ, ಶ್ರದ್ಧೆಯ ಮಾತಾಡುವನು. ಕಪ್ಪು
ವ್ಯವಹಾರಗಳಲ್ಲಿ ಗೌಪ್ಯವಾಗಿರುವ ಮನಸ್ಸಿನ
ರಾಜಕಾರಣಿಗಳಿಗೆ ರಸೂಲಭಾಯಿಯ ಮಾತು
ಹಿಡಿಸುವುದೆಂತು? ಅವರೆಲ್ಲರೂ ಅವನನ್ನು
ಬೇರೆ ಲೋಕದವನು ಎಂಬಂತೆ ನೋಡುವರು.
ತಮ್ಮ ತಮ್ಮ ಸಂಜ್ಞೆಗಳಲ್ಲಿ ಅವನ ವ್ಯಕ್ತಿತ್ವ ಕುರಿತು
ಉಡಾಫೆ ತೋರುವರು. ಗಾಂಧಿ ದೆವ್ವ ಬಡಿದು
ಕೊಂಡವನು ಎಂದು ಚ್ಯಾಷ್ಟಿ ಮಾಡುವರು.

ಆದರೆ ಮುಖದೆದುರು ಅವನನ್ನು ಧಿಕ್ಕರಿ
ಸುವ ಧಾರ್ಷ್ಟ್ಯ ಅವರಿಗಿಲ್ಲ. ಹಳೆಯ ತಲೆಮಾರಿನ
ರಾಜಕಾರಣಿಗಳು ರಸೂಲಭಾಯಿಯ ಮೇಲಿಟ್ಟಿ
ರುವ ಪ್ರೀತಿ, ವಿಶ್ವಾಸವನ್ನು ಅವರು ಬಲ್ಲರು.
ಅವನದು ಪರಿಶುದ್ಧ ರಾಜಕಾರಣ. ಆಸೆ
ಮಾಡಿದ್ದರೆ ಅವನು ದೊಡ್ಡ ದೊಡ್ಡ ಹುದ್ದೆಗಳಲ್ಲಿ
ಇರಬಹುದಾಗಿತ್ತು. ಆದರೆ ಬಂದ ಅವಕಾಶ
ಗಳನ್ನು ಅವನು ನಯವಾಗಿ ಬೇರೆಯವರಿಗೆ
ವರ್ಗಾಯಿಸಿದ್ದಿದೆ. ಹೀಗಾಗಿ, ಅಧಿಕಾರದಲ್ಲಿ
ದ್ದವರು ಮಾಡಲಾರದಷ್ಟು ಕೆಲಸಗಳನ್ನು ಅವನು
ಮಾಡುವ ಸಾಮರ್ಥ್ಯ ಹೊಂದಿರುವನು. ಆದರೆ
ತನಗಾಗಿ ಏನೊಂದನ್ನೂ ಮಾಡಿಕೊಳ್ಳದಿರುವ
ಮನುಷ್ಯ ಅವನು.

ಅವನ ಬದುಕಿನ ಚಲನೆಗೆ ಆಧಾರವಾಗಿ
ರುವ ಪಾನ್‌ಬೀಡಾ ಅಂಗಡಿ, ಊರಿನ ಗಾಂಧಿ
ಚೌಕದಲ್ಲಿರುವುದು. ಬೆಳಗಿನ ಆರುಗಂಟೆಯಿಂದ
ರಾತ್ರಿ ಸಿನೆಮಾ ಬಿಡುವತನಕ ಅದು ತೆರೆದಿರು
ವುದು. ಜನದಟ್ಟಣೆ ಅಲ್ಲಿ ನಿರಂತರವಾಗಿರುವ
ದರಿಂದ ವ್ಯಾಪಾರವೂ ಚೆನ್ನಾಗಿದೆ. ಅಂಗಡಿಯ
'ಕಲಕತ್ತಾ ಪಾನ್ ಮಸಾಲ' ಮಂದಿಯನ್ನು ತೀವ
ಆಕರ್ಷಿಸುವುದು. ಈ ಅಂಗಡಿಯನ್ನು ಇಡು
ಮೊದಲು ರಸೂಲಭಾಯಿ, ಒಂದು ರೊಟ್ಟಿಗಾ
ತ್ತಡಕಾಡಿದ್ದಿದೆ. ಹೆಂಡತಿ ನೂರಬಿ ವಿಪರೀ
ತಲೆನೋವಿನಿಂದ ಬಳಲುತ್ತಿದ್ದಾಗ, ಅವಳ ಲ
ದೊಳಗಿನ ಬಂಗಾರದ ಚಾಂದ್‌ತಾರಾ ಮಾ
ಅವನು ಚಸ್ಮಾ ಕೊಡಿಸಿದ್ದಿದೆ. ಆದಮ್ ಹುಟ್ಟ
ಮೇಲೆ ಅವನ ನಸೀಬು ಬದಲಾದದ್ದು.

ಅಂಗಡಿಯಲ್ಲಿ ಕುಳಿತು ಇಪ್ಪತ್ತು ರೂಪಾ
ಸಂಪಾದಿಸಿದನೋ, ತೀರಿತು. ಹತ್ತು ರೂಪಾ
ನೂರಬಿಯ ಕೈಗಿಟ್ಟು, ಅಂಗಡಿ ಬಂದು ಮಾ
ಕೊಂಡು ಮಂದಿಯ ಕೆಲಸ, ಪಕ್ಷದ ಕೆಲಸ ಎಂ
ಓಡಾಡುವುದು ಅವನ ಚಾಳಿ. ಅದು ನೂ
ಯನ್ನು ಹೊಯ್ದಾಡುವಂತೆ ಮಾಡಿದೆ. ಆದ
ಶಾಲೆ ಬಿಟ್ಟು ಅಂಗಡಿಯನ್ನು ಪೂರ್ತಿ ನಚ್ಚಿಕೊ

ಮೇಲೆ, ರಸೂಲಭಾಯಿಗೆ ನೆಮ್ಮದಿ ಅನಿಸಿದೆ. ತಂದೆಯ ಸ್ವಭಾವವನ್ನು ಹೋಲುವ ಆದಮ್, ಜನರ ಪ್ರೀತಿ ಸಂಪಾದಿಸಿದ ಹುಡುಗ. ವ್ಯವಹಾರವನ್ನು ಲಾಭದಾಯಕವಾಗಿಸಿದ್ದಾನೆ. ರಸೂಲಭಾಯಿಗೆ ಅದೆಲ್ಲ ದೇವರ ದಯೆ ಎಂಬ ನಂಬಿಕೆ. ಸ್ವಾತಂತ್ರ್ಯೋತ್ಸವ, ರಾಷ್ಟ್ರೀಯ ನಾಯಕರ ಜನ್ಮದಿನೋತ್ಸವಗಳಂತಹ ದಿನಗಳಲ್ಲಿ ದುರ್ಬಲರಿಗೆ ಬಟ್ಟೆ ಕೊಡಿಸುವುದು, ಶಾಲೆಗಳಿಗೆ ಹೋಗಿ ಬಡಮಕ್ಕಳಿಗೆ ಪುಸ್ತಕ, ಪೆನ್ನು, ಫೀ ಕೊಡುವುದು, ಆಸ್ಪತ್ರೆಯ ರೋಗಿಗಳಿಗೆ ಹಣ್ಣು, ಹಾಲು, ಬ್ರೆಡ್ಡು ಹಂಚುವುದರಲ್ಲಿ ಅವನಿಗೆ ಪ್ರೀತಿ. ಅದು ಅವನಿಗೆ ಅನಂತ ಖುಷಿ ಕೊಡುವುದು.

ಇಂಥ ಸಮಯದಲ್ಲಿ, ರಾಜಕೀಯ ಪುಢಾರಿಗಳೆಲ್ಲ, ಸಕ್ಕರೆಗೆ ಮುತ್ತಿಕೊಂಡಿರುವ ಇರುವೆಗಳಂತೆ ರಸೂಲಭಾಯಿಯ ಸುತ್ತ ಗೋಚರಿಸುವರು. ಅವನನ್ನು ಬಾಯಿತುಂಬ ಹೊಗಳುತ್ತ, ಫೋಟೋ ಪೋಜು ಕೊಡುವರು. ಪತ್ರಿಕೆಗಳಲ್ಲಿ ಠಳಾಗಿ ಮಿಂಚುವರು. ಯಾವಾಗಲೂ, ಕಬಳಿಸುವ ಹುನ್ನಾರದಲ್ಲಿರುವ ಅವರಿಗೆ, ರಸೂಲಭಾಯಿಯ ಒಳ್ಳೆ ಮನಸ್ಸು ಇಲ್ಲ. ಹೀಗೆ ಎರೆದುಕೊಂಡವರ ಬುಡದಲ್ಲಿ ಮೈ ತೊಯ್ಯಿಸಿಕೊಳ್ಳುವಲ್ಲಿ ಮಾತ್ರ ಅವರು ಚಾಣಾಕ್ಷರು. ರಸೂಲಭಾಯಿಗೆ ಅವರ ಸೂಕ್ಷ್ಮಗಳಾಗಲಿ, ವರ್ತಮಾನದ ರಾಜಕಾರಣ ಅಮೇಧ್ಯ ಎನ್ನುವುದಾಗಲಿ ಅಷ್ಟಾಗಿ ತಿಳಿದಿಲ್ಲ. ರಾಜಕಾರಣಿಗಳು ತಮ್ಮ ಸ್ಥಾನ-ಮಾನಗಳನ್ನು ಅಕ್ರಮಗಳಿಗೆ, ವಂಚನೆಗಳಿಗೆ ಬಳಸಿಕೊಂಡು, ತಮಗೆ ಅರ್ಹತೆ ಇರದಿದ್ದರೂ ಅನ್ಯಾಯವಾಗಿ ಏನೆಲ್ಲವನ್ನು ಪಡೆದುಕೊಳ್ಳಲು ರಾಜಕೀಯ ಮಾಡುವರು ಎಂಬುದನ್ನು ಅವನು ಪ್ರತ್ಯಕ್ಷ ಕಂಡಿಲ್ಲ. ಪಕ್ಷ ಇಂಥವರಿಂದ ಗಬ್ಬೆದ್ದು ಹೋಗಿದೆ ಎಂದರೆ ಅವನ ಕಣ್ಣು ಕೆಂಪಾಗುವುದು. ''ಜನ ಸುಮಾರಿರಬಹುದು, ಆದ್ರ ಪಕ್ಷ ಸುಮಾರಲ್ಲ'' ಎನ್ನುವನು. ಸುಮಾರು ಜನರು ಪಕ್ಷವನ್ನು ಹೊಲಸು ಮಾಡುವವರೇ ಎಂಬ ಗ್ರಹಿಕೆ ಇಲ್ಲದ ಮುಗ್ಧ ಅವನು. ಇಂಥವರಿಂದ ಪಕ್ಷ ಜೀವಂತಿಕೆಯಿಂದ ಉಳಿದಿರುವುದು.



ಅದು ಅವನ ಪಕ್ಷದ ಮಂದಿಗೆ ಗೊತ್ತು. ರಸೂಲಭಾಯಿ ಪಕ್ಷಕ್ಕಾಗಿ ಗಂಧದ ಕೊರಡಿನಂತೆ ತೇಯ್ದುಕೊಂಡವನು ಎಂದು ಅವರ ಆತ್ಮ ಅರಿತಿದೆ. ಚುನಾವಣೆಯ ಸಂದರ್ಭದಲ್ಲಂತೂ ಅವನ ಅನಿವಾರ್ಯತೆ ಹೆಚ್ಚು. ಪಕ್ಷದ ಅಭ್ಯರ್ಥಿಗೆ, ಅವನಿಂದ ಮುಸ್ಲಿಂ ಓಟು ಖಂಡಿತವಾಗಿ ಬೀಳುತ್ತವೆ ಎಂಬ ಗಾಢ ವಿಶ್ವಾಸ ಅವರದು. ರಸೂಲಭಾಯಿ, ಅವರ ಆಕಾಂಕ್ಷೆಗಳನ್ನು ಅರ್ಥಪೂರ್ಣಗೊಳಿಸುವನು. ಅವನಿಗೆ, ಗಲ್ಲಿಯ ಮುಸ್ಲಿಮರಷ್ಟೇ ಅಲ್ಲ, ಅಕ್ಕಪಕ್ಕದ ಊರುಗಳ ಮುಸ್ಲಿಮರೂ ಗೌರವ ಕೊಡುವರು. ಈ ಕಾರಣದಿಂದ, ಮತಕ್ಷೇತ್ರದ ಶಾಸಕರಾದ ರಾಜಪ್ಪನವರು, ಅವನ ಮೇಲೆ ಮಮತೆ ಇರಿಸಿರುವರು. ಅವನನ್ನು 'ರಸೂಲಣ್ಣ' ಎಂದು ಪ್ರೀತಿಯಿಂದ ಕರೆಯುವರು. ಅವರು, ಅವನನ್ನು ಐದಾರು ಸಲ ಬೆಂಗಳೂರಿಗೆ, ಒಮ್ಮೆ ದೆಹಲಿಗೆ ಕರೆದುಕೊಂಡು ಹೋಗಿಬಂದಿದ್ದರು.

ಇಬ್ಬರೇ ಮಾತಾಡುತ್ತ ಕುಳಿತಾಗ ರಾಜಪ್ಪ, ''ಅಣ್ಣ, ನಿನ್ನನ್ನು ಯಾವುದಾದ್ರೂ ಮಂಡಳಿಯ ಅಧ್ಯಕ್ಷನ್ನ ಮಾಡ್ತೀನಿ'' ಅಂದಿದ್ದರು. ಅದಕ್ಕೆ ರಸೂಲಭಾಯಿ, ''ಮಹಾತ್ಮರಿಗೆ ಅಧಿಕಾರದ ಆಸೆ ಇರಲಿಲ್ಲ. ಹಾಂಗ ನನ್ಗೂ ಇಲ್ಲ'' ಎಂದಿದ್ದ. ''ನೀನು ಗಾಂಧಿ ಅಲ್ಲಲಾ'' ಎಂದು ತಮಾಷೆ ಮಾಡಿದ್ದರು, ರಾಜಪ್ಪ. ತಟ್ಟನೆ ರಸೂಲಭಾಯಿ, ''ನಾವ್ಯಾರೂ ಗಾಂಧಿ ಅಲ್ಲ. ಗಾಂಧಿ ಭಕ್ತರು. ನಮಗ ಅವರ ಹೆಸರು ಬೇಕು. ತತ್ವಾ ಬ್ಯಾಡಂದ್ರ ಹ್ಯಾಂಗ?'' ಎಂದು ಪ್ರತಿಕ್ರಿಯಿಸಿದ್ದ. ಎದೆ ಅಲ್ಲಾಡಿದಂತಾಗಿ, ರಾಜಪ್ಪ ಮಾತು ಬದಲಾಯಿಸಿ, ''ನಿನ್ಗ ಅಧಿಕಾರ ಬ್ಯಾಡಂದ್ರ ಬಿಡು. ನೀನು ಬೇಕಾದ ಕೆಲಸ ತಗೊಂಡು ಬಾ, ಮಾಡಿಕೊಡುವ

ಜವಾಬ್ದಾರಿ ನಂದು'' ಎಂದು ಅವನು ಕೈಮೇಲೆ ಕೈಯಿಟ್ಟು ಮಾತುಕೊಟ್ಟಿದ್ದರು.

ಹಾಗೆಂದು ಅವನು ಅವರಿಗೆ ದುಂಬಾಲು ಬಿದ್ದವನಲ್ಲ. ಆದರೆ ಇಮ್ತಿಯಾಜನಿಗಾಗಿ, ಅವರನ್ನು ಕಾಡದೆ ಇರಲಿಲ್ಲ. ಇಮ್ತಿಯಾಜ್ ಗಲ್ಲಿಯ ಹುಡುಗ. ರಾಜಕೀಯದಲ್ಲಿ ತೀವ್ರ ಆಸಕ್ತಿ ಹೊಂದಿರುವಂತೆ, ರಾಜಕಾರಣಿಗಳ ಹಿಂದೆ ಬಾಲಾಣಿಸಿಯಂತೆ ತಿರುಗುತ್ತಿದ್ದ ಅವನನ್ನು, ಲೀಡರ್ ಮಾಡಿದವನು ರಸೂಲಭಾಯಿ. ದೊಡ್ಡವರ ಹತ್ತಿರ ಅವನನ್ನು ಕರೆದೊಯ್ದು, ಪರಿಚಯಿಸಿ, ಶುಭ್ರ ಖಾದಿಯಲ್ಲಿ ಮಿಂಚುವಂತೆ ಮಾಡಿ, ಜಿಲ್ಲಾ ಕೇಂದ್ರದಲ್ಲಿ ಅವನಿಗೆ ಸ್ಥಾನ-ಮಾನ ಕಲ್ಪಿಸಿದನು. ಪುರಸಭೆಯ ಚುನಾವಣೆಯಲ್ಲಿ ಗೆಲ್ಲಿಸಿ, ಹಟ ಹಿಡಿದು ಉಪಾಧ್ಯಕ್ಷನನ್ನಾಗಿ ಮಾಡಿ, ಗೆಲುವಿನ ನಗೆ ನಕ್ಕವನು.

ಇಮ್ತಿಯಾಜ್ ಕೊಳಕ. ಏರಿದ ಮೇಲೆ ಏಣಿಯನ್ನು ಒದ್ದುಬಿಟ್ಟಿದ್ದ. ರಸೂಲ್‌ಭಾಯಿಯನ್ನು ತಂದೆಯ ಸ್ವರೂಪ ಎಂದವನು, ತನ್ನ ದಾರಿಯ ದೀಪ ಎಂದವನು, ತನ್ನ ರಾಜಕೀಯ ಬದುಕಿನ ಮಾರ್ಗದರ್ಶಕ ಎಂದವನು, ಅಧಿಕಾರದ ಕುರ್ಚಿಗೆ ಅಂಟಿಕೊಂಡ ಮೇಲೆ, ಹಣದ ತ್ರವಲಿಗೆ ಬಿದ್ದು, ಸಗಣಿಯ ಹುಳುವಾಗಿಬಿಟ್ಟ. ಗಲ್ಲಿಯ ಜನರ ಸಮಸ್ಯೆ, ಊರಿನ ಜನರ ಸಮಸ್ಯೆಗಳಿಗಾಗಿ ತೀವ್ರ ತಡಕಾಡುತ್ತಾನೆಂದು ಆಶಾವಾದದಲ್ಲಿದ್ದ ರಸೂಲಭಾಯಿಯನ್ನು ಅವನು ಧಿಕ್ಕರಿಸಿಬಿಟ್ಟ. ಜನರು ತಿರುಗಾಡುವ ರಸ್ತೆಗಳನ್ನು ಸರಿಪಡಿಸುವ, ಕೊಳಚೆಯ ನೀರು ಹರಿದು ಹೋಗಲು ಗಟಾರ ನಿರ್ಮಿಸುವ, ಕಸದ ತೊಟ್ಟಿಗಳನ್ನು ನಿರ್ಮಿಸಿ ಪರಿಸರವನ್ನು ಶುಚಿಯಾಗಿಡುವ, ಬೀದಿ ದೀಪಗಳನ್ನು ಬೆಳಗಿಸುವ, ಕುಡಿಯುವ ನೀರು ಒದಗಿಸುವ ಮೂಲಭೂತ ಸೌಕರ್ಯಗಳ ಬಗ್ಗೆ ಚುನಾವಣೆಯ ಸಮಯದಲ್ಲಿ ಗಂಟಲು ಹರಿಯುವಂತೆ, ಪವಾಡ ಮಾಡಿ ತೋರಿಸುವನಂತೆ ಮಾತಾಡಿದವನು, ನಿರ್ವೀರ್ಯನಂತಿದ್ದ.

ಅವನು ಹೀಗೇ ಉಳಿದುಬಿಟ್ಟಿದ್ದರೆ, ರಸೂಲ್
ಭಾಯಿ, ಒಂದಿಷ್ಟು ವಟಗುಡುತ್ತ ತೆಪ್ಪಗಿರು
ತ್ತಿದ್ದನೇನೋ. ಆದರೆ ಇಮ್ತಿಯಾಜ್, ಮನುಷ್ಯತ್ವ
ಮೀರಿ ವರ್ತಿಸಿದ್ದ. ಗಲ್ಲಿಯ ಜನರಿಗೆ ತೀ
ಉಪಯುಕ್ತವಾಗಿದ್ದ ಬೋರ್‌ವೆಲ್‌ನ್ನು ಕೆಡಿ
ಹಾಕಿಸಿದ್ದ. ಅದರಲ್ಲಿ ನೀರು ಸಮೃದ್ಧವಾಗಿತ್ತು
ಪುರಸಭೆಯ ಹಿಂದಿನ ಅಧ್ಯಕ್ಷರು, ಅಲ್ಲಿ ನಾಲ
ಸಿಮೆಂಟ್ ಟ್ಯಾಂಕು ನಿರ್ಮಿಸಿ, ಎಲ್ಲರಿಗೂ ನೀರ
ಸಿಗುವಂತೆ ಮಾಡಿದ್ದರು. ಈ ಟ್ಯಾಂಕ್‌ಗೆ ಹೊಂ
ಕೊಂಡಿರುವಂತೆ ಇಮ್ತಿಯಾಜ್‌ನ ಐದಾರು ಫ್ಲಾಟ
ಇದ್ದವು. ಮುಖ್ಯರಸ್ತೆಯಲ್ಲಿದ್ದ ಈ ಫ್ಲಾಟುಗಳಿ
ಹೆಚ್ಚಿನ ಕಿಮ್ಮತ್ತು ಇತ್ತು. ಅವುಗಳ ಮಾರಾಟ
ಬೋರ್‌ವೆಲ್ ಅಡ್ಡಿಯಾಗಿತ್ತು. ಪಕ್ಕದ ವಾರ್ಡಿ
ಮುರಿಗೇಶಿಯ ಜೊತೆ ಸೇರಿಕೊಂಡು, ಬೋ
ವೆಲ್‌ನ್ನು ಅವನು ನಾಜೂಕಾಗಿ ಹಾಳುಗೆಡವಿ
ಜನರು ನೀರು...ನೀರು ಎಂದು ಚಡಪಡಿ
ತೊಡಗಿದರು. ಊರಿನಲ್ಲಿ ಮೊದಲೇ ನೀರಿ
ಕೊರತೆ, ಬೇಸಿಗೆಯ ದಿನಗಳಲ್ಲಂತೂ ಬೋ
ವೆಲ್ ಸುತ್ತ ಜನಜಾತ್ರೆ ನೆರೆದಿರುತ್ತಿತ್ತು. ಇ
ಯಾಜ್ ಬೋರನ್ನು ನಾಶಗೊಳಿಸಿದ್ದು ಬೇ
ಗೆಯ ವೇಳೆಯಲ್ಲಿ. ಆಗಲೇ, ನಲ್ಲಿಯ ಮೂ
ನೀರು ಒದಗಿಸುತ್ತಿದ್ದ ಹೊಳೆಯ ನೀರು
ಹೋಗಿತ್ತು. ಆ ಬೋರ್‌ವೆಲ್ಲಿನ ನೀರು, ಕು
ಯಲು ಯೋಗ್ಯವಲ್ಲದಿದ್ದರೂ ಬಳಕೆಯ ದ
ಯಿಂದ ಬಹಳ ಉಪಯುಕ್ತವಾಗಿತ್ತು. ಅ
ಇಲ್ಲಿ, ಸರೋರಾತ್ರಿ ಅಲೆದು ನೀರು ತರ
ಹೆಣಗಾಡಿದ ಜನ, ಮಿಕ್ಕಿತು ಎಂಬಂತೆ ಖಾ
ಕೊಡಗಳನ್ನು ಇಮ್ತಿಯಾಜ್‌ನ ಮನೆಯ ಮು
ಪ್ರದರ್ಶಿಸಿ, ''ನೀರುಬೇಕು... ನೀರುಬೇಕ
ಎಂದು ಕೂಗಾಡಿದ್ದರು. ಅವನು, ಬೋರ್‌ವೆ
ರಿಪೇರಿ ಮಾಡುವ ನಾಟಕವಾಡಿ, ಫ್ಲಾಟ್ ಮಾರ
ಮಾಡಿದ್ದ. ಫ್ಲಾಟ್ ಕೊಂಡವರು ಬೋರ್‌ವೆ
ಬಳಿಯಿದ್ದ ನೀರಿನ ಟ್ಯಾಂಕು ಉರುಳಿಸಿ ತ
ಬಿಲ್ಡಿಂಗ್ ಕಟ್ಟಿಸಿದ್ದರು.

ರಸೂಲ್‌ಭಾಯಿಗೆ ಅದನ್ನು ನೋಡಲಾಗಲಿಲ್ಲ. ಇಮ್ತಿಯಾಜ್‌ನ ಹತ್ತಿರ ಹೋಗಿ, ''ನೀನು ಜನರಿಗೆ ಅನ್ಯಾಯ ಮಾಡಿದಿ'' ಎಂದಿದ್ದ. ಇಮ್ತಿಯಾಜ್ ಅದಕ್ಕೆ ಕ್ಯಾರೆ ಎನ್ನಲಿಲ್ಲ. ತಾನು ನಂಬಿದ ಪಾರಿವಾಳ ಗಿಡಗಾಯಿತು ಎಂಬ ಕಸಿವಿಸಿಯಲ್ಲಿರುವಾಗಲೇ, ರಸೂಲಭಾಯಿಗೆ ಇಮ್ತಿಯಾಜನಿಂದ ಮತ್ತೊಂದು ಕಿರಿಕಿರಿಯಾಯಿತು. ಊರಿನ ಕಸ ಬಂದು ಬೀಳುತ್ತಿದ್ದ ಸ್ಥಳದ ಪಕ್ಕ, ಬಹಳ ದಿನಗಳಿಂದಲೂ ಗುಡಿಸಲು ಹಾಕಿಕೊಂಡಿದ್ದ ಜನರನ್ನು ಅಲ್ಲಿಂದ ಗುಳೆಯೆಬ್ಬಿಸಿ, ಅಲ್ಲಿ ಕಾಂಪ್ಲೆಕ್ಸ್ ಕಟ್ಟಿಸುವ ವಿಚಾರ ಅವನಿಂದ ವ್ಯಕ್ತವಾಗತೊಡಗಿತು. ರಸೂಲಭಾಯಿಯ ರಕ್ತ ಬಿಸಿಯಾಗಿ ಇಮ್ತಿಯಾಜನನ್ನು ತರಾಟೆಗೆ ತೆಗೆದುಕೊಳ್ಳುವಂತಾಯಿತು. ''ನೀನು ಹೀಂಗ ಜನರ ವಿರುದ್ಧ ಪ್ಲಾನ್ ಮಾಡ್ಕೊಂಡ ಹ್ವಾದ್ರ, ಹಾಳಾಗಿ ಹೋಗ್ತಿ'' ಎಂದು ಕೂಡಿದ ಜನರೆದುರು ರಸೂಲಭಾಯಿ ಆಡಿದ ಮಾತು, ಇಮ್ತಿಯಾಜನ ಮರ್ಮಕ್ಕೆ ನಟ್ಟು, ಒಂದು ಕ್ಷಣ ವಿಚಲಿತಗೊಂಡಿದ್ದ ಅವನು.



ರಸೂಲಭಾಯಿಯನ್ನು ಎದುರು ಹಾಕಿಕೊಂಡರೆ ತನ್ನ ಅಸ್ತಿತ್ವದ ಬೇರುಗಳು ಸತ್ತುಹೋಗುತ್ತವೆ ಎಂಬ ಪ್ರಜ್ಞೆಯನ್ನು ಜಾಗ್ರತವಾಗಿಸಿಕೊಂಡ ಇಮ್ತಿಯಾಜನಿಗೆ, ಏನೇನೋ ಸಂಶಯಗಳು ಬರತೊಡಗಿದವು. ತನ್ನನ್ನು ಕುರಿತು ಮೇಲಿನವರಿಗೆ ರಸೂಲಭಾಯಿ ವಿಪರೀತವಾಗಿ ಹೇಳಿಬಿಟ್ಟರೆ, ಎದೆಯೊಳಗೆ ಬಚ್ಚಿಟ್ಟುಕೊಂಡಿರುವ ತನ್ನ ಮಹತ್ವಾಕಾಂಕ್ಷೆಗಳು, ಬಣ್ಣದ ಕನಸುಗಳು ಗೋರಿಗೊಂಡಾವು ಎಂದು ದಿಗಿಲು ಹುಟ್ಟಿತು. ಕೂಡಲೇ, ''ನಾನು ತಪ್ಪಾಗಿ ನಡ್ಕೊಂಡಿದ್ದನ್ನು ಕ್ಷಮಿಸಿರಿ'' ಎಂದು ಅವನು ರಸೂಲಭಾಯಿಯ ಕೈಹಿಡಿದು ದೈನೇಸಿದ್ದ. ''ಮನಸ್ಸು ಸ್ವಚ್ಛ ಇಟ್ಗೋ. ಒಳಗ ಸೈತಾನನ್ನು ಬಿಟ್ಗೋಬ್ಯಾಡ'' ಎಂದು ಹೇಳಿ ಅಲ್ಲಿಂದ ಹೊರಟು ಬಂದಿದ್ದ ರಸೂಲಭಾಯಿ.

ಆದರೆ ಇಮ್ತಿಯಾಜನ ಒಳಗೆ ಸೈತಾನಾ ಕುಳಿತು ಹುಯಿಲೆಬ್ಬಿಸತೊಡಗಿದ್ದ. ತಾನು ಊರಿನ ಪ್ರತಿಷ್ಠಿತ ಮನುಷ್ಯ. ಎರಡನೆಯ ಪ್ರಜೆ ಎಂದು ಗೌರವ ಪಡೆದವನು. ರಾಜಕೀಯದಲ್ಲಿ ನುರಿತವನು. ಆದರ್ಶ, ಮೌಲ್ಯ, ಸಿದ್ಧಾಂತ, ಗಾಂಧಿ, ದೇಶ ಎಂದು ಬಡಬಡಿಸುವ ರಸೂಲಭಾಯಿಯ ಮಾತು ಕೇಳಿದರೆ ತಾನು ಪ್ರೆಸಿಡೆಂಟ್ ಆಗುವುದಿಲ್ಲ, ಮುಂದೆ ವಿಧಾನ ಸಭೆಯ ಮೆಟ್ಟಲು ತುಳಿಯುವುದಾಗುವುದಿಲ್ಲ, ಕೆಂಪುಗೂಟದ ಕಾರಿನಲ್ಲಿ ತಿರುಗಾಡುವ ಆಸೆ ಅರಳುವುದಿಲ್ಲ ಎಂದು ಯೋಚಿಸಿದ. ರಸೂಲಭಾಯಿ ಒಬ್ಬ ಯಃಕಶ್ಚಿತ್ ಮನುಷ್ಯ. ತನ್ನ ಹೃದಯ ಹೊಲಸು ಎನ್ನುವಂತೆ ಮಾತಾಡಿಬಿಟ್ಟ. ನಿಂತ ನೀರಿನಂತೆ ಅವನು. ಹರಿಯುವ ನೀರಿನ ಸೊಗಸು ಅವನಿಗೇನು ಗೊತ್ತಾಗ ಬೇಕು? ತಾನು ಗಾಂಧಿಯಂತಹ ಮನುಷ್ಯ ಎಂಬ ಪೊಗರು ಇಟ್ಟುಕೊಂಡಿದ್ದಾನೆ ಅವನು, ಅವನೇನು ಸಾಜೋಗವಂತ ಎಂದು ಕ್ಲೀಷೆಯಾಗಿ ರಸೂಲಭಾಯಿಯನ್ನು ಕುರಿತು ಮಾತಾಡಿದ, ಇಮ್ತಿಯಾಜ.

ಆ ಮಾತು ರಸೂಲಭಾಯಿಯ ಕಿವಿಗೆ ಮುಟ್ಟಲಿಲ್ಲ. ಇಮ್ತಿಯಾಜ್, ಸಹಜವೆಂಬಂತೆ ಅವನೆದುರು ಮೃದುವಾಗಿ ವರ್ತಿಸುತ್ತಿದ್ದ. ಸಲಾಂ ಹೇಳುತ್ತಿದ್ದ. ಒಳಗೆ ಮಾತ್ರ ಅಸಹನೆ, ಸಂಚಿನ ಬಲೆ ಹೆಣೆಯುತ್ತದೆಯೋ ಎನ್ನುವಂತಿತ್ತು.

ವಿಧಾನಸಭೆಗೆ ಚುನಾವಣೆ ನಡೆಯುವ ಸಂದರ್ಭ. ರಾಜಪ್ಪ, ರಸೂಲಭಾಯಿಯ ಮಗ್ಗಲು ಬಿಟ್ಟು ಅಲುಗಾಡಲಿಲ್ಲ. ರಸೂಲಭಾಯಿ ಊಟ, ನಿದ್ದೆ ಲೆಕ್ಕಿಸದೆ ಗಲ್ಲಿಗಲ್ಲಿ, ಊರೂರು ಅಲೆದಾಡುತ್ತಿದ್ದ. ಅವನ ವರ್ಚಸ್ಸು, ತನ್ನ ಏಕಾಸಕ್ತಿ ಮಾರಕವಾಗಿದೆ ಎಂಬ ಭ್ರಮೆ ಇಮ್ತಿಯಾಜನ ಮಿದುಳು ಸೇರಿ, ಮನಸ್ಸು ತತ್ತರಗೊಂಡಿತು. ಐದಾರು ಹಳ್ಳಿಗಳಿಗೆ ರಸೂಲಭಾಯಿಯೊಂದಿಗೆ ಪ್ರಚಾರಕ್ಕೆಂದು ಹೋಗಿಬಂದಿದ್ದ. ಆದರೂ ರಾಜಪ್ಪನವರ ವಿಶ್ವಾಸ ರಸೂಲಭಾಯಿಯ ಮೇಲೆ ಹೆಚ್ಚು ಎಂಬ ಭಾವನೆ ಹುಳುವಾಗಿ, ಅವನ ಹೃದಯದಲ್ಲಿ ಹರಿದಾಡತೊಡಗಿತು. ಕೆಟ್ಟ ಹುಳು ಅದು. ರಸೂಲಭಾಯಿಯ ತೇಜೋವಧೆಗೆ ಉಪಕ್ರಮಿಸಿತು. ಮತದಾನದ ಕ್ಷಣಗಳು ಸಮೀಪಿಸಿದಂತೆ, 'ರಸೂಲಭಾಯಿ ಬೇರೆಯವರಿಂದ ಹಣ ಪಡೆದಿದ್ದಾನೆ. ಈ ಸಲ ಪಕ್ಷದ ವಿರುದ್ಧ ಮಸಲತ್ತು ನಡೆಸಿದ್ದಾನೆ' ಎಂಬ ಗುಲ್ಲು ಶುರುವಾಯಿತು. ಇಮ್ತಿಯಾಜನ ಹಿಂಬಾಲಕರು, ಕುಡಿದ ನಶೆಯಲ್ಲಿ, ಈ ಅಸಂಗತ ವಿಚಾರವನ್ನು ಸತ್ಯವೋ ಎಂಬಂತೆ ಬಿಂಬಿಸುತ್ತ ನಡೆದರು. ಚುನಾವಣೆಯಲ್ಲಿ ಹಣದ್ದೆ ಆಟ ಎಂಬ ಸಾಮಾನ್ಯ ತಿಳುವಳಿಕೆಯಲ್ಲಿದ್ದ ಮಂದಿ ರಸೂಲಭಾಯಿಯನ್ನು ಮೇಲುನೋಟದಲ್ಲಿ ಅಳೆಯತೊಡಗಿದರು. ಇಮ್ತಿಯಾಜ್, ತಾನು ಹಚ್ಚಿದ ಕಿಚ್ಚಿಗೆ ಗಾಳಿಯೂದುತ್ತ ನಡೆದ. ಕಿಚ್ಚು ಪ್ರಜ್ವಲಿಸತೊಡಗಿತು.

ಈಗ ಅದರ ಝಳ ತಾಗಿಸಿಕೊಂಡ ರಸೂಲಭಾಯಿ ತಳಮಳಿಸಿದ. ತನ್ನ ಮರ್ಯಾದೆ ಕಾಸಿಗೆ ಪಂಚೇರಾಯಿತು ಎಂದುಕೊಳ್ಳುತ್ತ ರಾಜಪ್ಪನವರ ಬಳಿಗೆ ದೌಡಾಯಿಸಿದ. ಅವನನ್ನು ಕಾಣುತ್ತಲೆ ರಾಜಪ್ಪ, ''ಏನಣ್ಣ ಇದು? ನಿನ್ಗ ರೊಕ್ಕ ಬೇಕಾಗಿದ್ರ ನನ್ಗ ಹೇಳಬಹುದಿತ್ತಲ್ಲ. ಬೇರ ಪಕ್ಷದವರಿಂದ ಹಣ ಯಾಕ್ ಇಸ್ಗೊಂಡಿ?'' ಎಂದುಬಿಟ್ಟರು. ರಸೂಲಭಾಯಿಗೆ ಬೆಂಕಿಯಲ್ಲಿ ನಿಂತಂತೆ ಅನಿಸಿತು. ಅವನಿಂದ ಬೇರೆ ಮಾತು ಹೊರಡುವ ಮೊದಲೆ, ಗಡಿಬಿಡಿಯಿಂದ ಜೀಪು ಹತ್ತಿ ಕುಳಿತರು ರಾಜಪ್ಪ. ಇಮ್ತಿಯಾಜನೂ ಅವರ ಹಿಂದೆ ಇದ್ದ. ಜೀಪು ಧೂಳೆಬ್ಬಿಸಿ ಹೋದಮೇಲೆ ರಸೂಲಭಾಯಿ ತೆವಳುತ್ತ ಬಂದು ಮನೆ ಸೇರಿಕೊಂಡ.

ನೆಲಕ್ಕೆ ಕುಸಿದು ಕುಳಿತು, ''ನಾನು ಮಸೀದ್ಯಾಗ ನಿಂತು ಪ್ರಮಾಣ ಮಾಡಿ ಹೇಳ್ತೀನಿ, ಯಾರ ಕಡೆಯಿಂದ ಒಂದು ಪೈಸೆ ತಗೊಂಡಿಲ್ಲ'' ಎಂದು ಹುಚ್ಚು ಹಿಡಿದವರಂತೆ ಮಾತಾಡತೊಡಗಿದ. ನೂರಬಿ ದಿಗಿಲುಗೊಂಡಳು. ''ದೇವರು ನನ್ಗ ರೊಟ್ಟಿ-ಚಟ್ನಿ ಕೊಟ್ಟಾನ, ಬ್ಯಾರೆಯವರ ಹರಾಮ ದುಡ್ಡು ನಾಯಾಕ ತಿನ್ನಾಕ ಹೋಗ್ಲಿ?'' ಎಂದು ಹೇಳುತ್ತ, ಹೇಳುತ್ತ ಗಡಗಡ ನಡುಗತೊಡಗಿದ. ನೂರಬಿ ಮಗನನ್ನು ಕರೆಯಿಸಿದಳು. ಆದಮ್ ಬಂದು, ತಂದೆಯ ಅವಸ್ಥೆ ನೋಡಿ ತಣ್ಣಗಾದ. ಹಾಗೆ ಓಡಿಹೋಗಿ ಡಾಕ್ಟರರನ್ನು ಕರೆದುಕೊಂಡು ಬಂದ. 'ಮನಸ್ಸಿಗೆ ಆಘಾತ ಮಾಡಿಕೊಂಡಿದ್ದಾರೆ' ಎಂದ ಡಾಕ್ಟರರು ಸಮಾಧಾನ ಹೇಳಿ, ರಸೂಲಭಾಯಿಗೆ ನಿದ್ದೆ ಮಾತ್ರೆ ಕೊಟ್ಟು ಹೋದರು.

ನಡುರಾತ್ರಿ ರಸೂಲಭಾಯಿಗೆ ಎಚ್ಚರವಾಗಿತ್ತು. ''ನಾನು ಹಣ ತಗೊಂಡಿಲ್ಲ. ಪಕ್ಷದ ವಿರುದ್ಧ ಕೆಲಸ ಮಾಡಿಲ್ಲ'' ಎಂದು ಜೋರು ಜೋರಾಗಿ ಹೇಳುತ್ತ ಎದ್ದು ಕುಳಿತಿದ್ದ. ನೂರಬಿ, ''ತ್ರಾಸು ಮಾಡ್ಕೋಬ್ಯಾಡ್ರಿ'' ಎಂದು ಅಳತೊಡಗಿದ್ದಳು. ಆದಮ್‌ನಿಗೆ ಧೈರ್ಯಸಾಲದೆ, ಇಬ್ರಾಹಿಂ ಸಾಹೇಬರನ್ನು ಎಬ್ಬಿಸಿಕೊಂಡು ಬಂದಿದ್ದ. ಇಬ್ರಾಹಿಂ ಸಾಹೇಬರು ಅವನ ಹತ್ತಿರ ಕುಳಿತು, ''ಮನಿಷ್ಯಾರ ಮಾತನ್ನು ಯಾಕ್ ಮನಸ್ಸಿಗೆ ಹಚ್ಗೊಂತಿ. ಸುಳ್ಳು-ಸತ್ಯಾ ನೋಡಾಕ ದೇವರು ಅದಾನ. ಒಳ್ಳೆಯವರಿಗೆ ಇಂಥ ಪರೀಕ್ಷಾ ಬರ್ತಾವು. ನಮ್ಮ ಪೈಗಂಬರರು ಎಂಥೆಂಥ ಕಷ್ಟ ನುಭವಿಸಿದ್ರು, ನಿನಗ ಗೊತ್ತೈತಲ್ಲ'' ಎಂದು

ಸಮಾಧಾನ ಹೇಳಿ, ತುಸು ಹೊತ್ತಿನ ನಂತರ ಹೋಗಿದ್ದರು.

ರಸೂಲಭಾಯಿ ಈಗ ಮಾತು ಆಡದಿದ್ದರೂ ಒಳಗೇ ಹೊಯ್ದಾಡತೊಡಗಿದ್ದ, ರಾಜಪ್ಪನವರು ಆಡಿದ ಮಾತು, ಮಂದಿಯ ಗುಲ್ಲು, ಎದೆಯ ಗಹ್ವರದೊಳಗೆ ಪ್ರತಿಧ್ವನಿಸಿದಂತಾಗಿ, ''ನಾನು ಸಾಯ್ತಿನಿ... ನಾನು ಸಾಯ್ತಿನಿ'' ಎಂದು ಎದ್ದು ನಿಂತಿದ್ದ ಅವನು. ನೂರಬಿ ಮತ್ತು ಆದಮ್ ಅವನನ್ನು ಗಟ್ಟಿಯಾಗಿ ಹಿಡಿದು ಕುಳ್ಳಿರಿಸಿದ್ದರು.

ಬೆಳಗಾಗುತ್ತಿದ್ದಂತೆ, ''ಯಾವ ಚಿನಾಲಿ ಮಗ ಹೇಳ್ತಾನ, ಭಯ್ಯಾ ಪೈಸಾ ಇಸ್ಗೊಂಡಾನಂತ'' ಎನ್ನುತ್ತ ಒಳಗೆ ಬಂದಿದ್ದಳು ಇಮಾನಬಿ. ಬೇರೆ ಊರಿಗೆ ಹೋಗಿದ್ದ ಆಕೆ, ಈ ಸುದ್ದಿ ಗೊತ್ತಾಗಿ, ಕೂಡಲೇ ಧಾವಿಸಿ ಬಂದಿದ್ದಳು. ಚಿಪ್ಪಿನೊಳಗೆ ಅಡಗಿಕೊಂಡ ಆಮೆಯಂತೆ ಮುದುಡಿ ಮಲಗಿದ್ದ ರಸೂಲಭಾಯಿಯನ್ನು ನೋಡಿ ಆಕೆಗೆ ಮರುಕ ಹುಟ್ಟಿತ್ತು. ''ಭಯ್ಯಾ'' ಎಂದು ಕೂಗಿದ್ದಳು.

ಕಷ್ಟಕಾಲದಲ್ಲಿ ಅವಳ ಬೆನ್ನಿಗೆ ನಿಂತವನು ರಸೂಲಭಾಯಿ. ಅವಳ ರೋಗಿಷ್ಟ ಗಂಡನನ್ನು ಉಪಚರಿಸಲು ಹೆಣಗಾಡಿದವನು. ಅವನು ಸತ್ತ ಮೇಲೆ, ಅವಳಿಗೆ 'ಆಶ್ರಯ' ಮನೆ ಕೊಡಿಸಿ, ವಿಧವಾ ಪೆನ್ಶನ್ನಿನ ವ್ಯವಸ್ಥೆ ಮಾಡಿದ್ದನು. ಅವಳೆಂದರೆ ಗಲ್ಲಿಯ ಮಂದಿಗೆ ಅಷ್ಟಕ್ಕಷ್ಟೆ. ಅವಳು ನಿಷ್ಠುರ ಹೆಂಗಸು. ಅನ್ಯಾಯ ಕಂಡರೆ ಸಹಿಸಿಕೊಳ್ಳುತ್ತಿರಲಿಲ್ಲ. ಮುಖದ ಮೇಲೆ ಹೊಡೆದಂತೆ ಮಾತಾಡುತ್ತಿದ್ದಳು. ಧ್ವನಿಯೂ ಜೋರಾಗಿತ್ತು. ಅವಳ ಹೃದಯದ ಕೋಮಲತೆಯನ್ನು ಅರ್ಥಮಾಡಿಕೊಳ್ಳದ ಮಂದಿ, ಅವಳ ಮೇಲೆ ಇಲ್ಲಸಲ್ಲದ ಕಥೆ ಕಟ್ಟಿ ಆಡುತ್ತಿದ್ದರು. ಆಕೆ ಅವರಿಗೆ ಎದುರು ಬೀಳುತ್ತಿದ್ದಳು. ರಸೂಲಭಾಯಿ ಅವಳನ್ನು ಸಮಾಧಾನಿಸುತ್ತಿದ್ದ. ಗಲ್ಲಿ ಬಿಟ್ಟು, ಆಕೆ 'ಆಶ್ರಯ' ಮನೆಗೆ ಹೋದಮೇಲೆ ಜನರು ಅವಳ ಉಸಾಬರಿ ಬಿಟ್ಟಿದ್ದರು. ಆಕೆ ರಸೂಲಭಾಯಿಯನ್ನು ಮಾತಾಡಿಸಿಕೊಂಡು ಹೋಗಲು ಆಗಾಗ ಬಂದೇ ಬರುತ್ತಿದ್ದಳು. ಅವನ ಮೇಲೆ ಇಮಾನಬಿ, ಗೌರವ, ಪ್ರೀತಿ ಇರಿಸಿಕೊಂಡಿದ್ದಳು.

ಹಾಸಿಗೆಯಲ್ಲಿ ಮೆಲ್ಲಗೆ ಎದ್ದು ಕುಳಿತ ರಸೂಲಭಾಯಿಯನ್ನು ನೋಡುತ್ತಿದ್ದಂತೆ ಆಕೆಗ ಸಿಟ್ಟು ಬಂದಿತ್ತು.

''ಭಯ್ಯಾ, ಹೀಂಗ ಮುದುಡಿ ಮಲ್ಕೊಂಡರ ನೀಯೇನ ಸಾಧಿಸಿಧಂಗಾತು? ಯಾವ ಹಕಿನಾಕಿ ಮಕ್ಳು ನಿನ್ನ ಮ್ಯಾಲೆ ಆರೋಪ ಮಾಡ್ಯಾರ, ಹುಡುಕ್ಯಾಡಿ ಒದಿಬಾರ್ದಽ'' ಎಂದಿದ್ದಳು.

''ಅವರು ಸತ್ತುಹೋಗ್ತೀನಿ ಅಂತಾರ'', ನಡುವೆ ಮಾತಾಡಿದ್ದಳು ನೂರಬಿ.

''ಸಾಯುವಂತಹದ್ದು ನೀಯೇನ ಮಾಡಿ? ಕೋಟಿಗಟ್ಟಲೆ ಸಗಣಿ ತಿಂದವರಽ ಆರಾಮಸಿರಿ ತಿರುಗ್ಯಾಡತಾರ. ನಾಚಿಕಿ ಇಲ್ಲದ್ಹಂಗ ಬದುಕತಾರ. ಜೀವನದಿಂದ ಓಡಿ ಹೋಗೋ ಬದ್ಲು ಎದುರಿಸಿ ಸರಿಮಾಡ್ಕೋಬೇಕು ಅಂದಾಂವ ನೀನು. ಭೇಷ್ ವಿಚಾರ ಮಾಡಿ ಬಿಡು'' ಎಂದು ಇಮಾನಬಿ ಅವನ ಧೋರಣೆಯನ್ನು ನಯವಾಗಿ ಖಂಡಿಸಿದ್ದಳು.

''ನನ್ನ ಮ್ಯಾಲೆ ಎಂಥ ತುಫಾನಿ ಹೊರಿಸ್ಯಾರ ನೋಡು ತಂಗಿ. ನಾ ಯೆಂದರ ಪರರ ದುಡ್ಡಿಗೆ ಆಸೆ ಮಾಡಿದವನ?'', ರಸೂಲಭಾಯಿ ವ್ಯಥೆ ಅಭಿವ್ಯಕ್ತಿಸಿದ್ದ.

''ಮಾದರ ಚೋದಗಳಿಗೆ ಆದೆಲ್ಲ ಎಲ್ಲಿ ಗೊತ್ತಾಗಬೇಕು? ಈಗಿನ ಮಂದೀನಽ ಹೀಂಗ. ಉಂಡ ತಾಟಿನ್ಯಾಗ ಉಚ್ಚಿ ಹೋಯ್ದು ಹೊಕ್ಕಾರ'' ಇಮಾನಬಿಯ ಮಾತು ಬಹಳ ಖಾರವಾಗಿತ್ತು.

''ಒಬ್ಬಿಬ್ಬರು ಹಾಂಗಿರ್ತಾರಂತ ಎಲ್ಲಾ ಮಂದಿನ್ನೂ ಸುಮಾರ ಅನ್ನೂರು ಸರಿಯಲ್ಲ ತಂಗಿ'' ಎಂದು ಹಗುರಾಗಿ ಉಲಿದಿದ್ದ ರಸೂಲಭಾಯಿ.

''ನೀನು ಎಷ್ಟ ಮಂದಿಗೆ ಉಪಕಾರ ಮಾಡ್ತಿ. ಈಗ ಒಬ್ಬರಾದ್ರೂ ಬಂದ್ರೇನು? ಎಲ್ಲಾರೂ ನಿನ್ನ ಕಾಮಣಿಗಣ್ಣಿನಿಂದ ನೋಡಿದ್ರು. ಅವರನ್ನು

ಮಂದಿ ಅನಬೇಕ ಇಲ್ಲ ಹಂದಿ ಅನಬೇಕ?'' ಆಕ್ರೋಶದಿಂದ ಕೇಳಿದ್ದಳಾಕೆ.

''ಅವರು ಎಲ್ಲಾರಿಗೂ ಒಳ್ಳೇದು ಮಾಡ್ಕೊಂತ ಬಂದಾರ. ಅದು ಅಲ್ಲಾನಿಗೆ ಗೊತ್ತಿದ್ದ ಮಾತೈತಿ, ಮಂದಿ ತಗೊಂಡು ಏನು ಮಾಡುದೈತಿ?'', ನೂರಜಿ ಹೇಳಿದ್ದಳು.

''ಅದು ಏನss ಇರಲಿ. ನೀನು ಸುಮ್ಮನ ಕುಂದ್ರಬ್ಯಾಡ ಭಯ್ಯಾ. ನಿನ್ನ ಮ್ಯಾಲಿನ ಆರೋಪದ ಸತ್ಯ ಹೊರಗೆ ಬರಬೇಕು. ಅದು ಏನು ಮಾಡ್ತಿಯೋ ಮಾಡು. ನಿನ್ನಿಂದ ಆಗೂದಿಲ್ಲ ಅನ್ನು. ನಾನು ಅದನ್ನು ಬರೋಬ್ಬರಿ ಬಯಲು ಮಾಡ್ತೀನಿ'', ಸಾಫ್‌ಸಾಫ್ ಹೇಳಿದ್ದಳು ಇಮಾನಬಿ.

ಆದಮ್‌ನು ''ಬಾಬಾ, ನೀವು ಹೂಂ ಅಂದ್ರ, ನಾವೆಲ್ಲ ಗೆಳೆಯರು ಕೂಡಿ ನಿಮ್ಯಾಲೆ ಆರೋಪ ಹೊರಿಸಿದವನ್ನ ಒದ್ದು ಎಳ್ಕೊಂಡು ಬರ್ತೀವಿ'' ಎಂದು ಉದ್ವೇಗ ವ್ಯಕ್ತಪಡಿಸಿದ್ದ.

''ನೀನು ಹಿಂಸಾದ ಮಾತು ಆಡಬ್ಯಾಡ ಬೇಟಾ. ಮಹಾತ್ಮರಿಗೆ ಇಂಥದ್ದರಲ್ಲಿ ವಿಶ್ವಾಸ ಇರಲಿಲ್ಲ. ನನ್ಗೂ ಇಲ್ಲ. ವೈರಿನ್ನ ಪ್ರೀತಿಯಿಂದ ಗೆಲ್ಲಬೇಕೆಂದಾರ ಅವರು'', ಸಾವಧಾನವಾಗಿ ಹೇಳಿದ್ದ ರಸೂಲಭಾಯಿ.

''ಭಯ್ಯಾ ನೀನು ಸಾಯುತನ ಗಾಂಧೀನ್ನ ಬಿಡಾಂವ ಅಲ್ಲ. ಬಿಡು ಅಂತ ನಾವ್ಯಾರೂ ನಿನ್ಗ ಹೇಳೂದಿಲ್ಲ. ನೀನು ಈ ತುಫಾನಿಯಿಂದ ಹೊರಗಬರಬೇಕು ಅಷ್ಟ'' ಎಂದು ಎದ್ದು ಹೋಗಿದ್ದಳು ಇಮಾನಬಿ.



ಒಳಸೋವು ಮನುಷ್ಯನನ್ನು ಇನ್ನಷ್ಟು ದುರ್ಬಲಗೊಳಿಸುವುದು. ಅವನ ಒಳ್ಳೆಯ ತನವನ್ನು ಕತ್ತಲಲ್ಲಿ ಇಡುವುದು ಎಂಬ ಗ್ರಹಿಕೆಯಲ್ಲಿ ಅವನು, ಇಮಾನಬಿಯ ಮಾತುಗಳನ್ನು ಮೆಲುಕು ಹಾಕಲುತೊಡಗಿದ್ದ. ಅದರ ನಡುವೆ ಅವನಿಗೆ, ಗಾಂಧೀಜಿ ನಂಬಿದ ಸತ್ಯದ ನೆನಪಾಗಿತ್ತು. ಸುಳ್ಳು ಎಷ್ಟೇ ಅದ್ಭುತವಾದರೂ ಅದು ಗಿಲೀಟಿನದು. ಅದರೊಳಗೆಲ್ಲ ಅಮಾವಾಸ್ಯೆ ಕತ್ತಲು. ಸತ್ಯ ಅದಕ್ಕೆ ಹೆದರುವುದಿಲ್ಲ. ಅದು ಸೂರ್ಯನ ಬೆಳಕು. ಚಂದ್ರನ ಬೆಳಕು. ಗಾಂಧೀಜಿ ಆ ಬೆಳಕಿನಲ್ಲಿ ಬದುಕು ಗೆದ್ದವರು. ಹೀಗೆ ಯೋಚಿಸುತ್ತ ಕುಳಿತ ರಸೂಲಭಾಯಿಯ ಮನಸ್ಸು, ಸತ್ಯದ ದರ್ಶನಕ್ಕಾಗಿಯೋ ಎಂಬಂತೆ ಮಸೀದೆಯನ್ನು ಬಯಸಿತ್ತು.

ಮೂರನೆಯ ದಿನದ ಸೂರ್ಯ ಆಕಾಶದ ನೆತ್ತಿಗೆ ಚಲಿಸತೊಡಗಿದ್ದ. ರಸೂಲಭಾಯಿಯ ಕರುಳು ಜಡಗೊಂಡು ಅವನ ದೇಹ ಕ್ಷೀಣಿಸಿತು. ಗಲ್ಲಿಯ ಹೆಂಗಸರೆಲ್ಲ ಮಿಲಿಮಿಲಿಸಿದರು. ಇಬ್ರಾಹಿಂ ಸಾಹೇಬರು, ಷೇರ್ ಇಮಾನರು ವಿಚಲಿತರಾಗಿ ಅಲ್ಲಾಹನಲ್ಲಿ ಮೊರೆಯಿಡತೊಡಗಿದರು. ಮಸೀದಿಗೆ ಬರುತ್ತಿದ್ದವರ ಹೃದಯದ ತುಂಬ ಭೀತಿ, ಕಳವಳ.

ರಸೂಲಭಾಯಿಯ ಕಣ್ಣು ಈಗ ಮುಚ್ಚಿ ಕೊಂಡಿದ್ದವು. ಕೈಯಲ್ಲಿನ 'ತಸಬಿ' ನಿಧಾನವಾ ಚಲಿಸುತ್ತಿತ್ತು. ಯೌವನದ ಹುಡುಗರಿಗೆ ರ ಬಿಸಿಯಾಗತೊಡಗಿ, ಗೂಬೆ ಕೂರಿಸಿದವ ಹುಡುಕಾಟಕ್ಕೆ ಪ್ರಯತ್ನಿಸತೊಡಗಿದರು. ಸೂರ್ಯ ತಣ್ಣಗಾಗುತ್ತ ಬಂದಂತೆ ರಸೂಲಭಾಯಿಯ ಸ್ಥಿತಿ ಬಿಗಡಾಯಿಸಿತು. ಅವನ ಕೈಯಲ್ಲಿನ 'ತಸಬಿ ತಟಸ್ಥಗೊಂಡಿತು. ಎದೆಯೊಳಗಿನ ಉಸಿರಾಟ ಸೂಕ್ಷ್ಮವೆನ್ನುವಂತೆ ಗೋಚರಿಸಿತು.

ಜನರು ಗುಂಪು ಗುಂಪಾಗಿ ಬಂದರು. ''ರಸೂಲಭಾಯಿ, ನಿನ್ನ ಮೇಲೆ ನಮಗ ಯಾವ ಶಕ್ಕೂ ಇಲ್ಲ'' ಎಂದು ಕೂಗಿದರು. ದೂರದಲ್ಲಿ ನಿಂತ ಹೆಂಗಸರು ಜೋರಾಗಿ ಬಿಕ್ಕಿದರು. ಪ್ರಜ್ಞೆ ಕಳೆದುಕೊಂಡ ನೂರಬಿಯನ್ನು ಐದಾರು ಜನ ಹೆಂಗಸರು ತೀವ್ರವಾಗಿ ಉಪಚರಿಸತೊಡಗಿದ್ದರು. ಆದಮ್ ಹೃದಯ ಹೆಪ್ಪುಗಟ್ಟಿದಂತೆ ತಂದೆಯ ಬಳಿಯಲ್ಲಿ ಕುಳಿತಿದ್ದ.

ಏನಾಗುವುದೋ ಎಂದು ಜನ ಗಲಿಬಿಲಿಗೊಳಗಾಗುತ್ತಿರುವಂತೆ, ಕಾರಿನ ಸಪ್ಪಳ ಕೇಳಿಸಿತು. ರಾಜಪ್ಪ ಜನರನ್ನು ಸೀಳಿಕೊಂಡು ಬಂದರು. ಇಮ್ತಿಯಾಜ್ ಅವರ ಹಿಂದಿಂದೆ ಬಂದ. ರಸೂಲಭಾಯಿಯ ಹತ್ತಿರ ಕುಳಿತ ರಾಜಪ್ಪ, ''ರಸೂಲಣ್ಣ'' ಎಂದು ಕರೆದರು. ಇಮ್ತಿಯಾಜ್, ''ಬಾಬಾ'' ಎಂದ. ಅವನ ಕಾಲು ಹಿಡಿದು ಅಳತೊಡಗಿದ. ರಸೂಲಭಾಯಿ ಅರೆಬರೆ ಕಣ್ಣು ತೆರೆದು ನೋಡಿದ. ''ಬಾಬಾ, ನಿನ್ನ ಮ್ಯಾಲೆ ಈ ನಿಮಿತ್ಯಾ ಹೊರಿಸಿದವನು ನಾನುಽ... ನನ್ನ ಝಾಡಿಸಿ ಒದ್ದುಬಿಡು'', ಎಂದ ಇಮ್ತಿಯಾಜ್. ಅಲ್ಲಿ ನಿಂತಿದ್ದ ಹುಡುಗರು ರೋಷದಿಂದ ಅವನ ಮೇಲೆ ಮುಗಿದು ಬಿದ್ದರು. ರಾಜಪ್ಪ ತಡೆಯಲು ಪ್ರಯತ್ನಿಸಿ ಸೋತರು.

''ನಕಲಿ ಹರಾಮನಿಗೆ ಖಲಾಸ್ ಮಾಡಿರಿ'' ಎಂದರು ಕೆಲವರು. ಅನಾಹುತವನ್ನು ಗ್ರಹಿಕೆಗೆ ತಂದುಕೊಂಡ ರಸೂಲಭಾಯಿ, ''ಅವನನ್ನ ಹೊಡಿಬ್ಯಾಡ್ರಿ'' ಎಂದು ಕ್ಷೀಣವಾಗಿ ಕೂಗಿ ಹೇಳಿದ. ಯಾರೂ ಅದನ್ನು ಕಿವಿಗೆ ಹಾಕಿಕೊಂಡಂತೆ ಕಾಣಲಿಲ್ಲ. ಇಮ್ತಿಯಾಜ್ ಒಂದೇ ಸವನೆ ಪೆಟ್ಟು ತಿನ್ನತೊಡಗಿದ. ರಸೂಲಭಾಯಿ ಮೆಲುವಾಗಿ ಎದ್ದು, ''ಬಿಟ್ಟುಬಿಡಿರಿ ಅವನ್ನ, ನಿಮ್ಗ ಅಲ್ಲಾನ ಆಣೆ ಆದೀತು?'' ಎಂದು ತೆವಳುತ್ತ ಬಂದು, ಇಮ್ತಿಯಾಜನನ್ನು ಹಿಡಿದುಕೊಂಡು ಕುಳಿತ. ಜನರು ದೂರ ಸರಿದುನಿಂತರು. ಇಮ್ತಿಯಾಜ್ ತಲೆತಗ್ಗಿಸಿ ಅಳತೊಡಗಿದ. ''ಇವನಿಂದ ನನ್ಗ ಸತ್ಯ ತಿಳೀತು. ನಾನೂ ಮಡ್ಡ. ಹಿಂದ ಮುಂದ ಯೋಚನೆ ಮಾಡದ, ನಿನ್ನ ಮ್ಯಾಲೆ ಸಂಶಿಪಟ್ಟೆ. ನನ್ನ ಕ್ಷಮಾ ಮಾಡು'', ಎಂದು ಕೈಮುಗಿದರು ರಾಜಪ್ಪ... ರಸೂಲಭಾಯಿಗೆ ಮಾತೇ ಹೊರಡಲಿಲ್ಲ. ರಾಜಪ್ಪನವರ ಎರಡೂ ಕೈಗಳನ್ನು ಎದೆಗೊತ್ತಿಕೊಂಡು ಕುಳಿತ. ಸಮಾಧಾನಗೊಂಡ ರಾಜಪ್ಪ, ಅವನಿಗೆ ಕುಡಿಯಲು ಹಣ್ಣಿನ ರಸ ಕೊಟ್ಟರು. ಇಮ್ತಿಯಾಜನೇ ಗ್ಲಾಸು ಅವನ ಬಾಯಿಗಿಟ್ಟು ಕುಡಿಸಿದ. ಕೂಡಿದ ಜನ ಮುಖವರಳಿಸಿ ನೋಡಿದರು. ರಸೂಲಭಾಯಿಯ ಒಡಲಲ್ಲಿ ಚೈತನ್ಯ ಜಿನುಗುತ್ತಿರುವ ಹಾಗೆಯೇ ಮಸೀದೆಯಲ್ಲಿ ದೀಪ ಬೆಳಗಿತು.



ರಸೂಲಭಾಯಿ ಈಗ ಮಾತು ಆಡದಿದ್ದರೂ ಬಳಗೇ [illegible].



ಶಬ್ದತೀರ



# ಬೆರಳು ಹಿಡಿದು ನಡೆಸಿದ ಬೆಳ್ಳಿತೆರೆಯ ಗೆಳೆಯ

ಆಗಷ್ಟೆ ಕುಯಿಲು ಮುಗಿಸಿದ ಗದ್ದೆಯಲ್ಲಿ ಟ್ರಕ್ಕುಗಟ್ಟಲೆ ಬಿದಿರಿನ ಗಳು, ಚಾಪೆ ತಡಿಕೆ, ಹಗ್ಗ ನೋಡಿದ್ದೇ, ರೋಮಾಂಚನ ನಮಗೆ, ಶಾಲೆಯ ದಾರಿಯಲ್ಲಿ. ಹೌದು, ಟೂರಿಂಗ್ ಟಾಕೀಸಿನ ಟೆಂಟು ನಿಲ್ಲುತ್ತಿದೆ. ಮಾಗಿಯ ನಸುಕಿನ ಬಿಸಿಲಲ್ಲಿ, 'ಡಂಡಂ ಟರಟರ' ಪುಟ್ಟ ಬ್ಯಾಂಡಿನಲ್ಲಿ, ಚಕ್ಕಡಿಯ ಮೇಲೆ ಪೋಸ್ಟರುಗಳು ಬರುತ್ತಿವೆ. ಚಂದವಳ್ಳಿಯ ತೋಟ... ಗಂಗೆ ಗೌರಿ... ವೀರಕೇಸರಿ.

ದಸರಾ, ಸಂಕ್ರಾಂತಿ, ಶಿವರಾತ್ರಿಗೆಂದೇ ಮುದ್ದಾಂ ತರಿಸಲಾದ ಚಿತ್ರಗಳಲ್ಲಿ, ಒಂದೇ ಮುಖ, ಒಂದೇ ಮುದ್ದು ನೀಳ ಮೂಗು. ಪರೀಕ್ಷೆ ಗಿರೀಕ್ಷೆ ಎನ್ನದೆ, ನಮ್ಮನ್ನು ತುಡೆಮುರಿಗೆ ಕಟ್ಟಿ ಸೆಳೆಯುವವ, ನಮ್ಮೆಲ್ಲರ ಕೈಗಳಲ್ಲಿ ಪುಟ್ಟ ರಟ್ಟಿನ ಖಡ್ಗ ಕೊಟ್ಟವ. ಮನೆಯವನೇ ಆದವ.

ನಂತರ, ರಥಬೀದಿಯ ಸ್ಟ್ಯಾಂಡಿನಲ್ಲಿ, ಬಸ್ಸುಗಳಿಗೆ ಕಾದು, ನಾವೆಲ್ಲ ಎಲ್ಲೆಲ್ಲೋ ಹೊರಟೆವು. ಬೇರೆ ಊರುಗಳಿಗೆ, ಬೇರೆ ಕ್ಲಾಸು ರೂಮುಗಳಿಗೆ, ಹೋಟೆಲೂಟಗಳಿಗೆ, ದಿನಗೂಲಿ ಪುಡಿಗಾಸು ಕೆಲಸಗಳಿಗೆ, ವಾರಾನ್ನಗಳಿಗೆ. ಅಪರಿಚಿತರ ಮಧ್ಯೆ, ಅರ್ಥವಾಗದವರ ಎದುರು. ಆಗ, ಅಲ್ಲಿ, ಜತೆಗಿದ್ದು ಸಂತೈಸುವವ ಮತ್ತೆ ಅವನೇ. ಮನೆ ನೆನಪಿನಿಂದ ಮಂಕಾದ ಮನಸ್ಸಿಗೆ ಮುದ ನೀಡುವವ... ಬೀದಿ ಬಸವಣ್ಣ. ನೌಕರಿ ಸಿಕ್ಕ ಖುಶಿಗೂ ಅವನೇ, ಅಡ್‌ಮಿಷನ್ ಸಿಗದ ನೋವಿಗೂ ಅವನೇ, ಅಪಮಾನದ ರೋಷಕ್ಕೂ ಅವನೇ, ಅರೆ ಹೊಟ್ಟೆಯ ಉರಿಗಣ್ಣಿನ ತಳಮಳಕ್ಕೂ ಅವನೇ... ಅಮ್ಮನ ನೆನಪಿನ ಅಂಜುಗುಳಿಗೆ ಧೈರ್ಯ ತುಂಬುವ ಕಠಾರಿವೀರ. ಹುಟ್ಟುಹಬ್ಬದ ಖುಶಿಗೆ... ಬೆಂಗಳೂರು ಮೇಲ್. ಕೊನೆಯ ಪೇಪರಿನ ದಿನ... ಉಯ್ಯಾಲೆ. ಮೊದಲ ಗಳಿಕೆಯ ದಿನ... ಕರುಳಿನ ಕರೆ.

ನಮ್ಮ ದನಿಗಳು ಒಡೆಯುವ ಕ್ಷಣ. ಬಣ್ಣದ ಲಂಗ ಹಾದರೆ, ದಾವಣಿಯ ಗಾಳಿ ಸುಳಿದರೆ, ಕಿವಿ ಕೆಂಪಾಗುವ ಕ್ಷಣ, ಲೋಲಾಕಿನ ಕುಲುಕಿಗೂ ಹೃದಯ ಅಲ್ಲಾಡುವ ಕ್ಷಣ. ಅಭಯ ಹಸ್ತ ಅವನದೇ. ಟಿಪ್ಪಣಿ ಪುಸ್ತಕಗಳು ಅದಲು ಬದಲಾಗುವಾಗ, ಅದರಿಂದ ಬಿದ್ದ ಚೀಟಿಗಳ ಹಕ್ಕಿ ಕೊಡುವವನು ಅವ. ನಾಲ್ಕಾಣೆಯ ಪದ್ಯಾವಲಿಗಳಲ್ಲಿ, ಮದುವೆ ಮನೆಯ ಸ್ಪೀಕರುಗಳಲ್ಲಿ, ಮೊದಲ ಮಳೆಯ ರಾತ್ರಿಯಲ್ಲಿ ಸ್ವರವಾದವ. ಅಣ್ಣನಂತೆ, ಮಾಮನಂತೆ ಇರುವವ. ಗೆಳೆಯನಂತೆ ಬರುವವ.

ತೀರ್ಪುಗಳ ಭಯ, ರಿಸಲ್ಟುಗಳ ಭಯ, ಒಡೆಯುವ ದಾರಿಗಳ ಭಯ. ಪ್ರಪಂಚವೇ ಎದುರಾಳಿಯಾಗಿ ನಿಂತು, 'ಮುಂದೇನು ಮಾಡುವಿ?' ಎಂದು ಸೆಡ್ಡು ಹೊಡೆದು ಕೇಳುವ ಸಮಯ. ಜತೆಗಾರರೆಲ್ಲ ಗುಟ್ಟಾಗಿ, ತಮ್ಮ ತಮ್ಮ ಯೋಜನೆಗಳ ಜತೆ, ಸದ್ದಿರದೆ ದೂರ ಹೋದ ಸಮಯ. ಪ್ರತಿ ತಿರುವಿನಲ್ಲೂ ಅಭದ್ರತೆ ಛೇಡಿಸುವ ಸಮಯ. ಇವ ಕೈ ಬಿಟ್ಟಿಲ್ಲ, ಪೋಸ್ಟರಿನಿಂದ ಹಾಗೇ ನಗುತ್ತಿದ್ದಾನೆ. ಇಂಟರ್‌ವ್ಯೂಗಳ ನಂತರ, ಬಸ್ಸು ಹೊರಡುವ ಮುನ್ನ ಟಾಕೀಸಿನಲ್ಲಿ ಕಾದಿದ್ದಾನೆ. ಬಿಟ್ಟುಬಂದ ಊರಿನಲ್ಲಿರುವ ಮನೆಮಂದಿಯ ಪ್ರತಿರೂಪವಾಗಿ ಜತೆಗಿದ್ದಾನೆ. ಅವನ ನೋಡಿದರೆ, ದನಿ ಕೇಳಿದರೆ, ಮತ್ತೆ ಊರಿನ ಗದ್ದೆ ಮೈ ತಳೆದಂತೆ.

ಹರಿದು ಹಂಚಿಹೋದೆವು ಎಲ್ಲ, ನಾಡಿನುದ್ದಗಲ. ಕಂಡರಿಯದ ಹೊಸ ಊರು ಕೇರಿಗಳಲ್ಲಿ, ನಾಡಿನಾಚೆ, ಕಾಡಿನಾಚೆ. ಮಹಾ ನಗರಗಳ ಸಂದಿಗೊಂದಿಗಳಲ್ಲಿ, ಬಾಗಿಲುಗಳ ಬಡಿದೆವು. ತಣ್ಣನೆಯ ರಿಸೆಪ್‌ಶನ್ನುಗಳಲ್ಲಿ ಬೆವರುತ್ತಾ ಕಾದೆವು. ದೀಪ ಹಚ್ಚುವ ವೇಳೆ ಕಂಠ ಬಿಗಿದು ಕಂಪಿಸಿದೆವು. ಶಹರದ ಭಿನ್ನ ಪೋಸ್ಟರುಗಳಲ್ಲಿ ಚೂರು ಪಾರು ಕಂಡ. ಹುಡುಕಿ ಹೋದೆವು. ಮ್ಯಾಟನಿಗಳನ್ನು, ಹೊಸ ಟಾಕೀಸುಗಳನ್ನು. ಅಪವೇಳೆಯಲ್ಲಿ, ಬಸ್ಸು ಬದಲಿಸಿ, ಅಲ್ಲಿ ಇಲ್ಲಿ ವಿಚಾರಿಸಿ. ಅಪರಿಚಿತರ ನಡುವೆ, ಕತ್ತಲಲ್ಲಿ ಕನ್ನಡವಾಗಿ ಸಿಕ್ಕ. ಊರಾಗಿ ಸಿಕ್ಕ. ಕೈ ಹಿಡಿದ. ಅವನ ಕಂಡಿದ್ದೇ, ಮರುಕಳಿಸಿತು ಎಲ್ಲ. ಚಿಗುರೊಡೆಯಿತು ಜೀವ. ಮುರಿಯದ ಮನೆ... ಸಂಧ್ಯಾರಾಗ. ಕಣ್ಣಿಗೆ ಕಟ್ಟಿತು ಊರಿನ ನೂರು ಗಂಧ. ಹಗುರಗೊಂಡು ಹೊಸಬರಾಗಿ ಬಂದೆವು ಹೊರಗೆ. ನಮ್ಮ ಹೆಜ್ಜೆಗಳಿಗೆ, ದಿನಗೂಲಿ ಚಾಕರಿ ನೋಕರಿಗಳಿಗೆ, ಸಿಗ್ನಲ್ಲುಗಳ ಬೀದಿಗೆ. ಥೇಟರುಗಳೆಲ್ಲ ಒಂದೊಂದಾಗಿ ಉರುಳಿದವು. ಮಾರುಕಟ್ಟೆಗಳು ಎದ್ದವು. ಮುಗ್ಧತೆ ಕಳಕೊಂಡಂತೆ ವಿಭ್ರಾಂತಿಯಲ್ಲಿ ನಗ್ನ ವಾಗಿ ನರಳುತ್ತಾ ನಿಂತಿವೆ ರಸ್ತೆ ಬದಿ ಮರಗಳು. ಎಲ್ಲೋ ಏನೋ ದಣಿವು. ಒಳಗೆಲ್ಲೋ ಸದ್ದಿಲ್ಲದೇ ಹರಿದ ಎಳೆ.

ನದಿಗಳ ನೀರು ಬದಲಾಗಿದೆ. ದಂಡೆಗಳು ಸಮುದ್ರಗಳ ಮುಖಭಂಗ ಮಾಡಿವೆ. ಬೆಳ್ಳನೆ ಗೋಲ ಮೇಜುಗಳ, ಶುದ್ಧ ಏಕಾಂತದ ಇರಾಣಿ ಹೊಟೆಲುಗಳು, 'ತೀರ್ಥ' ಕ್ಷೇತ್ರಗಳಾಗಿವೆ. ಅಕ್ಕ ತಂಗಿಯರು ಸೆರಗು ಜಾರಿಸಿ, ಟೇಬಲಿನ ಸಮೀಪ ಬರುತ್ತಿದ್ದಾರೆ. ಮನೆಗೆ ಒಂದು ಕಿಲೋ ಹಣ್ಣು ಕೊಂಡೊಯ್ಯಲು ದುಬಾರಿ ಎಂದು ಬಿಟ್ಟವರು, ಬಾರಿನಲ್ಲಿ, ಒಂದು ಪಟ್ಟಿಗೆ ನೂರಾರು ಕೊಡಲು ತಯಾರಾಗಿ ಕೂತಿದ್ದಾರೆ. ಉರಿವ ಕಣ್ಣಿನ ಮಕ್ಕಳು ತಿಪ್ಪೆಯ ಬಳಿ ಕಾದಿದ್ದಾರೆ. ದತ್ತು ಕೊಳ್ಳಲು ಬಂದ ವಿದೇಶಿಯರು ಒಬ್ಬನನ್ನು ಆರಿಸಿಕೊಂಡು ಹೋಗುವುದನ್ನೇ ಬಿಟ್ಟಕಣ್ಣ ಬಿಟ್ಟು ನೋಡುತ್ತಿದ್ದಾರೆ, ಅನಾಥಾಶ್ರಮದ ಇತರ ನೂರಾರು ಮಕ್ಕಳು. ಆಸ್ಪತ್ರೆಗಳಲ್ಲೂ ಪರಿಚಯ ಬೇಕಾಗಿದೆ. ಸ್ವಾತಂತ್ರ್ಯ ಯೋಧರು ವೃದ್ಧಾಶ್ರಮದಲ್ಲಿದ್ದಾರೆ. ನಮಗೇನೂ ತೋಚುತ್ತಿಲ್ಲ. ಯಾರ ಮೇಲೂ ನಂಬಿಕೆಯಿಲ್ಲ. ನಂಬಿಕೆಗೆ ಬೇಕಾದದ್ದೇನೋ ಕಳಕೊಂಡಿದ್ದೇವೆ. ಏನು ಕಳಕೊಂಡೆವು, ಎಲ್ಲಿ ಕಳಕೊಂಡೆವು, ಹೇಗೆ ಕಳಕೊಂಡೆವು ತೋಚುತ್ತಿಲ್ಲ. ಒಳ್ಳೆಯತನಕ್ಕೂ ಕಾರಣ ಹುಡುಕುತ್ತೇವೆ. ರಸೀದಿ ಕೇಳುತ್ತೇವೆ. ಬರೇ ಮಾತಾಡುತ್ತೇವೆ. ಮಾತಿನಲ್ಲಿ ಎಷ್ಟು ಹೊಕ್ಕಿದ್ದೇವೆಂದರೆ, ಆಸ್ಪತ್ರೆಯ ಮೌನ ಸಹಿಸೋಕೇ ನಮ್ಮಿಂದಾಗ್ತಾ ಇಲ್ಲ.

ಹಟ ಹಿಡಿಯುತ್ತೇವೆ. ನಮಗೆ ಮತ್ತೆ ಬೇಕೀಗ ಆ ಕಿಲಾಡಿರಂಗನ ಖಡ್ಗ, ಮನಸ್ಸಾಕ್ಷಿಯ ಕಳ್ಳ, ವಾತ್ಸಲ್ಯದ ಅಣ್ಣ. ವಿಡಿಯೋ, ಆಡಿಯೋ, ಮೊಬೈಲು, ಕಣ್ಣು ಕುಕ್ಕುವ ಫ್ಲಾಶುಗಳ ಹಗರಣದ ಹಗಲಿಂದ ದೂರ, ಆ ತಂಪು ನಿಶ್ಶಬ್ದ ರಾತ್ರಿಯನ್ನು ಹಿಡಿಯಲು ಯತ್ನಿಸುತ್ತೇವೆ. ಆ ಮೌನದಲ್ಲಷ್ಟೇ ಕೇಳಬಹುದೆ ಇನ್ನು... ನಾಂದಿಯ ಆ ಜೋಗುಳ... ಕಸ್ತೂರಿ ನಿವಾಸದ ಪಾರಿವಾಳದ ಪಟಪಟ.

ಬಿದ್ದ ಹೂವುಗಳ ಸದ್ದು ಮರೆಸಿ, ಹೊಸ ಮೊಗ್ಗುಗಳ ಎದೆಯಲ್ಲಿ ಜೀವವನ್ನು ಪೋಣಿಸುತ್ತಿರುವ ಈ ರಾತ್ರಿ, ಆ ಎಲ್ಲಾ ಹಾಡುಗಳನ್ನು ಕಿವಿಯಲ್ಲಿ ಉಸುರುತ್ತಿದೆ. ದೈನಿಕದ ಬಗ್ಗಡದಲ್ಲೂ ಬೆರಳು ಹಿಡಿದು, ವಿಸ್ಮಯಲೋಕದಲ್ಲಿ ನಡೆಸುತ್ತಾ ಬಂದ ಬೆಳ್ಳಿತೆರೆಯ ಗೆಳೆಯನ ಮಾಯೆ, ಮೈ ತುಂಬುತ್ತಿದೆ. ಇಲ್ಲ, ಇಲ್ಲಿ ಯಾವುದೂ ವ್ಯರ್ಥವಲ್ಲ. ಹಾದಿಯಲ್ಲಿ ಹೆಕ್ಕಿಕೊಂಡ ಹಾಡು, ಮನದಲ್ಲಿ ಮುತ್ತಿ ನಿಂತ ಮುದ್ದಿನ ಮುದ್ರೆ. ಇಷ್ಟಿದ್ದರೆ ಸಾಕು ಒಳಗೆ. ಮಿಕ್ಕುದೆಲ್ಲ ಲೋಕಚಿತ್ತ. ತಂಗಾಳಿಯ ಮಾಯೆ.

**ಜಯಂತ ಕಾಯ್ಕಿಣಿ**

(ಅಚ್ಚಿನಲ್ಲಿರುವ "ಬೊಗಸೆಯಲ್ಲಿ ಮಳೆ" ಸಂಕಲನದಿಂದ)





ಶ್ರೀನಿವಾಸ ಜೋಕಟ್ಟೆ

# ದಂತಕತೆ, ದುರಂತ ಕತೆ... ಇತ್ಯಾದಿ

ಶಶಿಧರ್

"ಮರಗಿಡಗಳು ಇನ್ನು, ದಕ್ಷಿಣ ಕನ್ನಡದಲ್ಲಿ ಹಸಿರು ಕಾಣಸುವುದನ್ನು ಕಡಿಮೆ ಮಾಡಬಹುದು. ಅದರಲ್ಲೂ ಎಂ.ಆರ್.ಪಿ.ಎಲ್. ಕಾರ್ಖಾನೆಯ ಪಕ್ಕದಲ್ಲೇ ಮನೆ ಇರುವುದರಿಂದ, ಈ ತೆಂಗಿನ ಗಿಡಗಳೂ, ಇನ್ನು ಕೆಲವು ವರ್ಷಗಳ ನಂತರ ಇದೇ ರೀತಿ ಇರುವವು ಎನ್ನುವಂತಿಲ್ಲ. ಈ ಜಾಗದ ಜನರ ಆರೋಗ್ಯವೂ ಅಷ್ಟೇ. ಇಂತಹ ತಂಪು ಗಾಳಿ ಮುಂದಿನ ದಿನಗಳಲ್ಲಿ ಸಿಗುವುದು ಕಷ್ಟವೇನೋ... ಇನ್ನು ಬಿಸಿ ಗಾಳಿ ಮಾರಾಯ..."

ಹೀಗೆಂದು, ಆರಾಮ ಕುರ್ಚಿಯಲ್ಲಿ ಕೂತು, ಅಂಗಳದಲ್ಲಿ ಬರುವ ತಂಪುಗಾಳಿಯನ್ನು ಸ್ವೀಕರಿಸುತ್ತಾ, ಮೈಸೂರಿನಿಂದ ಬಂದ ಮಾವ, ನಿತ್ಯಾನಂದನ ಬಳಿ ಹೇಳುತ್ತಿದ್ದರು. ಪುಣೆಯಿಂದ ಒಂದು ವಾರದ ಹಿಂದೆಯಷ್ಟೆ ಊರಿಗೆ ಬಂದಿದ್ದ ನಿತ್ಯಾನಂದನಿಗೂ, ಇದು ಆ ಕ್ಷಣಕ್ಕೆ ಹೌದು



ಎನಿಸಿತು. ಮಾತು ಮುಂದುವರಿಸುತ್ತಿದ್ದಂತೆ, ಆ ನಡುಮಧ್ಯಾಹ್ನ, 'ಢಂಢಂ' ಎಂಬ ಸ್ಫೋಟದ ಸದ್ದು ಕೂಡಾ ಬಂತು. ಗುಡ್ಡದಲ್ಲಿ ಕಲ್ಲು ಒಡೆಯುವ ಶಬ್ದ, ಮರಗಳ ನಾಶ, ಹಕ್ಕಿಗಳೆಲ್ಲ ಶಬ್ದಕ್ಕೆ ದಿಕ್ಕಾಪಾಲು ಓಡಿದವು. ದನ, ಕಟ್ಟಹಾಕಿದ ಗೂಟ ಕಿತ್ತು, ಓಡಲು ಹವಣಿಸಿತು.

"ಹಕ್ಕಿಗಳಿಗೂ ಈ ಬಹುರಾಷ್ಟ್ರೀಯ ಕಂಪೆನಿಗಳು ಬದುಕಲು ಬಿಡಲಾರವೇನೋ"... ಎಂಬ ಸ್ವರವನ್ನು ಮಾವ ಹೊರಡಿಸಿದರು. ಊರಿನ ಭಜನಾ ಮಂದಿರದ ಸ್ವಲ್ಪ ದೂರದ ತನಕ, ಈ ಬಹುರಾಷ್ಟ್ರೀಯ ಕಂಪೆನಿಗೆ ಬಿಟ್ಟುಕೊಡಲಾಗಿತ್ತು. ಊರಿನ ಜನರಲ್ಲಿ ಹೆಚ್ಚಿನವರು, ಚೇಳ್ಯಾರು ಪದವಿಯಲ್ಲಿ ಮನೆ ಮಾಡಿದ್ದಾರೆ. ಭಜನಾ ಮಂದಿರಕ್ಕಿಂತ ಈಚೆಗೆ ಊರು ಉಳಿದಿತ್ತು. ನಿತ್ಯಾನಂದನ ಮನೆಯೂ ಉಳಿದಿತ್ತು.

ಮಾತನಾಡುತ್ತಿದ್ದಂತ ಮಾವ, ಮೂಲ ವಿಷಯಕ್ಕೆ ಬಂದರು. "ಈ ಸಲವಾದರೂ ಮದುವೆಯಾಗುವ ಅಂದಾಜು ಏನಾದರೂ ಇದೆಯಾ?"

ಈ ಜನರಿಗೆ ತನ್ನ ಮದುವೆಯೊಂದನ್ನು ಬಿಟ್ಟರೆ ಬೇರೆ ಯಾವ ಚಿಂತೆಗಳೂ ಇಲ್ಲವೇ? ಊರಲ್ಲಿ, ಇನ್ನು ಯಾರ ಕಿರಿಕಿರಿಯ ಪ್ರಶ್ನೆಗಳಿಲ್ಲದೆ ಬದುಕಬಹುದು ಎಂದರೆ ಈ ರಗಳೆ ಬೇರೆ ಶುರುವಾಗಿದೆ. ಪುಣೆಯಿಂದ ಹೊರಡುವ ಮೊದಲು ದಯಾಸಾಗರ್ ಹೇಳಿದ್ದಿದೆ, "ಮುಂದಿನ ತಿಂಗಳು ನಾಲ್ಕನೇ ತಾರೀಕಿಗೆ ನನ್ನ ಮದುವೆ. ನಿನ್ನ ಮುಖ ಕಾಣಬೇಕು. ಯಾವ ನೆಪವನ್ನೂ ಹೇಳಬಾರದು. ಬರಲೇಬೇಕು..."

ಪುಣೆಯಿಂದ ಬೀಳ್ಕೊಡುವ ದಿನವೂ ಹೆಚ್ಚಿನವರು 'ಮದುವೆ' ಸುದ್ದಿಯೇ ಎತ್ತಿದ್ದು. "ಯಾವಾಗ ಮಹರಾಯ ನಿನ್ನ ಮದುವೆ? ನಮ್ಮೆಲ್ಲರನ್ನು ಊರಿಗೆ ಕರೆದೊಯ್ಯುವಂತೆ ಅವಕಾಶ ಮಾಡಿಕೊಡೋ. ಮದುವೆಗಾಗಿಯೇ ಒಂದು ಬಸ್ಸು ಗೆಳೆಯರನ್ನು ಹೊತ್ತುಕೊಂಡು ಊರಿಗೆ ಬರುತ್ತೇವೆ. ನಿನ್ನ ಹುಡುಗಿ ಯಾರೆಂದು ತಿಳಿಸುವೆಯಾ...? ಸುಬ್ರಾಯಭಟ್ಟರು, ಕಳೆದ ವರ್ಷ ಪತ್ನಿ ನಿಧನ ಹೊಂದಿದ್ದರೂ, ಈ ವರ್ಷ ಬೇರೆ ಮದುವೆ ಮಾಡಿಕೊಂಡರು. ಅದೂ ಈ ಇಳಿ ಪ್ರಾಯದಲ್ಲಿ! ಬೆಳೆದ ಮಕ್ಕಳೂ ಇದ್ದಾರೆ, ನೋಡು. ನಿನ್ನಂತವರು ಆಗುವುದಿಲ್ಲ ಅಂದರೆ ಎಷ್ಟು ಆಶ್ಚರ್ಯ!" ಗೆಳೆಯರ ಪ್ರಶ್ನೆಗಳಿಗೆಲ್ಲ, "ಊರಿಗೆ ಹೋಗಿ ಕಾಗದ ಬರೆಯುತ್ತೇನೆ" ಅಂದಿದ್ದ ನಿತ್ಯಾನಂದ.



ಊರಿಗೆ ಬಂದವನಿಗೂ ತುಂಬಾ ಖರ್ಚಾಗಿತ್ತು. ಇದ್ದ ಹಣದಲ್ಲಿ ಕಪಾಟು ರಿಪೇರಿ ಮಾಡಿಸಿ, ಒಂದು ಹೊಸ ಮೇಜು ತರಿಸಿ, ಬರೆಯುವ ಎಲ್ಲಾ ಸೌಲಭ್ಯಗಳನ್ನು ಮೊದಲಿಗೆ ಮಾಡಿಕೊಂಡ. ಜಗಲಿಯ ಒಳ ಬರುವಾಗಲೇ ಲೇಖಕನ ಛಾಪು ಕಾಣಿಸುವುದು ಅಗತ್ಯವಿತ್ತು. ಇದಕ್ಕೆಲ್ಲ ಸಾಕಷ್ಟು ಖರ್ಚಾಗಿತ್ತು. ಇನ್ನು ಮದುವೆ ಅಂತ ಇಳಿದರೆ, ಅದಕ್ಕೆ ಮತ್ತೂ ಹಣ ಬೇಕು. ವರದಕ್ಷಿಣೆ ಪಡೆಯುವುದಿಲ್ಲ ಎನ್ನುವ 'ಕ್ರಾಂತಿ' ಬೇರೆ ಇಟ್ಟುಕೊಂಡಿದ್ದಾನೆ. ಮನೆಯಲ್ಲಿದ್ದುದು ಅಜ್ಜನ ಕಾಲದ ಕಪಾಟುಗಳು. ಹಾಗೆಂದು ಗಟ್ಟಿ ಇವೆ. ಕೇವಲ ಬಣ್ಣ ಕಳೆದುಕೊಂಡಿವೆ. ಪುಸ್ತಕಗಳನ್ನೆಲ್ಲ ಪುಣೆಯಿಂದ ಸಿ.ಪಿ.ಸಿ. ಲಾರಿಯಲ್ಲಿ ಹಾಕಿದ್ದ.

ಮೊನ್ನೆಯಷ್ಟೇ, ಬೈಕಂಪಾಡಿ ಗೋಡೌನ್‌ಗೆ, ಟೆಂಪೋ ಮಾಡಿಕೊಂಡು ಹೋಗಿ. ಅವುಗಳನ್ನೆಲ್ಲ

ತಂದಿದ್ದ. ಆ ಪುಸ್ತಕಗಳ ರಾಶಿಯನ್ನು ಒಪ್ಪವಾಗಿ ಇರಿಸಬೇಕಾದರೆ ಕಪಾಟು ರಿಪೇರಿ ಅನಿವಾರ್ಯ ವಾಗಿತ್ತು.

'ಬಂಗುಡೆ ಬೇಕಾ ಅಮ್ಮ, ತಾಜಾ ಬಂಗುಡೆ...', ಅಂಗಳದಲ್ಲಿ ನಿಂತು ಬುಟ್ಟಿ ಹೊತ್ತ ಮಹಿಳೆ ಕೂಗುತ್ತಿದ್ದಳು. ಒಳಗಿದ್ದ ಅಮ್ಮ, ಈ ಸ್ವರಕ್ಕೆ ಸಿಡಿಮಿಡಿಗೊಂಡು, ''ಇದು ಬ್ರಾಹ್ಮಣರ ಮನೆ. ಬರುವಾಗ ಸ್ವಲ್ಪ ನೋಡಿ ಬರಬೇಕು. ಓಣಿಯಲ್ಲಿ ಕೂಗುವಾಗಲೇ ಬೇಕಿದ್ದವರು ಕರೆಯುತ್ತಾರೆ. ಸೀದಾ ಒಳ ಬರುವುದಲ್ಲ...'' ಎಂದಳು.

ಅಮ್ಮನ ಬೊಬ್ಬೆಗೆ ಪಾಪ, ಆ ಮಹಿಳೆ ಹೆದರಿ, ''ನಾನು ಈ ಊರಿಗೆ ಹೊಸಬಳು. ತಿಳಿಯಲಿಲ್ಲ, ಕ್ಷಮಿಸಿ'' ಎಂದವಳೇ ಓಣಿಯಲ್ಲಿ ಮಾಯವಾದಳು. ಆದರೂ ಅಮ್ಮನಿಗೆ ಸಮಾಧಾನ ವಾಗದೆ ಇನ್ನೂ ಏನೇನೋ ಬೈಯ್ಯುತ್ತಿದ್ದಳು. ಪಾಪ. ಬಂದ ಮಹಿಳೆಯೂ ಚೆಂದ ಇದ್ದಳೆಂದು ನಿತ್ಯಾನಂದನಿಗೆ ಅನಿಸಿತು. ಅಥವಾ ಮಾವ ಮದುವೆ ಸುದ್ದಿ ಎತ್ತಿದ್ದರಿಂದ ಆ ಮಹಿಳೆ ಚೆಂದ ಕಂಡಳ್ಳೋ ಏನೋ? ಮೀನು ಬಿಟ್ಟು ಬೇರ್‍ಯಾವ ತರಕಾರಿಗಳಿದ್ದರೂ, ಅವಳನ್ನು ಕೂರಿಸಿ, ಕೆಲವು ತರಕಾರಿ ಖರೀದಿಸಬಹುದಿತ್ತು ಅಂತ ತನ್ನಷ್ಟಕ್ಕೇ ಯೋಚಿಸಿ ನಕ್ಕ. ನಗುವುದಕ್ಕೆ ಇನ್ನೂ ಒಂದು ಹಳೆಯ ಘಟನೆ ಕಾರಣವಿತ್ತು. ಚಿಕ್ಕಂದಿನಲ್ಲಿ, ಅಜ್ಜನ ಜೊತೆ, ಮಂಗಳಾದೇವಿಯ ನವರಾತ್ರಿ ಉತ್ಸವಕ್ಕೆ ತೆರಳಿದಾಗ, ಸಿಟಿ ಬಸ್ಸಲ್ಲಿ ಒಬ್ಬಳು ಮಹಿಳೆ, ''ಈ ಬುಟ್ಟಿ ಸ್ವಲ್ಪ ಎತ್ತಿಕೊಡು'' ಅಂದಾಗ, ನಿತ್ಯಾನಂದ, ತನಗೆ ಬಹಳ ಶಕ್ತಿ ಇದೆ ಎಂದು ಅಜ್ಜನಿಗೆ ಗೊತ್ತಾಗಲಿ ಎಂದು, ಆ ಬುಟ್ಟಿ ಎತ್ತಿ, ಆಕೆಯ ತಲೆಗಿಡಲು ನೆರವಾಗಿದ್ದ. ಇದನ್ನು ಕಂಡ ಅಜ್ಜ, ಸಿಟಿ ಬಸ್ಸಿನೊಳಗೇ ಈತನಿಗೆ ಬೈದಿದ್ದಿದೆ. ''ಅದೇನ್ ಗೊತ್ತಾ? ಒಣಗಿದ ಮೀನು ಮಾರಾಯ. ಸ್ವಲ್ಪ ನೋಡಿ ಮುಂದು ವರಿಯಬೇಕು''. ಅಜ್ಜನೊಟ್ಟಿಗೆ ತಿರುಗಾಡಿದ್ದ ರಿಂದಲೋ ಏನೋ, ಅಜ್ಜನ, ಅಪ್ಪನ ಸಾವಿನ ನಂತರ ಅವರ ಹಳೆ ಕಪಾಟು, ಕುರ್ಚಿಗ[ಳ] ಜೊತೆ, ಅವರ ದೇವರಿಗೂ ತಾನೇ ಪೂಜ[ೆ] ಮಾಡುವ ಪ್ರಸಂಗ ಎದುರಾಗಿದೆ. ಪೂಜ[ೆ] ಅಂದರೆ ನಿತ್ಯಾನಂದನಿಗೆ, ಕೇವಲ ಸಾಲಿಗ್ರಾಮ ವನ್ನು ತೊಳೆದಿಟ್ಟು, ಒಂದು ಆರತಿ ಬೆಳಗಿಸು[ವ] ದಷ್ಟೇ ಆಗಿದೆ.



''ಒಂದು ದಶಕದಲ್ಲಿ ಎಷ್ಟು ಹಣ ಮಾ[ಡಿ] ಬಂದಿಯಾ?'', ಮಾವ ಊಟದ ಹೊತ[್ತು] ಕೇಳಿದರು. ತಕ್ಷಣ, ''ಹಣ ಎಷ್ಟು ಅಂತಲ್ಲ. ನಿ[ನ್ನ] ಬದುಕಿಗೆ ತಕ್ಕಂತೆ ಸಂಪಾದಿಸಿದಿಯಾ ಅಥವ[ಾ] ಕೇವಲ ಕನ್ನಡ ಸಂಘಗಳಲ್ಲಿ, ಪತ್ರವ್ಯವಹಾ[ರ] ಗಳಲ್ಲಿ ದಿನ ಕಳೆದಿಯಾ ಅಂತ ಕೇಳಿದ್ದು'' ಎಂದ[ು] ತಿದ್ದಿಕೊಂಡರು.

''ಹಣ ಹೇಳಿಕೊಳ್ಳುವಷ್ಟು ಆಗಿಲ್ಲ. ಆದ[ರೆ] ಕಷ್ಟದ ದಿನಗಳಲ್ಲಿ ಹಣ ಕೇಳಿದರೆ, ನೀಡುವಂತ[ಹ] ಹಲವು ಗೆಳೆಯರಿದ್ದಾರೆ'' ಎಂದ ನಿತ್ಯಾನಂದ.

ಪುಣೆಯಿಂದ ಈಗ ಮಂಗಳೂರಿನ ಆಫೀಸ[ಿಗೆ] ವರ್ಗಾವಣೆ ಆದದ್ದಲ್ಲ, ಮಾಡಿಸಿಕೊಂಡದ್ದು. ಇಲ್ಲಿ ಹೊಸತಾಗಿ ಪರಿಚಯವಾದ ಕ್ಲಾರ್ಕ್ ಮಿ[ತ್ರ] ದಿನೇಶ್ ಕುಮಾರ್, ನಿನ್ನೆಯಷ್ಟೇ, ''ಒಮ್ಮೆ ನಿ[ಮ್ಮ] ಕೈನೀಡಿ. ನಾನು ರೇಖೆಗಳ ಬಗ್ಗೆ ಸ್ವಲ್ಪ ತಿಳಿ[ದು] ಕೊಂಡಿದ್ದೇನೆ'' ಅಂದಾಗ, ''ಸ್ವಲ್ಪ ಕಲಿತವರ[ಿಗೆ] ತೋರಿಸುವುದು ಅಪಾಯ'' ಎಂದು ನಿ[ತ್ಯಾ] ನಂದ, ನಕ್ಕು ಹೇಳಿದ್ದ. ಆದರೂ ಅವರು ಒತ್ತಾ[ಯ] ಪಡಿಸಿದ್ದರಿಂದ ಕೈನೀಡಿದ್ದ. ''ನಿಮ್ಮ ಧನರೇಖೆ[ಯ] ಪ್ರಕಾರ ನಿಮ್ಮಲ್ಲಿ ತುಂಬಾ ಹಣವಿರಬೇಕು'' ಎಂದಾಗ, ''ಇಲ್ಲವಲ್ಲ, ಅದಕ್ಕೆ ನಾನು ಹೇಳಿದ್ದು ಸ್ವಲ್ಪ ಗೊತ್ತಿದ್ದವರಿಗೆ ತೋರಿಸುವುದಿಲ್ಲ ಎಂದ[ು]. ನನ್ನಲ್ಲಿ ಸಾಕಷ್ಟು ಮಿತ್ರರಿದ್ದಾರೆ ಅಷ್ಟೆ'' ಎಂ[ದ] ನಿತ್ಯಾನಂದ. ಆ ಕ್ಲಾರ್ಕ್ ಮಿತ್ರ, ಸುಮ್ಮನಿರಲಿ[ಲ್ಲ] ''ಶೀಘ್ರವೇ ನಿಮಗೆ ಹಣ ಬರುವುದು ನೋ[ಡಿ] ನನ್ನ ಮಾತು ಸುಳ್ಳಾಗುವುದಿಲ್ಲ'' ಅಂದ[ರು]

ಂಟರಿ ಕೂಡಾ ಪಡೆದಿಲ್ಲ ಸ್ವಾಮಿ'' ಎಂದ ನಿತ್ಯಾ
ದ. ಅವರು ಬೇರೆಡೆ ಮಾತು ಹರಿಸಿದರು.
ಮಗೆ ಮದುವೆಯಾಗಿದೆ ತಾನೇ?'', ಕೇಳಿ
ು ಅನುಮಾನದಿಂದಲೇ.

ನಿತ್ಯಾನಂದ ನಕ್ಕ. ''ಅದೂ ಇಲ್ಲ ಸ್ವಾಮಿ''
ದಾಗ ಅವರಿಗೆ ಅಚ್ಚರಿಯಾಯಿತು. ''ಅದು
ಗೆ ಸಾಧ್ಯ? ಇಲ್ಲಿ ಮದುವೆಯಾಗಿರುವುದಾಗಿ
ಸಿದೆ'' ಎಂದರು.'ಸರಿ ಬಿಡಿ, ಹೇಗೋ ಸ್ವಲ್ಪ
ದವರು ಇರುವುದರಿಂದ ಕ್ಷಮಿಸಿಬಿಟ್ಟೆ' ಎಂದ
್ಯನಂದ, ವ್ಯಂಗ್ಯಮಿಶ್ರಿತ ಧ್ವನಿಯಲ್ಲಿ.

''ಲವ್ ಏನಾದರೂ ಮುರಿದುಬಿತ್ತೇ?'',
ತ್ತೆ ಕೇಳಿದರು. ನಿತ್ಯಾನಂದ ಮೌನವಾದ.
ಷ್ಟೊಂದು ಜನರನ್ನು ತಾನು ಲವ್ ಮಾಡಿಲ್ಲ.
ರ್ಯಾರನ್ನೆಲ್ಲ ಈಗ ನೆನಪಿಸಿಕೊಳ್ಳಲಿ? ಕಂಪ್ಯೂಟರ್
ಮಿನ ಸಾಧಾರಣ ಎಲ್ಲಾ ಹುಡುಗಿಯರನ್ನು
್ ಮಾಡಿದ್ದಿದೆ. ಅಂತಹ ಎಷ್ಟೋ ಪರಿಚಯದ
ಡುಗಿಯರಿದ್ದಾರೆ. ಈಗಿನ ಪ್ರಧಾನಮಂತ್ರಿ
ಳಿದಂತೆ, ''ತಾನು ಅವಿವಾಹಿತ ಹೊರತು
ಹ್ಮಚಾರಿ ಎಂದು ಕರೆಯಬೇಡಿ'' ಎಂಬ ಮಾತನ್ನೇ
್ಯಾನಂದನೂ ಇಲ್ಲಿ ಹೇಳಿದ್ದ. ಅವರಿಗೆ ಅರ್ಥ
ಯ್ತೋ ಏನೋ, ಮತ್ತೆ ಆ ಸುದ್ದಿ ಕೆದಕಲಿಲ್ಲ.
ುತ ಪೆಟ್ಟಿಗೆಗಳಲ್ಲೂ, ಪ್ರಧಾನಮಂತ್ರಿಗಳಿಗೆ
ವ್‌ಲೆಟರ್‌ಗಳು ಈ ಸಲ ಬಿದ್ದಿವೆ ಎಂದಾಗ,
ಸ್ನೂ ಹುಡುಗನಾಗಿರುವ ತನಗೆ ಲವ್ ಮಾಡು
ದಕ್ಕೆ ಏನು ಕಷ್ಟ? ಹಣ ಬರಲಿ, ಮತ್ತೆ ಬೇಕಷ್ಟು
ಡುಗಿಯರು ಸಿಗ್ತಾರೆ. ಆನಂತರ ಮದುವೆ
ಾಡಿಕೊಳ್ಳೋಣ...'' ಎಂದುಬಿಟ್ಟ. ''ನಿಜಕ್ಕೂ
ದುವೆಯಾಗಿಲ್ಲವೇ...?'' ಅವರಿಗೆ ಮತ್ತೂ
ಶಯ ಪರಿಹಾರವಾಗಿರಲಿಲ್ಲ...



ಊಟ ಮುಗಿಸಿದವಳು, ಅಮ್ಮ ಇನ್ನೊಂದು
ಗತಿ ಹೇಳಿದಳು, ''ಎದುರು ಮನೆಯ
ಶೇಶ, ತನ್ನ ಅಣ್ಣನ ಹೆಂಡತಿಯ ಜೊತೆ



ಪಲಾಯನ ಮಾಡಿದ್ದಾನೆ. ಬಹಳ ದಿನಗಳಾ
ದುವು. ಇನ್ನೂ ಹಿಂತಿರುಗಿಲ್ಲ...''

''ಹೆಂಡತಿಯನ್ನು ಬಿಟ್ಟು ಗಲ್ಫ್‌ನಲ್ಲಿ ಐದಾರು
ವರ್ಷ ಕೂತರೆ, ಪಾಪ, ಇವಳಾದರೂ ಏನು
ಮಾಡುವುದು?'', ನಿತ್ಯಾನಂದ ಹೇಳಿದಾಗ ಅಮ್ಮ,
''ನೀನದನ್ನು ಸಮರ್ಥಿಸುವುದೇ?'' ಪ್ರಶ್ನಿಸಿ
ದಳು. ''ಸಮರ್ಥನೆ ಅಲ್ಲ, ನನ್ನ ಅನುಮಾನವನ್ನು
ಮುಂದಿಟ್ಟದ್ದು'' ಎಂದ ನಿತ್ಯಾನಂದ.

''ಸುಮ್ಮನೆ, ಯಾರ್‍ಯಾರ ಹೆಂಡತಿ ಓಡಿಹೋದ
ಬಗ್ಗೆ ನಾವ್ಯಾಕೆ ಚರ್ಚಿಸಬೇಕು?'', ಮಾವ
ಮಾತು ಮುಗಿಸಿದರು.

ಮತ್ತೆ ಮೌನ. ಈಗ ತಾನೂ ಒಬ್ಬನೇ. ಇಷ್ಟು
ದೊಡ್ಡ ಮನೆಯಲ್ಲಿ ಒಂಟಿಯಾಗಿ ಇರುವು



ದಂದರೆ...! ಅಮ್ಮನನ್ನು ನೋಡಲೂ ಒಬ್ಬರು ಮನೆಯಲ್ಲಿ ಬೇಕಲ್ಲಾ. ಕಳೆದ ವರ್ಷ ಅಸ್ಸಾಂ ಪ್ರವಾಸದ ಸಮಯ, ಉಲ್ಫಾಗಳ ಮೇಲೆ ಒಂದು ಲೇಖನ ಬರೆಯುವ ಇಚ್ಛೆ ನಿತ್ಯಾನಂದನಿಗಿತ್ತು. ''ಮನೆಯಲ್ಲಿ ತಾಯಿ ಮಾತ್ರ ಇರುವುದು ನಿನಗೆ ನೆನಪಿರಲಿ. ಏನಾದರೂ ಹೆಚ್ಚುಕಮ್ಮಿಯಾದರ ತಾಯಿಗೆ ಯಾರೂ ಇಲ್ಲ ಅಂತಾದೀತು. ಉಲ್ಫಾ ಬಗೆಗಿನ ಲೇಖನ ದೊಡ್ಡದಲ್ಲ. ಬರೆಯದಿದ್ದರೂ ಏನೂ ನಷ್ಟವಿಲ್ಲ. ತಾಯಿಯೇ ದೊಡ್ಡದು ನಮಗೆ. ತಾಯಿಯ ಮುಖ ನೋಡಿಯಾದರೂ ಇಂತಹ ರಿಸ್ಕ್ ತೆಗೆದುಕೊಳ್ಳಬೇಡ...'' ಎಂದು ಗೆಳೆಯರು ಎಚ್ಚರಿಸಿದ್ದರಿಂದ ತನ್ನ ಅಸ್ಸಾಂ ಪ್ರವಾಸವನ್ನು ರದ್ದುಗೊಳಿಸಿದ್ದಿದೆ. ಈಗ ಊರಿಗೆ ಬಂದದ್ದೂ ತಾಯಿಗಾಗಿಯೇ. ಇಲ್ಲಿ, ಊರಲ್ಲಿ ನೋಡಿದರೆ, ಒಂದೊಂದು ಕತೆ, ದಂತಕತೆ, ದುರಂತ ಕತೆ.

ಮೊನ್ನೆ, ಕ್ಲಾಸ್‌ಮೇಟ್ ಲೂಸಿಫೆರ್ನಾಂಡಿಸ್, ನಿತ್ಯಾನಂದ ಊರಿಗೆ ಬಂದಿದ್ದಾನೆಂದು ತಿಳಿದು ಮನೆಗೆ ಬಂದಿದ್ದಳು. ಒಳಗೆ, ಗುಟ್ಟಲ್ಲಿ ಕರೆದು ಅಮ್ಮ ಹಿತವಚನ ಹೇಳಿದಳು,''ಸ್ವಲ್ಪ ಜಾಗ್ರತೆ ಇರು ಮಾರಾಯ. ಅವಳ ನಡತೆ ಸರಿ ಇಲ್ಲವಂತೆ ಐದು ವರ್ಷ ಕುವೈಟ್‌ನಲ್ಲಿದ್ದಳು. ಗಂಡ ಮಾತ್ರ ಇಲ್ಲೇ. ಈ ವರ್ಷವೇ ಬಂದಿದ್ದಾಳೆ. ಊರಲ್ಲಿ ದೊಡ್ಡ ಮನೆ ಕಟ್ಟಿಸಿದ್ದಾಳೆ. ಕುವೈಟ್‌ನಲ್ಲಿ ಆಯಾ ಕೆಲಸವೋ ಅಥವಾ ಇನ್ನೇನೋ... ಯಾರಿಗೆ ಗೊತ್ತು? ಐದು ವರ್ಷಗಳಲ್ಲಿ ಅಷ್ಟು ದೊಡ್ಡಮನೆ ಮಾಡುವುದು ಸಾಧ್ಯವೇ? ನಿನ್ನ ತಂದೆಗೆ ಈ ಮನೆ ಕಟ್ಟಿಸಲು 20 ವರ್ಷ ದುಡಿದ ಹಣ ಸುರಿಯ ಬೇಕಾಯಿತು... ಸ್ವಲ್ಪ ಎಚ್ಚರದಿಂದಲೇ ಇರು''.

ಲೂಸಿಯನ್ನು ಕೂರಿಸಿದ ನಿತ್ಯಾನಂದ. ಅದೆ ಸೌಂದರ್ಯ. ''ಇನ್ನು ಊರಲ್ಲೇ ಇರು ಯಂತೆ, ಕೇಳಿದ ಸುದ್ದಿ. ಕತೆ ಕೂಡಾ ಬರೆಯು ತ್ತಿದ್ದೀಯಾ. ಒಂದು ವಸ್ತು ಕೊಡುತ್ತೇನೆ. ಇನ್ನೊಮ್ಮೆ ಬರುವೆ. ಒಂಟಿಯಾಗಿ ಅಲ್ಲ, ಗಂಡನ ಜೊತೆ ಇಲ್ಲವಾದರೆ ನಿನಗೂ ತಾಪತ್ರಯ ನೋಡು...' ಹೇಳಿದಳು ಎಲ್ಲಾ ಗೊತ್ತಿದ್ದಂತೆ. ''ಹಾಗೇನಿಲ್ಲ ಎಂದ ನಿತ್ಯಾನಂದ. ಲೂಸಿ ಹೊರಟು ಹೋದಳು. ಯಾರೂ ಆರೋಪ ಹೊರಿಸುವಷ್ಟು ಚೆಂದ ಇದ್ದಾಳೆ. ''ಆಗಾಗ ಅವಳನ್ನು ಮನೆ ಕರೆಸಿಕೊಳ್ಳಬೇಡ.'' ಅಮ್ಮನ ಎಚ್ಚರಿಕೆ ಬೇರೆ ಬಂತು

ಎಂ.ಆರ್.ಪಿ.ಎಲ್. ದಕ್ಷಿಣ ಕನ್ನಡ ಕಾಲಿಟ್ಟಾಗಲೇ ಒಂದು ಕತೆಯಾಯಿತು. ಈ ಊರಲ್ಲಿ ಅದೆಷ್ಟು ಕತೆಗಳೋ...! ಅದರಲ್ಲಿ ತಾನು ಊರಿಗೆ ಕಾಲಿಟ್ಟ ದಿನ, ಭಜನ ಮಂದಿರದ ಪಕ್ಕದ ಮನೆಯಲ್ಲಿನ ಹುಡುಗಿ ಮೈಮೇಲೆ ಯಾರದೋ 'ಪ್ರೇತ' ಬಂದು, ಅ ಬೊಬ್ಬಿಟ್ಟದ್ದು ಕೂಡಾ ದೊಡ್ಡ ಕತೆ. ವಾರಕ್ಕೊ ಭಜನೆ, ಪೂಜೆ, ದಿನಾಪೂಜೆ, ದೇವರಪದ

ಸೆಟ್‌ನ ಬೊಂಬೆ... ಇದೆಲ್ಲದರ ನಡುವೆ ಕ್ಕದ ಮನೆಯ ಹುಡುಗಿಯ ಮೈಯ್ಯಲ್ಲಿ 'ಪ್ರೇತ' ವೇಶಿಸಿದ್ದು ಎಂದರೆ ಏನು ಕತೆ? ಆಕೆಯ ಅಮ್ಮ ಕ್ಕಿದಾಗ ನಿತ್ಯಾನಂದನ ಬಳಿ ಹೇಳಿ ಳು,"ಹೊಸ ಮಂಚ ಹಾಕಿ ನಂಬಬೇಕಂತೆ ಟುಂಬದವರು. ಆನಂತರ ಅದು ಮೈಯಿಂದ ೊರಟುಹೋಗುವುದಂತೆ. ಬೆಳೆದ ಹುಡುಗಿ ೋಡಿ. ನಾಳೆ ಯಾರೂ ಮದುವೆಯಾಗ ದ್ದರೆ... ನಾವು 'ಮಂಚ' ಹಾಕಿ ನಂಬಲು ಶ್ಚಯಿಸಿದ್ದೇವೆ. ಹದಿನಾಲ್ಕುಸಾವಿರದ ತನಕ ರ್ಚಾಗುವ ಸಾಧ್ಯತೆಗಳಿವೆ..."

ಊಟದ ನಂತರ ಮಾವ ಸ್ವಲ್ಪ ನಿದ್ದೆ ಾಡಿದರು. ಪೋಸ್ಟ್‌ಮನ್, ಟೇಬಲ್ ಮೇಲೆ ಗದ ಬಿಸಾಕಿ ಹೋಗಿದ್ದ. ಪುಣೆಯಿಂದ ಂದಿತ್ತು. ಅಲ್ಲಿಯ ಆಫೀಸಿನ ಗೆಳೆಯನದು. ಸುಬ್ರಾಯಭಟ್ಟರು ಮದುವೆಯಾದುದು ಮದ ಆಸೆಗಾಗಿ ಅಲ್ಲ. ಪೌರೋಹಿತ್ಯ ಾಡುವವನಿಗೆ ಪತ್ನಿ ಇರಬೇಕಂತೆ. ವಿಧುರರು ಲವು ವಿಶಿಷ್ಟ ಹೋಮ ಮಾಡುವ ಅಧಿಕಾರ ಂದ ವಂಚಿತರಾಗಿರುತ್ತಾರೆ. ಅದಕ್ಕಾಗಿ ಅವರು ವಿವಾಹವಾದರಂತೆ..." ಮುಂದೆ ಓದಲಾಗ ಲಿಲ್ಲ. ಯಾಕೆಂದರೆ ಸುಬ್ರಾಯಭಟ್ಟರು ಈ ತನಕ ಪೌರೋಹಿತ್ಯದಿಂದಲೇ ಬದುಕಿರುವುದು.

'ಮದುವೆ' ಎನ್ನುವುದು ಎಷ್ಟು ವಿಚಿತ್ರ ಸಂಗತಿಯಲ್ಲವೇ! ಎಲ್ಲರಿಗೂ, ಬೇರೆ ಬೇರೆ ಕಾರಣಗಳಿಗಾಗಿ, ಅದು ಅನಿವಾರ್ಯ ಮತ್ತು ಅಷ್ಟೇ ಅಗತ್ಯ. ಸಂಜೆ, ಎದ್ದ ನಂತರ, ನಿತ್ಯಾನಂದ ಮೆಲ್ಲಗೆ ಹೇಳಿದ, "ನಾನು ಮದುವೆಯಾಗಲು ನಿರ್ಧರಿಸಿದ್ದೇನೆ, ಭಜನಾ ಮಂದಿರದ ಪಕ್ಕದ ಮನೆಯ ಹುಡುಗಿಯನ್ನು". "ಏನು ಆ ಪ್ರೇತ ಮೈಮೇಲೆ ಬರುವವಳನ್ನೇ?"

"ಹೌದು"

"ಅರೆ!", ಅಮ್ಮ ಚಹಕ್ಕೆಂದು ಒಲೆಯ ಮೇಲೆ ಹಾಲಿಟ್ಟವರು ಮಾತು ಕೇಳಿಸಿ ಕೊಂಡರೋ ಏನೋ... ಹಾಲು ಉಕ್ಕೇರಿ ಕೆಳಗೆ ಹರಿದರೂ ಅವರಿಗೆ ತಿಳಿಯಲಿಲ್ಲ.



# ಅಲೀಸ್ ವಾಕರ್

# ಕೌದಿ

**ಕನ್ನಡಕ್ಕೆ: ಸುಕನ್ಯಾ**

ನಿನ್ನೆ ತಾನೇ ನಾನು ಮತ್ತು ಕಿರಿಯ ಮಗಳು ಮೆಗಿ ಕೂಡಿ ಲಕಲಕಿಸುವಂತೆ ಮಾಡಿರುವ ಅಂಗಳದಲ್ಲಿ, ಹಿರಿಮಗಳು 'ಡೀ'ಗೋಸ್ಕರ ಕಾಯುತ್ತಾ ನಿಲ್ಲುತ್ತೇನೆ. ಅಂಗಳ ನಮಗೆ ಬರೀ ಅಂಗಳವಲ್ಲ, ಪಡಸಾಲೆಯ ಒಂದು ಭಾಗ. ಅಲ್ಲಿರುವ ಒರಟು ಮಣ್ಣನ್ನು ಗುಡಿಸಿ, ಮನೆ ನೆಲದಂತೆ ಸಾರಿಸಿ, ಬದುವಿನಲ್ಲಿರುವ ಸಾಲು ಮರ, ಪುಟ್ಟ ತೋಡುಗಳ ಸುತ್ತ ನುಣ್ಣಗಿನ ಮರಳನ್ನು ಉದುರಿಸಿದರೆ, ಯಾರು ಬೇಕಾದರೂ ಬಂದು, ಆರಾಮವಾಗಿ ಕೂತು, ಎಲ್ಮ್ ಮರಗಳತ್ತ ಕಣ್ಣನ್ನು ನೆಟ್ಟು, ಮನೆಯೊಳಗೆ ಯಾವತ್ತೂ ಇಣುಕ ತಂಗಾಳಿಗಾಗಿ ಕಾದು ಕೂರಬಹುದು.

'ಡೀ' ಬಂದಾಗೆಲ್ಲ, ಅವಳು ತೊಲಗು ತನಕ ಮೆಗಿ, ತನ್ನ ತೋಳು, ಕಾಲುಗ ಮೇಲಿರುವ ಸುಟ್ಟ ಗುರುತುಗಳನ್ನು ನೋ ಕೊಳ್ಳುತ್ತಾ, ತನ್ನ ಅಕ್ಕನನ್ನು ಭಯ, ಗೌರವ ಹೊಟ್ಟೆಯುರಿಯಿಂದ, ಕದ್ದು ಕದ್ದು ನೋಡುತ್ತಾ ಬಿಳಿಚಿಕೊಂಡು ಮೂಲೆಯಲ್ಲಿ ಕವುಚಿಕೊಂಡಿರ ತ್ತಾಳೆ. ಅವಳ ಪ್ರಕಾರ, ಅಕ್ಕ, ಬದುಕನ್ನು ತ ಅಂಗೈಲಿರಿಸಿಕೊಂಡು ಆಳುತ್ತಿರುವ ಧೀಮಂತೆ



ಇಕ್ಬಾಲ್

ದುಕು ಅವಳಿಗೆ 'ಇಲ್ಲ' ಅಂತ ಹೇಳುವ
ರ್ಷ್ಯವನ್ನು ತೋರಿದ್ದೇ ಇಲ್ಲ.

ನೀವು ಖಂಡಿತವಾಗಿ ಆ ಟಿವಿ ಕಾರ್ಯ
ಮಗಳನ್ನು ನೋಡಿರುತ್ತೀರಿ. ಅದರಲ್ಲಿ,
ಷ್ಟೋ ಕಾಲದಿಂದ ಭೇಟಿಯಾಗಿರದ 'ಪ್ರಸಿದ್ಧ'
ಗ/ಳು, ರಂಗದ ಹಿಂಬದಿಯಿಂದ, ನಿಶ್ಶಕ್ತಿ
ಯಿಂದ ತತ್ತರಿಸಿಕೊಂಡು ಬರುತ್ತಿರುವ ತನ್ನ ತಂದೆ
ಾಯಿಯರನ್ನು, ಹಠಾತ್ತಾಗಿ ಮುಖಾಮುಖಿ
ಾಗುವಂತೆ ಮಾಡಲಾಗುತ್ತದೆ. (ಹಿತವಾದ
ರಗನ್ನುಂಟು ಮಾಡುವ ಸನ್ನಿವೇಶವೇನೋ
ರಿ: ಆದರೆ ರಂಗದ ಮೇಲೆ ಬಂದ ಅಪ್ಪ/ಅಮ್ಮ
ುತ್ತು ಮಗ/ಳು ಒಬ್ಬರನ್ನೊಬ್ಬರು ನಿಂದಿಸಿ
ವಮಾನ ಮಾಡಲಾರಂಭಿಸಿದರೆ ಕಾರ್ಯ
್ರಮವನ್ನು ಏರ್ಪಡಿಸಿದವರ ಗತಿ ಏನಾಗ
ಹುದು!) ಟಿವಿಯಲ್ಲಿ ಅಪ್ಪ/ಅಮ್ಮ
ುತ್ತು ಮಗ/ಳು ಅಪ್ಪಿಕೊಂಡು
ರಗೆ ಸೂಸುತ್ತಾರೆ.

ಕೆಲವು ಸಲ ಭಾವಾವೇಶದಿಂದ ಕಣ್ಣೀರಿಡುತ್ತಾರೆ, ಮಗಳು ಅವರನ್ನು ತಬ್ಬಿಕೊಂಡು, ಅವರ ಆಶೀರ್ವಾದ, ಸಹಕಾರವಿಲ್ಲದಿದ್ದರೆ ತಾನು ಆ ಸ್ಥಿತಿಗೆ ಬರಲೇ ಆಗುತ್ತಿರಲಿಲ್ಲವೆಂದು ಹೇಳಲು ಅವರಿರುವ ಮೇಜಿನ ಆ ಕಡೆಗೆ ಬಾಗುತ್ತಾಳೆ. ಬಿಡಿ, ಅಂತಹ ಕಾರ್ಯಕ್ರಮಗಳನ್ನು ಸಾಕಷ್ಟು ನೋಡಾಗಿದೆ.

ನಾನು ಮತ್ತು 'ಡೀ' ಹಠಾತ್ತಾಗಿ ಎಲ್ಲೋ ಮುಖಾಮುಖಿಯಾದರೆ ಹೇಗಿರುತ್ತೆ ಅಂತ ಎಷ್ಟೋ ಸಲ ಕನಸು ಕಂಡಿದ್ದಿದೆ. ಸಾರೋಟಿನ, ಮೆತ್ತನೆಯ, ಕತ್ತಲೆಯ ವಾತಾವರಣದಿಂದ



ತುಂಬ ಜನರಿರುವ ಬೆಳಕಿನ ಕೋಣೆಗೆ
ಕರೆದೊಯ್ದಂತೆ, ಅಲ್ಲಿ, ಟಿವಿ ಸಂದರ್ಶಕ ಜಾನಿ
ಕಾರ್ಸನ್, ಗೆಲುಮುಖದಿಂದ ನನ್ನನ್ನು ಕೈ ಕುಲುಕಿ
ಸ್ವಾಗತಿಸಿ, ಇಂಥ ಅದ್ಭುತ ಮಗಳನ್ನು ಪಡೆದಿ
ರುವ ನನ್ನ ಅದೃಷ್ಟವನ್ನು ಅಭಿನಂದಿಸಿದಂತೆ,
ರಂಗದ ಮೇಲೆ, ಕಣ್ತುಂಬ ನೀರು ತುಂಬಿಕೊಂಡ
'ಡೀ' ನನ್ನನ್ನು ಅಪ್ಪಿಕೊಂಡು, ನನ್ನ ಅಂಗಿಯ
ಮೇಲೆ ಒಂದು ದೊಡ್ಡ ಆರ್ಕಿಡ್ ಹೂವನ್ನು
(ಹಿಂದೊಮ್ಮೆ ಅವಳು ಆರ್ಕಿಡ್ ಹೂವುಗಳು
ಬಲು ಜಿಗಟು ಎಂದು ಮುಖ ಸಿಂಡರಿಸಿದ್ದರೂ
ಸಹ!) ಸಿಕ್ಕಿಸಿದಂತೆ ಕನಸಿದ್ದೇನೆ.

ಹರವಾದ ಮೈಕಟ್ಟುಳ್ಳ, ಒರಟಾದ
ಕೈಗಳಿರುವ ಗಂಡಸಿನಂಥ ಒಬ್ಬಳು ಹೆಂಗಸು
ನಾನು. ಚಳಿಗಾಲದಲ್ಲಿ, ರಾತ್ರಿ ಹೊತ್ತು ಫ್ಲಾನೆಲ್
ಗೌನು ಮತ್ತು ಹಗಲು ಹೊತ್ತು ಉದ್ದ ನಿಲುವಂಗಿ
ನನ್ನ ಉಡುಪು. ಒಬ್ಬ ಗಂಡಸಿನಷ್ಟೇ ಕಟುಕತನ
ದಿಂದ ಒಂದು ಹಂದಿಯನ್ನು ಹೊಡೆದು,
ಆರಾಮವಾಗಿ ಹದ ಮಾಡಬಲ್ಲೆ. ನನ್ನ ಮೈ
ಯಲ್ಲಿರುವ ನೆಣ, ನನ್ನನ್ನು ಕಡುಚಳಿಯಲ್ಲೂ ಬೆಚ್ಚ
ಗಿರಿಸಬಲ್ಲದು. ಬಟ್ಟೆ ಒಗೆಯಲು ಮತ್ತು ಇತರ
ತೊಳೆಯುವ ಕೆಲಸಗಳಿಗೆ ಬೇಕಾದ ನೀರಿಗೋ
ಸ್ಕರ, ಇಡೀ ದಿನ ಹೊರಗೆ ನಿಂತು, ಮಂಜುಗಡ್ಡೆ
ಯನ್ನೊಡೆಯುವ ಕೆಲಸ ಮಾಡಬಲ್ಲೆ. ಬಯಲಿನ
ಒಲೆಯಲ್ಲಿ, ಸುಟ್ಟ ಕೆಲವು ಗಳಿಗೆಯಲ್ಲೇ ತಯಾ
ರಾಗುವ ಹಂದಿಯ ಹಬೆಗುಡುವ ಕರುಳನ್ನು,
ಸುಲಭವಾಗಿ ತಿಂದು ಮುಗಿಸಬಲ್ಲೆ. ಚಳಿಗಾಲದ
ಒಂದು ದಿನ, ಒಂದು ಎಮ್ಮೆ ಕರುವಿನ ನೆತ್ತಿಗೆ
ಸುತ್ತಿಗೆಯಿಂದ ಗುರಿಯಿಟ್ಟು ಹೊಡೆದು, ಮಾಂಸ
ವನ್ನು ಸಿಗಿದು, ರಾತ್ರಿಯಾಗುವುದರೊಳಗೆ
ಅದನ್ನು ಚಳಿಯಲ್ಲಿ ಶೈತ್ಯಗೊಳಿಸಲು ಹರವಿ
ಹಾಕಿದ್ದೂ ಆಗಿತ್ತು. ಆದರೇನು ಮಾಡೋದು,
ಟಿವಿಯಲ್ಲಿ ಇದೆಲ್ಲ ತೋರಿಸಲು ಸಾಧ್ಯವಿಲ್ಲವಲ್ಲ!
ನಾನು, ನನ್ನ ಮಗಳಿಗೆ ಹೇಗೆ ಬೇಕೋ ಹಾಗಿರ
ಬೇಕು: ನನ್ನ ಮೈಯ ನೆಣ ಕಾಣಿಸಬಾರದು, ನನ್ನ

ಚರ್ಮ, ಬೇಯಿಸಿದ ಬಾರ್ಲಿ ದೋಸೆಯಂತೆ
ಮಂದ ಬಣ್ಣದಲ್ಲಿರಬೇಕು. ನನ್ನ ಕೂದಲು
ಝಗಝಗಿಸುವ ಬೆಳಕಲ್ಲಿ ಹೊಳೆಯುತ್ತಿರಬೇಕು
ಮತ್ತೆ ಆ ಸಂದರ್ಶಕ, ಜಾನಿ ಕಾರ್ಸನ್, ನನ
ಹರಿತವಾದ ನಾಲಗೆಯಿಂದ ಉದುರು
ಚಮತ್ಕಾರದ ಮಾತುಗಳನ್ನ ತಡೆದುಕೊಳ್ಳೋದಕ
ಹೆಣಗಾಡಬೇಕು.

ಆದರ ಸತ್ಯ ಅದಲ್ಲ. ಕನಸು ಮುಗಿಯು
ಮುಂಚೆಯೇ ನನಗೆ ಸತ್ಯ ಗೊತ್ತು. ನಮ್ಮ ಜಾನ್ಸನ
ಕುಟುಂಬದ ಯಾರಿಗಾದರೂ, ಹರಿತವಾ
ನಾಲಿಗೆಯಿದೆ ಎಂದರೆ ಯಾರಾದರೂ ನಂಬ
ತ್ತಾರೆಯೆ? ಯಾವತ್ತಾದರೂ ನಾನು, ಅಪರಿಚಿ
ಬಿಳಿ ಮನುಷ್ಯನ ಜೊತೆ ಮುಖ ಕೊಟ್ಟು ಮಾತಾ
ಡ್ದುಂಟೆ? ಅವರ ಜೊತೆ ಮಾತಾಡಬೇಕಿದ್ದಾಗೆಲ್ಲ
ಬಿಟ್ಟರೆ ಸಾಕು, ನಗೆದು ಒಡಬಲ್ಲೆ ಎಂ
ಭಂಗಿಯಲ್ಲೇ ನಾನು ಮಾತಾಡುವುದು. ಹೇ
ನಿಂತರೆ ಅವರಿಂದ ನನ್ನ ಮುಖವನ್ನು ಆದಷ
ದೂರವಿಡಬಹುದು ಎಂದು ಲೆಕ್ಕ ಹಾಕಿ, ಅಷ
ದೂರದಿಂದ ಮಾತಾಡಿದ್ದಿದೆ. 'ಡೀ' ಹಾಗಲ್ಲ
ಕಣ್ಣಲ್ಲಿ ಕಣ್ಣಿಟ್ಟು ಮಾತಾಡಿಯೇ ಸೈ. ಹಿಂಜರಿ
ಅವಳ ಹತ್ತಿರ ಬರಲು ಹಿಂಜರಿಯುತ್ತದೆ.

''ಅಮ್ಮ, ನಾನು ಹೇಗೆ ಕಾಣಿಸ್ತಾ ಇದೀನಿ?''
ಗುಲಾಬಿ ಬಣ್ಣದ ಸ್ಕರ್ಟಿನ ಮೇಲೆ ಕೆಂಪು ಬ್ಲೌಸ
ಹಾಕಿ, ನನಗೆ ಸ್ವಲ್ಪವೇ ಕಾಣಿಸುವಷ್ಟು ತನ್ನ ಪೀಚ
ಮೈಯನ್ನು ತೋರಿಸಿ, ಬಾಗಿಲಿಂದಾಚೆ ಕವು
ಕೊಳ್ಳುತ್ತಾ ಕೇಳುತ್ತಾಳೆ, ಮೆಗಿ.

''ಹೊರಗೆ ಅಂಗಳಕ್ಕ ಬಾ''.

ಶ್ರೀಮಂತನ ಕಾರಿಗೆ ಸಿಕ್ಕಿ ಗಾಯಗೊಂ
ಸಾಧು ಪ್ರಾಣಿಯನ್ನ, (ನಾಯಿ ಅಂತಲೆ
ಇಟ್ಟುಕೊಳ್ಳಿ) ನೋಡಿದ್ದೀರಾ? ಕ್ಯಾರೆ ಅ
ದಿದ್ದರೂ ಸಹ, ಮತ್ತೆ, ಮತ್ತೆ ದೀನವಾಗಿ
ಸೊಟ್ಟಂಪಟ್ಟ ಹೆಜ್ಜೆಗಳನ್ನಿಡುತ್ತ ಅವನ ಹತ್ತಿರವೆ
ಹೋಗುತ್ತಲ್ಲ, ನನ್ನ ಮೆಗಿ ನಡೆಯುವುದ
ಹಾಗೆಯೇ. ಆ ಇನ್ನೊಂದು ಮನೆ ಸುಟ



ದಿಯಾದಾಗಿಂದ, ಅವಳು ಹೀಗೇ, ಗದ್ದ
ನ್ನು ಎದೆಯ ಮೇಲೆ, ಕಣ್ಣನ್ನು ನೆಲಕ್ಕೆ, ಕೀಲಿಸಿ,
ಲನ್ನು ಎಳೆಯುತ್ತ ನಡೆಯುತ್ತಾಳೆ.

ಮೆಗಿಗಿಂತ ಚೆಂದದ ಕೂದಲಿರುವ, ಹಗುರ
ದ ಆದರೆ ಮೈ ತುಂಬಿಕೊಂಡಿರುವಂತಹವಳು
'. ಮೆಗಿ ಹೆಣ್ಣಾಗಿದ್ದಾಳೆ, ಹುಡುಗಿಯಲ್ಲ
ನ್ನುವುದೇ ಕೆಲವು ಸಲ ಮರೆತುಹೋಗುತ್ತೆ,
ಗೆ. ಆ ಮನೆ ಸುಟ್ಟು ಎಷ್ಟು ವರ್ಷಗಳಾಗಿರ
ಬಹುದು? ಹತ್ತು? ಹನ್ನೆರಡು? ಕೆಲವು ಸಲ ನನ್ನ
ಗೆ, ಆ ಜ್ವಾಲೆಗಳ ಸದ್ದು ಕೇಳಿಸುತ್ತದೆ, ಹೆದ
ವ ಮೆಗಿಯ ತೋಳುಗಳು ನನ್ನನ್ನು ಅಂಟಿ
ಂಡಿರುವಂತೆ, ಅವಳ ಕೂದಲಿಂದ ಸುಟ್ಟ
ಸನೆ ಬರುತ್ತಿರುವಂತೆ, ಸುಟ್ಟ ಅವಳ ಬಟ್ಟೆ,
ಗದದ ಕಪ್ಪು ಹಳಕುಗಳಂತೆ ಉದುರುತ್ತಿರು
ತೆ ಅನ್ನಿಸುತ್ತದೆ. ಬೆಂಕಿಯ ಜ್ವಾಲೆ ಕಣ್ಣು
ಲ್ಲೂ ಧಗಧಗಿಸುತ್ತಿದೆಯೇನೋ ಎಂಬಂತೆ
ಲವಾಗಿದ್ದ ಅವಳ ಕಣ್ಣುಗಳು ಈಗಲೂ
ಪಿವೆ. ಮತ್ತೆ 'ಡೀ' ಎಲ್ಲಿದ್ದಳು? ಅವಳು,
ಅಂಟನ್ನು ಕೆತ್ತುತ್ತಿದ್ದ ಆ ಮರದ ಕೆಳಗೆ ನಿಂತಿ
ದ್ದಳಲ್ಲವೆ? ಮಾಸಿ ಕೊಳಕಾದ ಕೊನೆಯ ಹಲಗೆ,
ಕೆಂಪಗೆ ಹತ್ತಿ ಉರಿಯುತ್ತಿದ್ದ ಇಟ್ಟಿಗೆಯ ಹೊಗೆ
ಗೂಡಿನಲ್ಲಿ ಬೀಳುವುದನ್ನು ನೋಡುತ್ತಿದ್ದವಳ
ಮುಖದಲ್ಲಿ ವಿಚಿತ್ರ ತನ್ಮಯತೆಯಿತ್ತು. 'ಆ
ಬೂದಿಯ ಸುತ್ತ ಕುಣಿದು ನಲಿಯಬಹುದಲ್ಲವೆ
ನೀನು ಈಗ?' ಎಂದು ಕೇಳಬೇಕೆನ್ನಿಸಿತ್ತು. ಆ
ಮನೆಯೆಂದರೆ ಅಷ್ಟು ಉರಿಯುತ್ತಿದ್ದಳು ಅವಳು.

ಚರ್ಚಿನ ಸಹಾಯದಿಂದ ಅವಳನ್ನು ಅಗಸ್ಟಾ
ಸ್ಕೂಲಿಗೆ ಕಳುಹಿಸಲು ಹಣ ಹೊಂದಿಸುವ
ಮುಂಚಿನ ದಿನಗಳಲ್ಲಿ, ಅವಳು ಮೆಗಿಯನ್ನು ಸಹ
ಹೀಗೇ ದ್ವೇಷಿಸುತ್ತಾಳೆ ಎಂದನ್ನಿಸುತ್ತಿತ್ತು ನನಗೆ.
ನಿರ್ದಯೆಯಿಂದ, ನಮ್ಮಿಬ್ಬರನ್ನೂ ಕೂರಿಸಿ
ಏನೇನೋ ಓದಿ ಹೇಳುತ್ತಿದ್ದಳು, ಎಗ್ಗೇ ಇಲ್ಲ
ದಂತೆ. ಬರೀ ಸುಳ್ಳುಗಳು, ಉರು ಹೊಡೆದ
ಪದಗಳು, ಕಂಡಿಲ್ಲದವರ, ಕಾಣದವರ ಬದುಕಿನ
ಕ್ರಮಗಳು, ಅವಳ ಬಾಯಿಂದ ಉರುಳುರುಳಿ,
ಅವಳ ಧ್ವನಿಯಡಿ ಹೂತು ಕೂತಿದ್ದ,

ಅಜ್ಞಾನಿಗಳಾದ ನಮ್ಮ ಕಡೆಗೆ ಬೀಳುತ್ತಿದ್ದವು. ನಮ್ಮನ್ನು ಭ್ರಮೆಗಳಲ್ಲಿ ಅದ್ದಿ ತೆಗೆದು, ನಮಗೆ ಬೇಕೇ ಇಲ್ಲದ ಅಗಾಧ ಜ್ಞಾನದಿಂದ ನಮ್ಮನ್ನು ಸುಟ್ಟಳು. ಗಂಭೀರ ಧ್ವನಿಯಲ್ಲಿ ಅವಳು ಹೇಳುತ್ತಿದ್ದ ಘನವಾದ ವಿಷಯ ಸ್ವಲ್ಪವಾದರೂ ಅರ್ಥವಾಗಲಾರಂಭಿಸಿದೆ ಅಂತ ಅಂದುಕೊಳ್ಳುವಾಗಲೇ, ನಾವು ತಲೆ ಸರಿಯಿಲ್ಲದವರೇನೊ ಎಂಬಂತೆ, ನೂಕಿ, ಹೊರಟುಹೋಗುತ್ತಿದ್ದಳು.

'ಡೀ'ಗೆ ಚೆಂದಗಿರುವುದೆಲ್ಲವೂ ಬೇಕಿತ್ತು. ಹೈಸ್ಕೂಲಿನಿಂದ ಪಾಸಾದಾಗ ಏರ್ಪಡಿಸಿದ್ದ ಸಮಾರಂಭಕ್ಕೆ, ಹಳದಿ ಬಣ್ಣದ ಆರ್ಗಂಡಿ ಉಡುಪು, ನನಗೆ ಯಾರೋ ಕೊಟ್ಟಿದ್ದ ಹಸಿರು ಬಣ್ಣದ ದಿರಿಸನ್ನು ಹರಿಸಿ, ತನಗೋಸ್ಕರ ಹೊಲೆಸಿಕೊಂಡಿದ್ದ ದಿರಿಸಿಗೆ ಹೊಂದುವ ಕಪ್ಪು ಪಂಪ್ ಶೂಸು, ಹೀಗೆ ಏನೇನೋ. ಅವಳ ಪ್ರಯತ್ನಕ್ಕೆ ಅಡ್ಡಿಯಾಗುವ ಅನಾಹುತಗಳ ಕಣ್ಣಲ್ಲಿ ಕಣ್ಣಿಟ್ಟು, ನಿಡಿದಾಗಿ ನೋಡಿ, ಅವನ್ನು ಹೊರದೂಡುವ ಛಲವಿತ್ತು ಅವಳಲ್ಲಿ. ಕೆಲವು ಸಲ ಅವಳ ಕಣ್ರೆಪ್ಪೆಗಳು ಅಲುಗಾಡುತ್ತಲೇ ಇರಲಿಲ್ಲ. ಎಷ್ಟೋ ಸಲ, ಅವಳನ್ನು ಹಿಡಿದು, ಅಲುಗಾಡಿಸಿ, ಝಾಡಿಸಬೇಕೆನ್ನಿಸುತ್ತಿತ್ತು. ಕಷ್ಟಪಟ್ಟು ಹತ್ತಿಕ್ಕಿಕೊಳ್ಳುತ್ತಿದ್ದೆ. ಹದಿನಾರರ ಹೊತ್ತಿಗೆ ತನ್ನದೇ ಆದ 'ಸ್ಟೈಲ್' ಬೆಳೆಸಿಕೊಂಡಿದ್ದಳು.

ನಾನು ಶಾಲೆಗೆ ಹೋದದ್ದೇ ಇಲ್ಲ. ಎರಡನೆಯ ದರ್ಜೆಯ ನಂತರ ಶಾಲೆ ಮುಚ್ಚಲ್ಪಟ್ಟಿತು. ಯಾಕೆಂದು ಕೇಳಬೇಡಿ: ಈಗಿನ ಕಾಲದವರಿಗಿರುವಂತೆ 1927ರ ವರ್ಣೀಯರಿಗೆ ಪ್ರಶ್ನೆಗಳನ್ನು ಕೇಳುವ ಅಭ್ಯಾಸವಿರಲಿಲ್ಲ. ಮ್ಯಾಗಿ, ಕೆಲವು ಸಲ, ನನಗೆ ಓದಿ ಹೇಳುವ ಪ್ರಯತ್ನ ಮಾಡುತ್ತಾಳೆ. ಪ್ರಯತ್ನವೇನೋ ಮಾಡುತ್ತಾಳೆ ಪಾಪ, ಆದರೆ ಅವಳಿಗೆ ಅರ್ಥವಾಗುವುದೇ ಕಡಿಮೆ. ತಾನು ದಡ್ಡಿಯೆಂದು ಅವಳಿಗೂ ಗೊತ್ತು. ರೂಪ, ಐಶ್ವರ್ಯ ಅವಳನ್ನು ತಾಕದೇ ದಾಟಿ ಹೋದಂತೆ, ಚುರುಕುತನವೂ ಅವಳ ಹತ್ತಿರ ಬಂದಿರಲಿಲ್ಲ. ಸದ್ಯದಲ್ಲೇ ಅವಳ ಮದುವೆ (ಆ ಪಾಚಿ ಹಲ್ಲುಗಳ, ಸರ[illegible] ಲಕ್ಷಣದ) ಜಾನ್ ಥಾಮ್ಸನ್ನೊಂದಿಗೆ ನಡೆಯ[illegible] ಲಿದೆ. ಆಮೇಲೆ ಹೊತ್ತು ಕಳೆಯುವುದು ಹೇಗೆ[illegible] ಬಹುಶಃ, ಚರ್ಚಿನ ಹಾಡುಗಳನ್ನು ಹೇಳಿಕೊಳ್ಳು[illegible] ಕಾಲ ಕಳೆಯಬಹುದು. ಚೆಂದವಾಗಿ ಹಾಡ[illegible] ಬರದಿದ್ದರೆ ಏನಂತೆ? ಇಲ್ಲಿವರೆಗೂ ಹಾಡಿ[illegible] ದಿದ್ದರೆ ಏನಂತೆ? ಆದರೂ ನನಗೆ ಚೆನ್ನಾ[illegible] ಮಾಡಲು ಬರುವುದು ಗಂಡಸಿನ ಕೆಲಸಗಳೇ[illegible] ಇತ್ತೀಚೆಗೆ ಹಸುವಿನ ಕೊಂಬನಿಂದ ಪ[illegible] ಇರಿಸಿಕೊಳ್ಳುವವರೆಗೂ ಹಾಲು ಕರೆಯು[illegible] ದೆಂದರೆ ಎಷ್ಟು ಆಸಕ್ತಿ ತನಗೆ! ಅಡ್ಡಾದಿಡ್ಡಿಯಾ[illegible] ಕರೆದಾಗ ಒದೆಯುವುದು ಬಿಟ್ಟರೆ, ಹಸುಗ[illegible] ಎಷ್ಟು ಶಾಂತವಾಗಿರುತ್ತವೆ! ಎಷ್ಟು ನೆಮ್ಮ[illegible] ನೀಡುತ್ತವೆ!

ಬೇಕೆಂತಲೇ ಮನೆಯ ಕಡೆಗೆ ಬೆನ್ನು ಹಾ[illegible] ಕೂತಿದ್ದೇನೆ. ಮನೆಯೆಂದರೇನು? ಇದಕ್ಕೆ[illegible] ಮೂರು ರೂಮುಗಳಿವೆ, ಆ ಸುಟ್ಟುಹೋ[illegible] ಮನೆಯು ತರಹವೇ. ವ್ಯತ್ಯಾಸವೆಂದರೆ, [illegible] ಮನೆಗೆ ತವರದ ಛಾವಣಿ ಇದೆ. ಮರ[illegible] ಹಲಗೆಯ ಛಾವಣಿ ಈಗ ಮಾಡೋರಿಲ್ಲವ[illegible] ಈ ಮನೆಗೆ ನಿಜವಾದ ಕಿಟಕಿಗಳಿಲ್ಲ. ಇರುವು[illegible] ಬರೀ ರಂಧ್ರಗಳು, ಹಡಗಲ್ಲಿ ಇರುತ್ತವೆಯ[illegible] ಕೊರೆದ ರಂಧ್ರಗಳು, ಹಾಗೆ. ಉರುಟೂ ಅ[illegible] ಚೌಕಟ್ಟೂ ಅಲ್ಲ. ಪ್ರಾಣಿಗಳ ಹಸಿ ಚರ್ಮವ[illegible] ಉಪಯೋಗಿಸಿ ಕಿಟಕಿಯ ಬಾಗಿಲುಗಳ[illegible] ಮೇಲೆತ್ತಿ ಹಿಡಿಯಲಾಗಿದೆ. ಆ ಮನೆಯಂತೆ [illegible] ಮನೆಯೂ, ಹುಲ್ಲುಗಾವಲಿನ ಮಧ್ಯೆ ಇ[illegible] ಖಂಡಿತವಾಗಿ, ನೋಡಿದ ತಕ್ಷಣವೇ, [illegible] ಮನೆಯನ್ನು ಹರಿದು ಹಾಕಿಬಿಡಬೇಕೆನ್ನಿಸಬಹು[illegible] 'ಡೀ'ಗೆ. ಅವಳೊಂದು ಸಲ ಕಾಗದ ಬರೆದಿದ್ದಳ[illegible] 'ಎಲ್ಲಿ ಬೇಕಾದರೂ ಇರುವ 'ಸ್ವಾತಂತ್ರ[illegible] ನಿಮಗಿದೆ, ನೀವೆಲ್ಲಿದ್ದರೂ ನಾನು ನಿಮ್ಮ[illegible] ನೋಡಲು ಬಂದೇ ಬರುತ್ತೇನೆ.' ನನಗೆ ಗೊತ್ತ[illegible] ಅವಳು ತನ್ನ ಸ್ನೇಹಿತರನ್ನು ಮಾತ್ರ, ಖಂಡಿ[illegible]

ಜೊತೆಗೆ ಕರೆದುಕೊಂಡು ಬರುವುದಿಲ್ಲ. ಮೆಗಿ ಮತ್ತು ನಾನು ಇದರ ಬಗ್ಗೆ ಮಾತಾಡುತ್ತಿದ್ದಾಗ ಮೆಗಿ ಕೇಳಿದ್ದಳು, ''ಅಮ್ಮ, 'ಡೀ'ಗೆ ಯಾವ ತ್ತಾದ್ರೂ ಸ್ನೇಹಿತರಿದ್ದರಾ?''

ಇದ್ದರು, ಕೆಲವರು. ಶಾಲೆಯ ನಂತರ ಅವಳ ಹಿಂದೆ ಮುಂದೆ ಅಡ್ಡಾಡಿಕೊಂಡು ಬಿದ್ದಿರುತ್ತಿದ್ದ ಗುಲಾಬಿ ಷರ್ಟಿನ ಖದೀಮ ಹುಡುಗರು, ಮತ್ತು ಯಾವತ್ತೂ ನಗದ ಪುಕ್ಕಲು ಹುಡುಗಿಯರು. ಅವಳ ಬಗ್ಗೆ ಅವರಿಗೆ ಎಂಥ ಭಕ್ತಿ ಅಂದ್ರೆ, ಅವಳ ಮುದ್ದಾದ ದೇಹಾಕಾರವನ್ನ, ಬಾಯಿಂದ ಉದು ರುವ ಆಣಿಮುತ್ತುಗಳನ್ನ, ಝಿಲ್ಲನೆ ನೋಯಿಸುವ ಹಾಸ್ಯಪ್ರಜ್ಞೆಯನ್ನ ಅವರೆಲ್ಲರೂ ಆರಾಧಿಸು ತ್ತಿದ್ದರು. ಅವರಿಗೆ ಅವಳು ಪಾಠವನ್ನೂ ಹೇಳಿ ಕೊಡುತ್ತಿದ್ದಳು.

ಜಿಮ್ಮಿಯೊಂದಿಗೆ ಅಡ್ಡಾಡುತ್ತಿದ್ದ ದಿನಗಳಲ್ಲಿ, ನಮ್ಮನ್ನು ಮಾತಾಡಿಸಲು ಅವಳಿಗೆ ಪುರಸೊತ್ತೇ ಇರುತ್ತಿರಲಿಲ್ಲ. ತಪ್ಪನ್ನು ಕೆದಕಿ, ಕೆದಕಿ ತೋರಿಸುವ ತನ್ನ ಅಮೋಘ ಶಕ್ತಿಯನ್ನ ಅವನ ಕಡೆಗೆ ತಿರುಗಿಸಿದಳು, ಆಸಾಮಿ, ಯಾವುದೋ ಒರಟು ಕುಟುಂಬದ ಕೊಂಟೆ ಹುಡುಗಿಯನ್ನ ಮದುವೆ ಮಾಡಿಕೊಳ್ಳಲು ನಿರ್ಧರಿಸಿ, ಹಾರಿಬಿಟ್ಟ! ಪಾಪ ಅವಳಿಗೆ ಚೇತರಿಸಿಕೊಳ್ಳಲು ಸಾಕಷ್ಟು ಸಮ ಯವೂ ಇರಲಿಲ್ಲ.

ಅವಳು ಬಂದಾಗ....

ಅಗೋ, ಬಂದೇಬಿಟ್ಟಳಲ್ಲ!

ಎಳೆಯುವ ಕಾಲನ್ನು ಹೊತ್ತುಕೊಂಡೇ ಮನೆಯ ಕಡೆಗೆ ಓಡುವ ಪ್ರಯತ್ನ ಮಾಡುತ್ತಿದ್ದ ಮೆಗಿಯನ್ನು, ನನ್ನ ಕೈಯಿಂದ ತಡೆದೆ. ನಿಂತಲ್ಲೆ ಕಾಲ್ಬೆರಳಿನಿಂದ ಮರಳನ್ನು ಕೆರೆಯುತ್ತಾ, ಗುಂಡಿ ತೋಡಲಾರಂಭಿಸಿದಳು.

ಅಬ್ಬ! ಬಿಸಿಲಿನ ಝಳಕ್ಕೆ ಅವರು ಸರಿಯಾಗಿ ಕಾಣಿಸುತ್ತಲೇ ಇಲ್ಲ. ಆದರೇನು, ಕಾರಿಂದ ಹೊರಚಾಚಿದ ಒಂದು ಕಾಲನ್ನು ನೋಡಿಯೇ ಅದು 'ಡೀ' ಎಂದು ಹೇಳಬಲ್ಲೆ. ಅವಳ ಪಾದ ಗಳು ಯಾವಾಗಲೂ ಚೆಂದವಾಗೇ ಇದ್ದವು, ದೇವರು ಪುರುಸೊತ್ತಾಗಿ ಕೂತು, ಗಮನವಿಟ್ಟು



ಆಫ್ರೋ-ಅಮೆರಿಕನ್ ಬರಹಗಾರ್ತಿ **ಅಲೀಸ್ ವಾಕರ್** ಹುಟ್ಟಿದ್ದು ಜಾರ್ಜಿಯದ ಇಯಟನ್ಟನ್‌ನಲ್ಲಿ, 1944ರಲ್ಲಿ. ವರ್ಣಭೇದ ನೀತಿಯ ವಿರುದ್ಧ ಸರ್ಕಾರ ಕಾನೂನುಬದ್ಧ ಆದೇಶಗಳನ್ನು ಹೊರಡಿಸಿದ್ದರೂ, 'ಹಿಂದುಳಿದ' ದಕ್ಷಿಣಕ್ಕೆ 'ಸುಧಾರಣೆ' ಬಂದಿದ್ದು ತಡವಾಗಿ. ಹಾಗಾಗಿ ವಾಕರ್‌ಳ ಐದು ಅಕ್ಕ ತಂಗಿಯರು ಮತ್ತು ಇಬ್ಬರು ಅಣ್ಣ ತಮ್ಮಂದಿರು ಬೆಳೆದದ್ದು 'ವರ್ಣಭೇದ ನೀತಿ' ಪ್ರಚಲಿತವಿದ್ದ ವಾತಾವರಣದಲ್ಲಿ.

ಕಪ್ಪು ಜನರ ಇತಿಹಾಸವನ್ನು ಬೋಧಿಸುವ ವೃತ್ತಿ ವಾಕರ್‌ದು. ಅದಕ್ಕಿಂತಲೂ ಹೆಚ್ಚಾಗಿ ಆಕೆ ನಾಗರಿಕ ಹಕ್ಕು ಚಳುವಳಿಯಲ್ಲಿ ವಹಿಸಿದ ಸಕ್ರಿಯ ಪಾತ್ರದಿಂದಾಗಿ ಪರಿಚಿತಳು. ವಿವಾದವನ್ನೆಬ್ಬಿಸಿದ ಕಾದಂಬರಿ 'ದಿ ಕಲರ್ ಪರ್ಪಲ್' ಪ್ರತಿಷ್ಠಿತ ಪುಲಿಟ್ಜರ್ ಪ್ರಶಸ್ತಿಯನ್ನು ಪಡೆದು, ಸ್ಪಿಲ್‌ಬರ್ಗ್ ನಿರ್ದೇಶನದ ಚಲನಚಿತ್ರವಾಗಿಯೂ ಮೆರೆಯಿತು. 'ಮೆರಿಡಿಯನ್' ಮತ್ತು 'ಇನ್ ಸರ್ಚ್ ಆಫ್ ಅವರ್ ಮದರ್ಸ್ ಗಾರ್ಡನ್ಸ್' ಇನ್ನಿತರ ಕೃತಿಗಳು.



ಅಲಿಸ್ ವಾಕರ್‌ರ ಈ ಕತೆಯನ್ನು ಕನ್ನಡಕ್ಕೆ ತಂದಿರುವ ಸುಕನ್ಯಾ, ಬೆಂಗಳೂರಿನಲ್ಲಿ ಇಂಗ್ಲಿಷ್ ಉಪನ್ಯಾಸಕಿಯಾಗಿದ್ದಾರೆ.

ರೂಪಿಸಿದಂತೆ. ಕಾರಿನ ಇನ್ನೊಂದು ಕಡೆಯಿಂದ ಮಟ್ಟಸವಾದ ವ್ಯಕ್ತಿಯೊಬ್ಬ ಇಳಿದ. ಕೂದಲು ತಲೆಯ ಮೇಲೆಲ್ಲಾ ಚೆಲ್ಲಾಡಿ, ಗದ್ದದಿಂದ ಒಂದಡಿ ಕೆಳಗೆ ಬಿದ್ದಿತ್ತು, ಹೇಸರಗತ್ತೆಯ ವಿಕೃತ ಬಾಲದಂತೆ. ಮೆಗಿ ಒಂದು ಸಲ 'ಉಮ್ ಮ್ ಮ್' ಎಂದು ಉಸಿರೆಳೆದುಕೊಂಡಿದ್ದು ಕೇಳಿಸ್ತು. ಕಾಲಡಿಯೇ ಬಾಲವನ್ನು ಸುಲಿದುಕೊಂಡು ಹರಿದು ಹೋಗುವ ಹಾವು ಶಬ್ದ ಮಾಡುತ್ತಿಲ್ಲ, 'ಉಮ್ ಮ್ ಮ್...' ಅಂತ ಹಾಗೆ.

ನಂತರ ಇಳಿದಳು 'ಡೀ'. ಈ ಸುಡುಗಾಲದಲ್ಲೂ ನೆಲದ ಮೇಲೆ ಹರಿದಾಡುವ ಉಡುಪು. ಆ ದಿರಿಸಿಗೆ ನನ್ನ ಕಣ್ಣು ನೋಯಿಸುವಷ್ಟು ರಾಚು. ಸೂರ್ಯನ ಬೆಳಕನ್ನು ಹಿಂದಕ್ಕೆ ಝಾಡಿಸುವಷ್ಟು ಕೆಂಪು, ಹಳದಿಗಳಿದ್ದವು ಅದರಲ್ಲಿ. ಆ ಝಳದ ಅಲೆಗಳು ನನ್ನ ಮುಖವನ್ನು ಬೆಚ್ಚಗಾಗಿಸಿದವು. ಕಿವಿಯ ಚಿನ್ನದ ಲೋಲಕ್ಕುಗಳೂ ಅಷ್ಟೆ, ಭುಜದ ತನಕ ಇಳಿಬಿದ್ದಿದ್ದವು. ಕೈ ಕಡಗಗಳು, ಅವಳು ಕೈಯೆತ್ತಿ ಕಂಕುಳಡಿಯ ನಿರಿಗೆಗಳನ್ನು ಸರಿಮಾಡಿದಾಗೆಲ್ಲ 'ಜಳಿರ್ ಜಳಿರ್' ಎನ್ನುತ್ತಿದ್ದವು. ಅಳ್ಳಕವಾದ, ಹರಿದಾಡುವ ದಿರಿಸು, ಅವಳು ಹತ್ತಿರ ಬಂದಂತೆ ಸಹ್ಯವಾಗಲಾರಂಭಿಸಿ ಇಷ್ಟವಾಯಿತು. ಮತ್ತೊಮ್ಮೆ ಮೆಗಿಯ 'ಉಮ್ ಮ್ ಮ್...' ಕಿವಿಗೆ ಬಿತ್ತು. 'ಡೀ'ಯ ಕೂದಲೆಡೆ ನೋಡಿದೆ. ರಾತ್ರಿಯಂತೆ ಕಪ್ಪಾದ, ಉಣ್ಣೆಯಂತ ಕೂದಲು, ಜಡೆಗಳಾಗಿ ಹೆಣೆಯಲ್ಪಟ್ಟು ಅವಳ ಕಿವಿಯ ಹಿಂದೆ ಅವಿತುಕೊಂಡಿದ್ದವು.

'ವಾ-ಸು-ಜೋ-ಟಿಯನ್-ಒ', ಸ್ವಕೀ
ಭಾಷೆಯಲ್ಲಿ ಎಳೆದೆಳೆದು ಹೇಳಿದಳು, ತೇಲಿಕೊಂ
ಬರುತ್ತಾ. ಹೊಕ್ಕುಳವರೆಗೆ ಇಳಿಬಿದ್ದ ಕೂದ
ಆ ಮಟ್ಟಸ ವ್ಯಕ್ತಿ, ಹಲ್ಲು ಕಿರಿಯುತ್ತಾ, 'ಅಸ
ಮಾಲೀಕುಂ' ಎಂದ.

''ನನ್ನ ತಾಯಿ ಮತ್ತು ತಂಗಿ'', ಪರಿಚಯ
ದಳು 'ಡೀ'. ಮೆಗಿಯನ್ನು ಹಾರ್ದಿಕವ
ಅಪ್ಪಿಕೊಳ್ಳಲು ಆತ ಮುಂದೆ ಬಂದಾಗ, ಮೆ
ತಡವರಿಸಿ, ನನ್ನ ಕುರ್ಚಿಯ ಹಿಂಭಾಗಕ್ಕೆ ಮು
ಸಿದಳು. ನಡುಗುತ್ತಿದ್ದಾಳೇನೋ ಎಂದೆನಿಸಿ, ಕ
ನೋಡಿದರೆ, ಬೆವರು ಗಲ್ಲದಿಂದ ಜಾರುತ್ತಿತ್ತು.

''ಏಳಬೇಡ...'', 'ಡೀ' ಹೇಳಿದಳು. ಭ
ವಾದ ಮೈ ಇರುವುದರಿಂದ ಏಳಲು ಕಷ್ಟ
ಬೇಕು. ಒಂದೆರಡು ಬಾರಿ ಕಷ್ಟಪಡದೇ, ಒಂ
ಸಲಕ್ಕೆ ಏಳುವುದು ಸಾಧ್ಯವೇ ಇಲ್ಲ ನನಗೆ.
ತಿರುಗಿಸಿ ನಡೆಯುತ್ತಾ, ಬಿಳಿಯ ಹಿಮ್ಮಡಿಗ
ತೋರಿಸುತ್ತಾ, ಕಾರಿನ ಕಡೆಗೆ ನಡೆದಳು 'ಡಿ
ತಟಕ್ಕನೆ, ಕಾರಿನಿಂದ ಪೋಲರಾಯ್ಡನ್ನು ತೆಗೆ
ಮುಂದೆ ಬಾಗಿ, ಕೂತಿದ್ದ ನನ್ನ ಮತ್ತು ನನ್ನ ಹಿ
ಅವಿತು ನಿಂತಿದ್ದ ಮೆಗಿಯ ಫೋಟೋಗ
ಒಂದರ ಮೇಲೊಂದರಂತೆ ಟಕಟಕನೆ
ದಳು. ಅಂಗಳದ ಅಂಚಿನಲ್ಲಿ ಮೇಯುತ್ತ
ತ್ತಿದ್ದ ಹಸುವಿನೊಂದಿಗೆ, ಮನೆಯೊಂದಿಗೆ,
ಯೊಂದಿಗೆ, ನನ್ನ ಚಿತ್ರಗಳನ್ನು ತೆಗೆದದ್ದೂ
ದದ್ದೇ. ಪೋಲರಾಯ್ಡನ್ನು ಮತ್ತೆ ಕಾರಿನಲ್ಲಿ ಎ
ಬಂದು ನನ್ನ ಹಣೆಗೆ ಮುತ್ತಿಟ್ಟಳು.





'ಅಸಲಾಮಲೀಕುಂ' ಮೆಗಿಯ ಕೈ ಹಿಡಿದು ಸುಕುತ್ತಲೇ ಇದ್ದ. ಬಿಸಿಲಿನ ಝಳದಲ್ಲೂ ಮೆಗಿಯ ಗಳು ತಣ್ಣಗೆ ಕೊರೆಯುತ್ತಿರಬಹುದು, ಮೀನಿ ಂತೆ ಬಲವೇ ಇಲ್ಲದಿರಬಹುದು. ಕೈಗಳನ್ನು ಂದಕ್ಕೆ ಎಳೆದುಕೊಳ್ಳಲೂ ಪ್ರಯತ್ನಿಸುತ್ತಲೇ ದ್ದಾಳೆ ಮೆಗಿ. ಅಥವಾ ಅವನಿಗೆ ಕೈ ಕುಲುಕಲು ರುವುದೇ ಇಲ್ಲವೇನೋ. ಅಂತೂ ಕೊನೆಗೆ ಣೀತು ಕೈ ಚೆಲ್ಲಿದ.

''ಮತ್ತೇನು ವಿಶೇಷ 'ಡೀ'?'', ಕೇಳಿದೆ.

''ಅಲ್ಲಮ್ಮ, ನಾನೀಗ 'ಡೀ' ಅಲ್ಲ, ಂಗೆರೊ ಲೀವಾನಿಕ ಕೆಮಂಜೊ''.

''ಯಾಕೆ?''

''ಡೀ ಸತ್ತು ಹೋದಳು'', ವಾಂಗೆರೊ ೇಳಿದಳು, ''ನನ್ನನ್ನು ತುಳಿಯುವವರನ್ನು ನೆನಪಿ ುವ ಹೆಸರನ್ನು ಹೊತ್ತುಕೊಂಡಿರುವುದು ನನಗೆ ಾಧ್ಯವಾಗಲಿಲ್ಲ.''

''ನಿನ್ನ ದೊಡ್ಡಮ್ಮ ಡೈಸಿಯ ಹೆಸರನ್ನು ತಾನೇ ಾವು ನಿನಗಿಟ್ಟಿದ್ದು?'' ಡೈಸಿ ನನ್ನ ಅಕ್ಕ. ಅವಳೇ ಡೀ'ಗೆ ಹೆಸರಿಟ್ಟಿದ್ದು. 'ಡೀ' ಹುಟ್ಟಿದ ಮೇಲೆ ನನ್ನ ಅಕ್ಕನ್ನ ಹಿರಿಯ ಡೀ' ಎಂದು ಕರೆಯಲಾರಂಭಿಸಿದ್ದೆವು.

''ಅವಳಿಗೆ ಯಾರು ಹೆಸರಿಟ್ಟಿದ್ದು?'', ಾಂಗೆರೊ ಕೇಳಿದಳು.

''ಅಜ್ಜಿ 'ಡೀ' ಇರಬಹುದು.''

''ಆ ಅಜ್ಜಿಗೆ?''

''ಅವಳ ಅಮ್ಮ.'' ವಾಂಗೆರೊ ಸಹನೆ ಕಳೆದು ೂಳ್ಳುತ್ತಿರುವಂತೆ ಕಂಡಳು. ''ಅಷ್ಟು ಹಿಂದಕ್ಕೆ ಮಾತ್ರ ಎಳೆಯಬಲ್ಲೆ'', ಅದಕ್ಕೂ ಹಿಂದೆ, ಸಿವಿಲ್ ಯುದ್ಧಕ್ಕಿಂತ ಹಿಂದಕ್ಕೆ ನೆನಪನ್ನು ಎಳೆಯಬಲ್ಲವ ಾಗಿದ್ದರೂ ಸಹ ಸುಳ್ಳು ಹೇಳಿದೆ.

''ಹ್ಞಾಂ, ನೋಡಿ, ಅಷ್ಟೇ ಆಗೋದು'', ಸಲಾಮಾಲೀಕುಂ' ಅಂದ.

''ಉಂ ಮ್ ಮ್ ಮ್...'', ಮೆಗಿಯ ಳೆತ ಕೇಳಿಸಿತು.

''ಇನ್ನೆಷ್ಟಾಗೋದು?'', ನಾನು ಥಟ್ಟನೆ ಅಂದೆ, ''ಡೈಸಿ ಹುಟ್ಟುವ ಮುಂಚೆ ನಾನು ಇರಲಿಲ್ಲ. ಅದಕ್ಕಿಂತ ಹಿಂದಕ್ಕೆ ಎಳೆಯುವ ಗೊಡವೆ ನನಗ್ಯಾಕೆ?''

ಅವನು ಹಲ್ಲು ಕಿರಿಯುತ್ತಾ ನಿಂತು, ನಾನ್ಯಾವುದೋ ಹೊಸ ಮಾಡೆಲ್ ಕಾರೆಂಬಂತೆ ಪರೀಕ್ಷಿಸುವ ದೃಷ್ಟಿಯಿಂದ ನೋಡುತ್ತಿದ್ದ. ಆಗಾಗ್ಗೆ ವಾಂಗೆರೊ ಮತ್ತು ಅವನು ದೃಷ್ಟಿ ಬದಲಾಯಿಸಿಕೊಳ್ಳುತ್ತಿದ್ದರು.

''ನಿನ್ನ ಹೆಸರನ್ನ ಹೇಗೆ ಉಚ್ಛರಿಸೋದು?'' 'ಡೀ'ಯನ್ನ ಕೇಳಿದೆ.

''ನಿಂಗೆ ಬೇಡಾಂದ್ರೆ ಕರೀಬೇಡ'', ವಾಂಗೆರೊ ಹೇಳಿದಳು.

''ಯಾಕೆ ಬೇಡ, ಹಾಗೇ ಕರೀಬೇಕು ಅನ್ನೋದಾದ್ರೆ ಕರೀತೀವಿ''.

''ನಂಗೊತ್ತು, ಮೊದಮೊದಲು ಅದು ವಿಚಿತ್ರವಾಗಿ ಕೇಳಿಸಬಹುದು.''

''ಅಭ್ಯಾಸ ಆಗಬಹುದು, ಇನ್ನೊಂದು ಸಲ ಬಿಡಿಸಿ ಹೇಳು ನೋಡೋಣ''

ಏನೋ, ಅಂತೂ ಆ ಹೆಸರನ್ನು ಅತ್ತ ತಳ್ಳಿದೆವು. 'ಅಸಲಾಮಾಲೀಕುಂ' ಹೆಸರು ಎರಡು ಪಟ್ಟು ಉದ್ದ ಮತ್ತು ಮೂರು ಪಟ್ಟು ಕಷ್ಟದ್ದಾಗಿತ್ತು. ಎರಡು, ಮೂರು ಸಲ ನಾನು ತಡಬಡಾಯಿಸಿದ ಮೇಲೆ, ಬರೀ 'ಹಕೀಂ-ಎ-ಬಾರ್ಬರ್' ಅಂತ ಕರೀರಿ ಅಂದ. ಅವನು ಹಜಾಮನಾ ಅಂತ ಕೇಳಬೇಕೆಂದುಕೊಂಡೆ. ಇರಬಹುದು ಅಂತನ್ನಿಸಲಿಲ್ಲ, ಹಾಗಾಗಿ ಕೇಳಲಿಲ್ಲ.

''ಅಲ್ಲಿ, ಕೆಳಗೆ, ದನದ ಮಾಂಸ ಮಾರುತ್ತಾರಲ್ಲ, ಅವರಿಗೆ ಸೇರಿದವನಿರಬೇಕು ನೀನು'' ಅಂದೆ. ಅವರೂ ಸಹ, ಕಂಡ ತಕ್ಷಣ, 'ಅಸಲಾಮಾಲೀಕುಂ' ಅಂತ ಹೇಳುವುದನ್ನ ಕೇಳಿದ್ದೆ, ಆದ್ರೆ ಅವರು ಕೈ ಕುಲುಕುವುದನ್ನ ನೋಡಿರಲಿಲ್ಲ. ಯಾವತ್ತೂ ಕೆಲಸದಲ್ಲಿ ನಿರತರಾಗಿರುವ ಜನ ಅವರು. ಮಂದೆಗಳನ್ನು ಮೇಯಿಸುತ್ತಲೋ, ಬೇಲಿಯನ್ನು ಸರಿ ಮಾಡುತ್ತಲೋ, ಭಾವಣಿ

ಯನ್ನು ಹೊದಸುತ್ತಲೋ, ಹುಲ್ಲನ್ನು ಒಟ್ಟು ಗೂಡಿಸುತ್ತಲೋ, ಏನೋ ಮಾಡುತ್ತಿರುತ್ತಿದ್ದರು. ಅವರ ಕೆಲವು ಮಂದೆಗಳಿಗೆ, ಆ ಬಿಳಿಜನ ವಿಷ ಹಾಕಿದಾಗ, ಇಡೀ ರಾತ್ರಿ ಕೈಯಲ್ಲಿ ಬಂದೂಕಿಟ್ಟುಕೊಂಡು ಕಾದಿದ್ದಂತವರು. ಅದನ್ನು ನೋಡಲೆಂದೇ ಒಂದೂವರೆ ಮೈಲಿ ನಡೆದು ಹೋಗಿದ್ದೆ ನಾನು.

ಹಕೀಂ-ಎ-ಬಾರ್ಬರ್ ಹೇಳಿದ, ''ಅವರ ಕೆಲವು ಸಿದ್ಧಾಂತಗಳನ್ನು ಒಪ್ಪುತ್ತೇನೆ, ಆದ್ರೆ ಬೇಸಾಯ, ಹಸು-ಕುರಿ ಸಾಕೋದು ಎಲ್ಲ ನನಗೆ ಒಗ್ಗೋ ಅಂಥದಲ್ಲ''. (ಅವನು ಮತ್ತು 'ಡೀ' (ವಾಂಗೆರೊ) ಮದುವೆ ಮಾಡ್ಕೊಂಡಿದ್ದಾರ ಅಂತ ನಾನೂ ಕೇಳಲಿಲ್ಲ, ಅವರೂ ಹೇಳಲಿಲ್ಲ).

ಊಟ ಮಾಡುವಾಗ ಅವನು, ಮೀನು ತಿನ್ನುವುದಿಲ್ಲ ಎಂದ, ಗಲೀಜು ಹಂದಿಮಾಂಸವನ್ನು ತಾನು ಮುಟ್ಟೆನೆಂದ. ವಾಂಗೆರೊ ಮಾತ್ರ, ಮಾಂಸ, ರೊಟ್ಟಿ, ಸೊಪ್ಪು ಎಲ್ಲವನ್ನು ತಿಂದೇ ತಿಂದಳು. ಗೆಣಸಿನ ಬಗ್ಗೆ ಅದೇನೋ ಭಾಷಣ ಬಿಗಿದಳು. ಅವರಪ್ಪ ಕೈಯಾರೆ ತಯಾರಿಸಿದ್ದ ಬೆಂಚುಗಳನ್ನು ನೋಡಿ ಖುಷಿ ಪಟ್ಟಳು.

''ಅಬ್ಬ!'', ಉದ್ಗರಿಸಿದಳು 'ಡೀ'. ಹಕೀಂ-ಎ-ಬಾರ್ಬರ್ ಕಡೆ ತಿರುಗಿ, ''ಈ ಬೆಂಚುಗಳು ಇಷ್ಟು ಚೆಂದವಾಗಿವೆ ಅಂತ ಗೊತ್ತೇ ಇರಲಿಲ್ಲ. ಇದರ ತಳಭಾಗ ಸಹ ಎಷ್ಟು ಚೆಂದಾಗಿದೆ ನೋಡು!'', ಬೆಂಚಿನ ತಳದಲ್ಲಿ ಕೈಯಾಡಿಸುತ್ತ ಹೇಳಿದಳು. ನಂತರ ಒಂದು ನಿಟ್ಟುಸಿರು ಬಿಟ್ಟು, ಅಜ್ಜಿ 'ಡೀ'ಯ ಬೆಣ್ಣೆಪಾತ್ರೆಯನ್ನು ಕೈಗೆತ್ತಿಕೊಂಡಳು. ''ಅಬ್ಬ! ಸಿಕ್ಕಿತು, ನಂಗೊತ್ತಿತ್ತು, ನಂಗೆ ಬೇಕಾಗಿದ್ದು ಸಿಗುತ್ತೆ ಅಂತ'', ನೆಗೆದು, ಹಾಲಿನ ಹರಿವಾಣವನ್ನಿಟ್ಟಿದ್ದ ಮೂಲೆಗೆ ಹೋಗಿ, ಅದರಲ್ಲಿದ್ದ ಹುಳಿಗಟ್ಟುತ್ತಿದ್ದ ಮಜ್ಜಿಗೆಯನ್ನು, ಹರಿವಾಣವನ್ನು ಮತ್ತೆ ಮತ್ತೆ ನೋಡಿದಳು.

''ನಾನು ಹುಡುಕುತ್ತಿದ್ದದ್ದು ಈ ಹರಿವಾಣದ ಮುಚ್ಚಲನ್ನ, ಹಿಂದೆ ನಮ್ಮನೆಯಲ್ಲಿ ಇತ್ತಲ್ಲ, ' ಮರದಿಂದ ತಾನೆ, ಅಂಕಲ್ ಬಡ್ಡಿ ಈ ಮುಚ್ಚಲ ಮಾಡಿದ್ದು?''

ಹೌದೆಂದೆ.

''ಹ್ಹಾಂ!'' ಭಾರೀ ಖುಷಿಯಿಂದ ಹೇ ದಳು, ''ಮತ್ತೆ ಆ ಕಡೆಗೋಲು ಕೂಡ ಬೇ ನನಗೆ''.

''ಅದನ್ನೂ ಅಂಕಲ್ ಬಡ್ಡಿನೇನಾ ಮಾಡಿದ್ದು?'' ಬಾರ್ಬರ್ ಕೇಳಿದ.

'ಡೀ' (ವಾಂಗೆರೊ) ನನ್ನ ಕಡೆಗೆ ನೋಡಿದಳ

''ಡೀ ದೊಡ್ಡಮ್ಮನ ಮೊದಲನೆ ಗಂ ಅದನ್ನ ಮಾಡಿದ್ದು'', ಕೇಳಿಸಿತೋ ಇಲ್ಲವೋ ಎನ್ನುವಷ್ಟು ಮೆತ್ತಗೆ ಹೇಳಿದಳು ಮೆಗಿ, ''ಅವ ಹೆಸರು ಹೆನ್ರಿ, ಕರೆಯುತ್ತಿದ್ದದ್ದು ಸ್ಟಾಷ್ ಅಂತ''.

''ಮೆಗಿ ತಲೆ ಒಳ್ಳೆ ಆನೆ ತಲೆ ತರ'', ನಗು ಹೇಳಿದಳು ವಾಂಗೆರೊ. ಈ ಮುಚ್ಚಲನ್ನ ನ ಮೇಜಿನ ಮಧ್ಯಕ್ಕೆ ಹಾಕಲು ಉಪಯೋಗಿ ಬಹುದು'', ಮುಚ್ಚಲದ ಮೇಲೆ ಒಂದು ತ ಯನ್ನು ಜಾರಿಸುತ್ತ ಹೇಳಿದಳು. ''ಮತ್ತೆ ಕಡೆಗೋಲಿನಿಂದ ಏನಾದರೂ ಕಲಾತ್ಮಕವಾ ದ್ದನ್ನು ಮಾಡಲು ಸಾಧ್ಯವಾ ಅಂತ ನೋ ಬಹುದು.''

ಕಡೆಗೋಲನ್ನ ಸುತ್ತಿಟ್ಟಾಗ ಅದರ ಹಿ ಹೊರಗ ಚಾಚಿದ್ದು ಕಂಡುಬಂತು. ಒಂದು ಕ್ಷ ಅದನ್ನು ಅಂಗೈಯೊಳಗೆ ಎಳೆದುಕೊಂಡೆ. ಬೆ ಮಾಡಲು ಕಡೆಗೋಲನ್ನು ಅತ್ತಿಂದಿತ್ತ ಆಡಿ ವಾಗ ಕೈಗಳನ್ನೂರುವ ಭಾಗದಲ್ಲಿ ಒಂದು ಗು ಬಿದ್ದಿತ್ತು. ಅದು ಕಣ್ಣಿಗೆ ಕಾಣಸಬೇಕಾಗಿರಲಿ ಕೈಗೆ ಸಿಗುತ್ತಿತ್ತು. ಆ ತರದ ಸಣ್ಣಪುಟ್ಟ ಗುಳಿಗ ಎಷ್ಟೋ ಇದ್ದವು. ಚೆಂದದ ತಿಳಿ ಹಳದಿ ಬಣ್ಣ ಮರ ಅದು. ಹಿರಿಯ 'ಡೀ' ಮತ್ತು ಸ್ಟಾ ಬದುಕಿದ್ದ ಮನೆಯ ಅಂಗಳದಲ್ಲಿ ಬೆಳೆದಿ ಮರದಿಂದ ಮಾಡಿದ ಕಡೆಗೋಲು.

ಊಟವಾದ ನಂತರ 'ಡೀ' (ವಾಂಗೆರೊ

ಮಂಚದ ಬುಡದಲ್ಲಿದ್ದ ಟ್ರಂಕನ್ನು ಹೊರ
ಮ ತಪಾಸಣೆ ನಡೆಸಲಾರಂಭಿಸಿದ್ದಳು. ಪಾತ್ರೆ
ಳೆಯುವ ನೆಪದಲ್ಲಿ ಮೆಗಿ ಅಡಿಗೆ ಮನೆಯಲ್ಲೇ
ದ್ದು ಕಂಡೆ. ಎರಡು ಕೌದಿಗಳನ್ನು ಹಿಡಿದು
ಂಗೆರೊ, ರೂಮಿನಾಚೆ ಓಡಿ ಬಂದಳು.
ವಿಗೋಸ್ಕರ ಅಜ್ಜಿ 'ಡೀ' ಒಟ್ಟು ಹಾಕಿದ ಬಟ್ಟೆ
ಡುಗಳನ್ನ, ನಾನು ಮತ್ತು ಹಿರಿಯ 'ಡೀ',
ಂದಿನ ಹಜಾರದಲ್ಲಿ ಕೂತು, ಒಂದು
ಕಟ್ಟಿಗೆ ಹಾಕಿ, ಹೊಲೆದಿದ್ದವು. ಎರಡೂ
ವಿಯಲ್ಲಿ, ಸುಮಾರು ಐವತ್ತು ವರ್ಷಕ್ಕೂ
ಂಚೆನಿಂದ ಅಜ್ಜಿ 'ಡೀ' ತೊಡುತ್ತಿದ್ದ ಉಡುಪು
ಚಿಂದಿಗಳಿದ್ದವು. ಅಜ್ಜ ಜಾರೆಲ್ಲನ ಬಣ್ಣ
ಾದ ಚಿತ್ತಾರವಿದ್ದ ಉಣ್ಣೆ ಷರ್ಟುಗಳ ಹರುಕು
ದ್ದವು. ಮತ್ತೆ, ಮುತ್ತಜ್ಜ ಎಜ್ರ, ಸಿವಿಲ್ ಯುದ್ಧ
ಹಾಕಿಕೊಂಡಿದ್ದ ಯೂನಿ ಫಾರ್ಮಿನ ಮಾಸಲು
ಿ ಬಣ್ಣದ ಪುಟ್ಟ ತುಣುಕೂ ಅದರಲ್ಲಿ ಸೇರಿತ್ತು.

''ಅಮ್ಮ'', ಹಕ್ಕಿಯಂತೆ ಮುದ್ದಾಗಿ ಕೇಳಿದಳು
ಂಗೆರೊ, ''ನಾನು ಈ ಹಳೆಯ ಕೌದಿಗಳನ್ನು
ದುಕೊಂಡು ಹೋಗಲಾ?''

ಅಡಿಗೆಮನೆಯಲ್ಲಿ ಏನೋ ಧಡಮ್ಮನೆ
ಬ್ದಂತಾಯಿತು. ಮರುಗಳಿಗೆಯಲ್ಲೇ ಬಾಗಿಲು
ರ್ನೆ ಮುಚ್ಚಲ್ಪಟ್ಟಿತು.

''ಬೇರೆ ಕೌದಿಗಳು ಇವೆಯಲ್ಲ, ಅವುಗಳಲ್ಲಿ
ದೋ ಎರಡೋ ತೆಗೆದುಕೋ. ಈ ಹಳೆ
ಯ ಕೌದಿಗಳನ್ನು ನಾನು ಮತ್ತು ಹಿರಿಯ
', ಅಜ್ಜಿ ಸಾಯೋಕೆ ಮುಂಚೆ ಕೊಟ್ಟ ಹರಕು
ದಿಗಳಿಂದ ಮಾಡಿದ್ದು.''

'ಬೇಡ, ನನಗೆ ಬೇರೆಯವು ಬೇಡವೇ
ಡ. ಅವುಗಳ ಅಂಚನ್ನ ಮಷೀನಿನಲ್ಲಿ ಹೊಲೆದಿ
ರೆ'', ವಾಂಗೆರೊ ತಲೆಯಲ್ಲಾಡಿಸಿದಳು.

''ಹಾಗಿದ್ರೆ, ಅವು ಇನ್ನೂ ಹೆಚ್ಚು ಬಾಳಿಕೆ
ಂತ್ತವಲ್ಲ?''

''ಅದಲ್ಲ ಮುಖ್ಯ, ಇವುಗಳಲ್ಲಿರೋದು ಅಜ್ಜಿ
ಡುತ್ತಿದ್ದ ಬಟ್ಟೆಗಳ ಚೂರುಗಳು. ಅದೂ
ಅಲ್ಲದೆ ಇದೆಲ್ಲವನ್ನ ಅವಳು ಸ್ವತಃ ತನ್ನ ಕೈಯಲ್ಲಿ
ಹೊಲೆದಿದ್ದು! ಎಂಥ ಅದ್ಭುತ ಅಲ್ವಾ?'',
ಕೌದಿಗಳನ್ನು ಒತ್ತಿ ಹಿಡಿದು, ನಯವಾಗಿ
ಸವರುತ್ತಾ ಹೇಳಿದಳು 'ಡೀ'.

''ಅದರಲ್ಲಿರೋ ಕೆಲವು ಚೂರುಗಳು, ಆ
ತಿಳಿನೇರಿಳೆ ಬಣ್ಣದ್ದಿದೆಯಲ್ಲ, ಅಂಥವು, ಅಜ್ಜಿಗೆ
ಅವರ ಅಮ್ಮ ಕೊಟ್ಟ ಹಳೆಯ ಬಟ್ಟೆಗಳಂತೆ'',
ಕೌದಿಗಳನ್ನು ಮುಟ್ಟಿ ನೋಡಲು ಬಾಗುತ್ತಾ
ಹೇಳಿದೆ. ಉಹೂಂ, 'ಡೀ', ನನಗೆ ಮುಟ್ಟಲೂ
ಬಿಡದಂತೆ ಸ್ವಲ್ಪವೇ ಹಿಂದೆ ಸರಿದಳು.
ಕೌದಿಗಳಾಗಲೇ ಅವಳ ಸ್ವತ್ತಾಗಿ ಹೋಗಿದ್ದವು.

''ಎಂಥ ಚೆಂದ ಇವೆ ಅಲ್ವಾ ಅಮ್ಮ!'',
ಎದೆಗೊತ್ತಿ ಹಿಡಿದು ಮತ್ತೆ ಉದ್ಗರಿಸಿದಳು.

''ನಿಜ ಹೇಳಲಾ? ಮೆಗಿಯ ಮದುವೆಗೆ
ಅವುಗಳನ್ನ ಉಡುಗೊರೆಯಾಗಿ ಕೊಡುತ್ತೇನೆ
ಅಂತ ಹೇಳಿದ್ದೇನೆ''. ಗಾಯಗೊಂಡ ದುಂಬಿ
ಯಂತೆ ಉಸಿರು ಬಿಟ್ಟಳು 'ಡೀ'.

''ಮೆಗಿಗೆ ಇದರ ಬೆಲೆ ಗೊತ್ತಾಗೋಕೆ ಹೇಗೆ
ಸಾಧ್ಯ? ಇಂಥವನ್ನ ದಿನಾ ಉಪಯೋಗಿಸಲು
ಹಾಕೋ ಅಂಥ ಗಮಾರ್ ಅವಳು.''

''ಇರಬಹುದು. ಎಷ್ಟೊಂದು ದಿನದಿಂದ,
ಯಾರೂ ಉಪಯೋಗಿಸದೆ, ಮೂಲೆಯಲ್ಲಿ
ಬಿದ್ದಿವೆ ಅವು. ದಿನಾ ಉಪಯೋಗಿಸಲಿ ಅಂತಲೇ
ಅವಳಿಗೆ ಕೊಡುತ್ತಿರುವುದು.'' 'ಡೀ' ಕಾಲೇಜಿಗೆ
ಹೋಗಲು ಹೊರಡುವ ಮುಂಚೆ ಇದೇ ಕೌದಿ
ಗಳನ್ನು ಅವಳಿಗೆ ಕೊಟ್ಟಾಗ, ಹಳೆಯ ಕಾಲದವು
ಎಂದು ತಿರಸ್ಕರಿಸಿ ಹೋದದ್ದನ್ನು ಮತ್ತೆ ಕೆದಕು
ವುದು ನನಗೆ ಬೇಡವಾಗಿತ್ತು.

''ಆದ್ರೆ, ಅವು ಬೆಲೆ ಕಟ್ಟಲಾಗದಂತವು!'',
'ಡೀ' ಕೋಪದಿಂದ ಉರಿಯುತ್ತಿದ್ದಳು. ಕೋಪ
ಅವಳ ಮೂಗಿನ ಮೇಲೇ ಇರುತ್ತೆ ಯಾವಾಗಲೂ.
''ಮೆಗಿ ಅವನ್ನ ಹಾಸಿಗೆ ಮೇಲೆ ಹಾಕಿ, ಐದೇ
ವರ್ಷಗಳಲ್ಲಿ ಚಿಂದಿ ಮಾಡಿ ಹಾಕ್ತಾಳೆ, ಐದು
ವರ್ಷಗಳೂ ಬೇಡ.''

"ಆದ್ರೇನಂತೆ. ಇನ್ನೊಂದಷ್ಟು ಹೊಲ್ಕೊತಾಳೆ. ಅವಳಿಗೆ ಹೇಗೂ ಕೌದಿ ಹೊಲೆಯೊಕೆ ಗೊತ್ತು."

'ಡೀ' (ವಾಂಗೆರೊ) ನನ್ನನ್ನು ಸುಟ್ಟುಬಿಡುವಳಂತೆ ನೋಡಿದಳು. "ನಿನಗೆ ಅರ್ಥವಾಗೋಲ್ಲ. ಈ ಕೌದಿಗಳು ಏನು ಅಂತ ನಿನಗ್ಗೊತ್ತಿಲ್ಲ."

"ಸರಿ, ನೀನೇನು ಮಾಡುತ್ತೀಯ ಅವುಗಳನ್ನಿಟ್ಟುಕೊಂಡು?", ಸೋತು ಕೇಳಿದೆ.

"ನೇತು ಹಾಕ್ತೀನಿ" ಅಂದಳು. ಅದು ಬಿಟ್ಟು ಇನ್ನೇನೂ ಮಾಡಲು ಸಾಧ್ಯವಿಲ್ಲವೇನೋ ಅನ್ನುವಂತೆ.

ಅಷ್ಟೊತ್ತಿಗೆ ಮೆಗಿ ಬಂದು ಬಾಗಿಲಲ್ಲಿ ನಿಂತಿದ್ದಳು. ಒಂದರ ಮೇಲೊಂದು ಕಾಲನ್ನು ಹೊಸೆಯುತ್ತಿದ್ದ ಶಬ್ದ, ಹೆಚ್ಚುಕಡಿಮೆ ಕೇಳಿಸುವಂತೆಯೇ ಇತ್ತು.

"ಅವಳಿಗೆ ಬೇಕಿದ್ರೆ ತಗೊಂಡು ಹೋಗಲಿ ಬಿಡಮ್ಮ" ಎಂದಳು. ಯಾವುದನ್ನೂ ಗೆಲ್ಲುವ, ತನಗಾಗಿ ಕಾದಿರಿಸಿಕೊಳ್ಳುವ ಅಭ್ಯಾಸವೇ ಇಲ್ಲದವಳಂತೆ. "ಕೌದಿಗಳಿಲ್ಲದಿದ್ದರೂ ಅಜ್ಜಿ ನೆನಪಲ್ಲಿ ಇರ್ತಾಳೆ."

ಅವಳನ್ನೇ ನೆಟ್ಟದೃಷ್ಟಿಯಿಂದ ನೋಡಿದೆ. ಕೆಳತುಟಿಯಲ್ಲಿ ಅಂಟಿಕೊಂಡಿದ್ದ ನಸ್ಯದ ಪುಡಿ, ಅವಳ ಮೋರೆಗೆ ಒಂದು ರೀತಿಯ ದೈನೇಸಿತನವನ್ನ ಕೊಟ್ಟಿತ್ತು. ಕಲೆಗಳಿಂದ ತುಂಬಿದ್ದ ತನ್ನ ಕೈಯನ್ನ, ಲಂಗದ ನೆರಿಗೆಗಳ ಮರೆಯಲ್ಲಿ ಅಡಗಿಸಿಕೊಳ್ಳುತ್ತ ಅಲ್ಲೆ ನಿಂತಳು. ತನ್ನ ಅಕ್ಕನನ್ನು ನೋಡಿದ ರೀತಿಯಲ್ಲಿ ಭಯವಿತ್ತು, ಕೋಪವಿರಲಿಲ್ಲ. 'ಇದು ತನಗೆ ಬಂದ ಪಾಲು, ದೇವರೇ ನಿರ್ಧರಿಸಿದ್ದು' ಎಂಬಂತೆ.

ಅವಳನ್ನು ನೋಡಿದಾಗ, ತಲೆಯಿಂದ ಪಾದದವರೆಗೆ ಛಳುಕೊಂದು ಹೊಡೆದಂತಾಯಿತು. ಚರ್ಚಿನಲ್ಲಿ ಪ್ರಾರ್ಥಿಸುತ್ತಿದ್ದಾಗ, ಹಠಾತ್ತನೆ ಭಗವಂತನ ಚೈತನ್ಯ ನನ್ನೊಳಗೆ ಹೊಕ್ಕು ಆನಂದದಿಂದ ಕಿರುಚುವಂತೆ ಉನ್ಮತ್ತಳಾಗಿ ಮಾಡುತ್ತಲ್ಲ, ಹಾಗೆ. ಯಾವತ್ತೂ ಮಾಡಿರದಿದ್ದನ್ನ ಮಾಡಿಯೇ ಬಿಟ್ಟೆ. ಮೆಗಿಯನ್ನು ಗಟ್ಟಿಯಾಗಿ ತಬ್ಬಿಕೊಂಡು ರೂಮಿನೊಳಗೆ ಎಳೆದುಕೊಂಡು ಹೋಗಿ, ಮಿಸ್ ವಾಂಗೆರೊ ಕೈಯಿಂದ ಕೌದಿಗಳನ್ನು ಕಿತ್ತು, ಮೆಗಿಯ ಮಡಿಲೊಳಗೆ ತುರು[illegible] ಬಿಟ್ಟ ಬಾಯಿ ಬಿಟ್ಟಂತೆಯೇ ಕೂತಿದ್ದಳು ಮೆಗಿ.

"ಉಳಿದವುಗಳಲ್ಲಿ ಒಂದೋ ಎರಡ[illegible] ಬೇಕಿದ್ರೆ ತಗೋ", 'ಡೀ'ಗೆ ಹೇಳಿದೆ.

ಮಾತೇ ಆಡದೆ ಹೊರಟು ಹೋ[illegible] 'ಡೀ', ಹಕೀಂ-ಎ-ಬಾರ್ಬರ್ ಇದ್ದ ಕಡೆಗೆ.

"ನಿಮಗ್ಯಾರಿಗೂ ಅರ್ಥವಾಗೊಲ್ಲ", [illegible]ರನ್ನು ಕಳುಹಿಸಲು ಕಾರಿನ ಹತ್ತಿರ ಬಂದ ನ[illegible]ಮತ್ತು ಮೆಗಿಗೆ ಹೇಳಿದಳು.

"ಏನದು? ನಮಗೆ ಅರ್ಥವಾಗ[illegible]ವುದು?" ಕೇಳಿದೆ.

"ನಿಮ್ಮ ಪರಂಪರೆ, ಅದರ ಬೆಲೆ."

ಮೆಗಿಯ ಕಡೆಗೆ ತಿರುಗಿ, ಮು[illegible] ಹೇಳಿದಳು, "ನಿನ್ನನ್ನು ಬದಲಾಯಿಸಿಕೊಳ್ಳಬೆ[illegible] ಮೆಗಿ. ಇದು ಹೊಸ ಕಾಲ. ಆದ್ರೆ, ನೀನು, [illegible] ಬದುಕುತ್ತಿರುವ ರೀತಿಯನ್ನ ನೋಡಿದ್ರೆ, [illegible] ನಿಮಗೆ ಅರ್ಥವಾಗಲು ಸಾಧ್ಯವೇ ಇಲ್ಲವೇನ[illegible] ಅಂತನ್ನಿಸುತ್ತೆ."

ಅವಳ ಮೂಗಿನ ತುದಿಯ ಹೊ[illegible] ಉಳಿದೆಲ್ಲ ಭಾಗವನ್ನು, ಗಲ್ಲವನ್ನು ಮುಚ್ಚುವ[illegible] ಕಪ್ಪು ಕನ್ನಡಕವನ್ನು ಧರಿಸಿ ಹೊರಟಳು [illegible] ವಾಂಗೆರೊ.

ವಾಂಗೆರೋನ ವಿಚಿತ್ರ ಕನ್ನಡಕ ನೋ[illegible]ಯೋ ಏನೋ, ಮೆಗಿ ನಕ್ಕಳು. ಭಯವಿ[illegible] ಮುಕ್ತ ನಗು. ಕಾರಿನ ಧೂಳು ಅಡಗುವ[illegible] ನೋಡುತ್ತಾ ಸುಮ್ಮನೆ ನಿಂತಿದ್ದವು. ಮೆ[illegible] ಒಂಚೂರು ನಸ್ಯ ತರಲು ಹೇಳಿದೆ. ತು[illegible] ಹೊತ್ತು, ನಾನೂ, ಮೆಗಿ ಅಂಗಳದಲ್ಲಿ ಆರ[illegible]ವಾಗಿ ಕೂತಿದ್ದು, ಮಲಗುವ ಹೊತ್ತಾದಾಗ [illegible] ಮನೆಯೊಳಗೆ ಹೋದೆವು.



# ಎರಡು ತೊಟ್ಟು ಶಾಯಿ

## ಪ್ರಭುದತ್ತ

ಇವನು ಸುಮ್ಮನೆ ತನ್ನ ಗೆಳೆಯನನ್ನು ಹೊಗಳಿಕೊಳ್ಳುತ್ತಿದ್ದಾನೆ, ಎಂದುಕೊಳ್ಳಬೇಡಿ. ನಿಜವಾಗಿ ಹೇಳುತ್ತೇನೆ. ನಾಣಯಪ್ಪ ಚುರುಕಾದ ಹುಡುಗ ಬಹಳ ಅಪರೂಪವೇ ಹೌದು. ಅವನು ನಡೆಯುವ ರೀತಿ, ಮಾತನಾಡುವ ಸ್ವರ, ಆಟವಾಡುವ ರಭಸ ಎಲ್ಲದರಲ್ಲೂ ಅವನಲ್ಲಿದ್ದ ಅಪರೂಪದ ಅಸಾಮಾನ್ಯ ಶಕ್ತಿಯು ವ್ಯಕ್ತವಾಗುತ್ತಿತ್ತು. ಅವನು ನಡೆಯುತ್ತಿದ್ದುದೇ ಒಂದು ಠೀವಿ-ಯುದ್ಧಕ್ಕೆ ಹೊರಟ ಯೋಧನಂತೆ. ಅವನ ಕಂಠಸ್ವರ, ದೊಡ್ಡ ಕಂಚಿನ ಗಂಟೆ, ಸ್ಪಷ್ಟವಾಗಿ, ಅಧಿಕಾರಯುತವಾಗಿ 'ಢಣ್ ಣ್ ಣ್...' ಎಂದು ಬಡಿದಂತೆ. ಎಲ್ಲ ಆಟದಲ್ಲೂ ಮುಂದು ಅವನು. ಅವನನ್ನು ಸೋಲಿಸುವ ಸಲುವಾಗಿಯೇ ನಾವುಗಳು, ಕೆಲವೊಮ್ಮೆ, ಹಳೆಯ ಆಟಗಳನ್ನು ಬಿಟ್ಟು ಹೊಸ ಆಟಗಳನ್ನು ಹುಟ್ಟುಹಾಕುತ್ತಿದ್ದೆವು. ಆದರೂ, ಈ ಹೊಸ ಆಟದಲ್ಲಿಯೂ ಅವನು ಬಹುಬೇಗನೆ ಪರಿಣತನಾಗಿ, ನಮ್ಮನ್ನೆಲ್ಲ ಬಡಿದು ಹಾಕಿಬಿಡುತ್ತಿದ್ದನು. ಆದರೆ ಆ ಕಾರಣದಿಂದಾಗಿ ಅವನೆಂದೂ ಸ್ವಾರ್ಥಿಯಾಗಿ ನಡೆದುಕೊಂಡದ್ದಿಲ್ಲ.

ಅಂತಹ ಒಂದು ಪ್ರಸಂಗದ ಬಗ್ಗೆ ಹೇಳುತ್ತೇನೆ ಕೇಳಿ. ನಿಮಗೆಲ್ಲ ಗೊತ್ತಿರುವಂತೆಯೇ, ಕ್ರಿಕೆಟ್ ಆಡದೇ ಇರುವ ಭಾರತೀಯನಿಲ್ಲ. ದೊಡ್ಡವರು, ಚಿಕ್ಕವರು, ಮುದುಕರು, ಮಕ್ಕಳು ಎಲ್ಲರಿಗೂ ಕ್ರಿಕೆಟ್ಟಿನ ಹುಚ್ಚು. ನಮಗೂ ಆ ಹುಚ್ಚು ಇತ್ತು, 'ಇತ್ತು' ಏನು, ಊರಿನಲ್ಲಿ ಕ್ರಿಕೆಟ್ ಆಟವನ್ನು ಆಡಬೇಕಾದ ರೀತಿಯಲ್ಲಿ, ಅದಕ್ಕೆ ಬೇಕಾದ ಎಲ್ಲ



ರಾಧಾಕೃಷ್ಣ



ಸಲಕರಣೆಗಳೊಂದಿಗೆ ಆಡುವುದು ನಮ್ಮ ಕಲ್ಪನೆಗೂ ಮೀರಿದ ವಿಷಯವಾಗಿತ್ತು. ಉದಾಹರಣ
ಹೇಳುವುದಾದರೆ, ನಾವು ಯಾರೂ ಆಗ 'ಲೆದರ್ ಬಾಲ್' ಅನ್ನು ನೋಡಿಯೇ ಇರಲಿಲ್ಲ. ಕ್ರಿಕೆ
ಆಡಲು ಬೇಕಾದ ಸಲಕರಣೆಗಳನ್ನು ಎಂದೂ ಸರಿಯಾಗಿ ನೋಡದೇ ಇದ್ದ ನಮಗೆ, ಎಂದಾದರೂ
ಅವು ಕಣ್ಣಿಗೆ ಬಿದ್ದರೆ, ನಾವು ಅವುಗಳನ್ನೇ ನೋಡುತ್ತಾ, ಆಶ್ಚರ್ಯ-ಭಯ-ಖೇದಗಳಿ
ತುಂಬಿಹೋಗಿ, ಸ್ತಂಭಿತರಾಗಿಬಿಡುತ್ತಿದ್ದೆವು. ನಮ್ಮ ಊರಿನ ಪೊಲೀಸ್ ಸಬ್‌ಇನ್‌ಸ್ಪೆಕ್ಟರ ಮಗ ಶ್ಯಾಮ
ನಮಗೆ, "ಲೋ, ಗೊತ್ತೇನ್ರೋ, ನಮ್ಮ ತಂದೆ ಚಿಕ್ಕಮಗಳೂರಿನಲ್ಲಿ ನಿಜವಾದ ಲೆದರ್‌ಬಾಲ್‌ನಲ್ಲಿಯ
ಕ್ರಿಕೆಟ್ ಆಡುತ್ತಿದ್ದರಂತೆ" ಎಂದು ಒಂದು ಬಾರಿ ಹೇಳಿದ. ಸರಿ, ಲೆದರ್‌ಬಾಲನ್ನು ಎಂದೂ ನೋಡಿಯ
ಇಲ್ಲದಿದ್ದ ನಮಗೆ ಇದರಿಂದ ಶ್ಯಾಮನ ತಂದೆಯ ಮೇಲಿನ ಗೌರವ ಇದ್ದಕ್ಕಿದ್ದಂತೆ ಉಲ್ಬಣಿಸಿಬಿಟ್ಟ
ಲೆದರ್‌ಬಾಲ್‌ನಲ್ಲಿ ಆಟವಾಡಿದ ವ್ಯಕ್ತಿ ಎಂದರೇನು ಸಾಮಾನ್ಯನೇ!? ಇಷ್ಟು ಮಾತ್ರವಲ್ಲ, ಅಂತ
ತಂದೆಯ ಮಗನಾಗಿದ್ದುದಕ್ಕೆ ಶ್ಯಾಮನ ಮೇಲೆಯೂ ಒಂದು ಗುಲಗಂಜಿಯಷ್ಟು ಗೌ
ಜಾಸ್ತಿಯಾಯಿತು. ನಾವುಗಳು ಕ್ರಿಕೆಟ್ ಆಡುವಾಗ ಶ್ಯಾಮನು ಹೇಳುತ್ತಿದ್ದ ಮಾತಿಗೆ, ಇದರಿಂದಾಗಿ ಹೆ
ತೂಕ ಬರುತ್ತಿತ್ತು. ಶ್ಯಾಮನೂ ನಮ್ಮ ಈ ಗೌರವವನ್ನು ಸರಿಯಾಗಿ
ದುರುಪಯೋಗಪಡಿಸಿಕೊಂಡು, ತನಗೆ ಅನುಕೂಲವಾಗುವಂತಹ, ಆದರೆ ಕ್ರಿಕೆಟ್ ಆಟ
ಚರಿತ್ರೆಯಲ್ಲೇ ಇಲ್ಲದಿದ್ದಂತಹ ನಿಯಮಗಳನ್ನು ಹಾಕಿಕೊಂಡುಬಿಟ್ಟನು. ಮೊದಲ ಆರು ಓವರ್‌ಗಳ
ಕ್ಯಾಚ್ ಹಿಡಿದರೂ ಬ್ಯಾಟ್ಸ್‌ಮನ್ ಔಟಲ್ಲ, ಸ್ಟಂಪ್ ಮಾಡಿದರೂ ಔಟಲ್ಲ, ಕೊನೆಗೆ ಯಾವ ರಿ
ಔಟಾದರೂ ಔಟಲ್ಲ ಎನ್ನುವ ನಿಯಮ ಮಾಡಿ, ತಾನೇ ಮೊದಲು ಬ್ಯಾಟಿಂಗ್ ಮಾಡಿಬಿಡುತ್ತಿದ್ದ. ಆ
ಓವರಿನಲ್ಲಿ ಸಾಕಷ್ಟು ರನ್ ಹೊಡೆದು, ಏಳನೇ ಓವರಿನ ಮೊದಲನೆಯ ಬಾಲಿಗೇ ಔಟಾಗಿ ಕ
ಒಗೆಯುತ್ತಿದ್ದ. ಆದರೆ ಈ ನಿಯಮ, ಆರು ಓವರ್ ಮುಗಿದ ನಂತರ ಅನ್ವಯಿಸುತ್ತಿರಲಿಲ್ಲ. ನಮಗೂ
ಮೋಸ ಅರ್ಥವಾಯಿತು. ಆದರೆ ಏನು ಮಾಡುವುದು, ನಮ್ಮ ಕ್ರಿಕೆಟ್ ಆಟಕ್ಕೆ ಉಪಯೋಗಿಸುತ್ತಿ
ಹಳೆಯ ಟೆನಿಸ್ ಚೆಂಡು ಶ್ಯಾಮನದ್ದೇ ಆಗಿತ್ತು. ಹಾಗಾಗಿ ಸುಮ್ಮನಿದ್ದೆವು.

ಇಂತಹ ಸಂಕಟ ಸಮಯದಲ್ಲಿ ನಾಣಿಯು, ದುಷ್ಟರಾಕ್ಷಸರಿಂದ ದೀನ ಜನರ ರಕ್ಷಣೆಗೆ ಭಗವಂತ
ಅವತಾರ ಎತ್ತಿ ಬರುವಂತೆ ಧಾವಿಸಿ ಬಂದು, ಶ್ಯಾಮನ ನಿಯಮಗಳನ್ನೆಲ್ಲ ತಾನು ನಮ್ಮೊಂದಿಗೆ ಆ
ಬಂದ ಮೂರನೆಯ ದಿನವೇ ಮುರಿದು ಹಾಕಿಬಿಟ್ಟನು. ಅಂದು, ಎಂದಿನಂತೆ, ಮೊದಲು ಬ್ಯಾಟಿಂ
ಮಾಡಿದ ಶ್ಯಾಮನು ಬಾರಿಸಿದ ಟೆನಿಸ್ ಚೆಂಡು ತನ್ನ ಬಳಿ ಬಂದಾಗ, ಅದನ್ನು ಸುಮ್ಮನೆ ತ
ಜೇಬಿನಲ್ಲಿಟ್ಟುಕೊಂಡು ನಾಣಿಯು ತನ್ನ ಮನೆಗೆ ಹೊರಟುಬಿಟ್ಟನು. ನಮಗೆಲ್ಲ ಇಂದು ಆಟ ಇಲ್ಲ
ಎಂಬ ದುಃಖ, ಶ್ಯಾಮನಿಗೆ, ತನ್ನ ಚೆಂಡು ಈ ದುಷ್ಟ ನಾಣಿಯ ಜೇಬಿನಲ್ಲಿ, ಕಳ್ಳರಾವಣನ ಜ
ಸೀತೆಯು ಸೆರೆಯಾಗಿ ಲಂಕಾನಗರಕ್ಕೆ ಹೋದಂತೆ ಹೊರಟುಹೋಗುತ್ತಿದೆಯಲ್ಲ ಎಂಬ ಚಿಂ
"ನಾಣೀ, ಲೋ ನಾಣೀ, ಚೆಂಡು ಕೊಡೋ, ನನ್ನ ಚೆಂಡು ಕೊಡೋ" ಎಂದು ಶ್ಯಾಮ
ಗೋಗರೆದನು. ನಾಣಿಯು ಅಷ್ಟಕ್ಕೇ ಚೆಂಡು ಕೊಟ್ಟುಬಿಡುವ ಮನುಷ್ಯನೇ? "ನೀನು ಹುಟ್ಟುಹಾಕಿರು
ವಿಚಿತ್ರ ನಿಯಮಗಳನ್ನೆಲ್ಲ ತೆಗೆದುಹಾಕಿದರೆ ಮಾತ್ರ ಚೆಂಡನ್ನು ಕೊಡುತ್ತೇನೆ" ಎಂದನು. ಸರಿ, ಶ್ಯಾಮ
ಒಪ್ಪಲೇಬೇಕಾಯಿತು. ಒಪ್ಪಿಕೊಂಡನು. ನಾಣಿ ಮತ್ತೆ ಚೆಂಡನ್ನು ಹಿಂತಿರುಗಿ ಕೊಟ್ಟನು. ಆದ
ಯಾವುದೇ ರೀತಿಯ ಷರತ್ತುಗಳಿಲ್ಲದೆ, ತನಗೆ ಅನುಕೂಲವಾಗುವಂತಹ ಯಾವ ಹೊ
ನಿಯಮಗಳನ್ನೂ ಸೃಷ್ಟಿಸಿಕೊಳ್ಳದೆ, ಎಲ್ಲರಿಗೂ ಅನುಕೂಲವಾಗುವಂತಹ ನಿಯಮಗಳನ್ನು ಮಾ
ಉಳಿಸಿಕೊಂಡು, ಅದಕ್ಕೆ ನಮ್ಮ ಒಪ್ಪಿಗೆಯನ್ನು ಪಡೆದು, ನಂತರ, ನಾಣಿಯು ಚೆಂಡನ್ನು ಹಿಂತಿರು



ಟ್ಟನು. ನಾಣಿಯು, ಬೇಕಾಗಿದ್ದರೆ, ತನ್ನ ಅನುಕೂಲಕ್ಕಾಗಿ ಮಾತ್ರ
ಯಿಸುವ ಕೆಲವು ನಿಯಮಗಳನ್ನು ನಮ್ಮೆಲ್ಲರ ತಲೆಯ ಮೇಲೆ ಚಪ್ಪಡಿ
ರುವಂತೆ ಹೇರಿಬಿಡಬಹುದಾಗಿತ್ತು. ಆದರೆ ಅವನು ಹಾಗೆ ಮಾಡಲಿಲ್ಲ.
ೇ ಅವನ ಒಳ್ಳೆಯತನ. ಈ ಒಳ್ಳೆಯತನಕ್ಕಾಗಿ, ನಾವು ಮಾರನೆಯ
ಸಂಗ್ರಹಿಸಿದ ಕಾರೇಹಣ್ಣು, ಈಚಲುಹಣ್ಣು, ಗಣಕೇಹಣ್ಣುಗಳಲ್ಲಿ
ದು ಪಾಲು ಹೆಚ್ಚಾಗಿಯೇ ಅವನಿಗೆ ಕೊಟ್ಟು, ಅವನ ಬಗ್ಗೆ ನಮಗೆ
ಟಾಗಿದ್ದ ಕೃತಜ್ಞತೆಯನ್ನು ವ್ಯಕ್ತಪಡಿಸಿದ್ದೆವು.

ನಾಣಿಯು ಇರುವವರೆಗೂ ಸುತ್ತಮುತ್ತಲಿನ ಯಾವ ಶಾಲೆಯವರೂ
ಮ್ಮ ಶಾಲೆಯನ್ನು ಕಬಡ್ಡಿ ಆಟದಲ್ಲಿ ಸೋಲಿಸುವಂತೆಯೇ ಇರಲಿಲ್ಲ.
ಾರಾದರೂ ಒಂದು ವೇಳೆ ಅವನನ್ನು ಹಿಡಿಯಲು ಬಂದರೆ,
ಿಯಬಂದವನನ್ನೇ ಕಂಕುಳಲ್ಲಿ ಇರುಕಿಕೊಂಡು, ಮಧ್ಯದ ಗೆರೆಯನ್ನು ದಾಟಿ ತಮ್ಮ ಕೋರ್ಟಿಗೆ
ದುಬಿಡುತ್ತಿದ್ದ ನಾಣಿ.

ಒಮ್ಮೆ ಕಣಲೆಯ ಶಾಲೆಯವರು ನಮ್ಮ ಶಾಲೆಯ ಮೇಲೆ ಪಂದ್ಯಕ್ಕೆ ಬಂದರು. ಕಣಲೆ ಶಾಲೆಯವರಿಗೆ
ಮ್ಮ ಶಾಲೆಯ ವೀರ ನಾಣಿಯ ವಿಷಯ ತಿಳಿಯದೇ ಇರಲಿಲ್ಲ. ಒಂದು ಆಟ ಸೋತ ಮೇಲೆ,
ಂದಿನ ಆಟದಲ್ಲಿ ಎಲ್ಲರೂ ಒಟ್ಟಿಗೆ ತಮ್ಮ ತಮ್ಮಲ್ಲೇ ಮಾತನಾಡಿಕೊಂಡು, ಈ ನಾಣಿಯನ್ನು
ಾದರೂ ಮಾಡಿ ಹಿಡಿದುಬಿಟ್ಟರೆ ಉಳಿದವರನ್ನು ಹಿಡಿಯುವುದು ಕಷ್ಟವಾಗಲಾರದು ಎಂದು
ಯಿಸಿ, ಅದಕ್ಕೆ ತಕ್ಕ ತಂತ್ರವನ್ನು ಹೂಡಿದರು. ಮುಂದಿನ ಆಟದಲ್ಲಿ ನಾಣಿಯು 'ಕಬಡಿ ಕಬಡಿ'
ದುಕೊಂಡು ಬಂದಾಗ, ಕೋರ್ಟಿನ ಒಂದು ಮೂಲೆಯಲ್ಲಿ ತುಂಬಾ ಒಳಕ್ಕೆ ಅವನು ಬರುವವರೆಗೂ
ಲ್ಲರೂ ಹಿಂದೆ ಸರಿದು ಹೋದರು. ನಂತರ ಒಬ್ಬ ಆಟಗಾರನು ಸಮಯ ನೋಡಿ ನಾಣಿಯ
ಲಗಾಲನ್ನು ಥಕ್ಕನೆ ಹಿಡಿದದ್ದೇ ತಡ, ಉಳಿದವರೆಲ್ಲ ಮಿಂಚಿನ ವೇಗದಲ್ಲಿ ಹುಲಿಗಳಂತೆ ಹಾರಿ
ಣಿಯನ್ನು ಬಂಧಿಸಿಬಿಟ್ಟರು. ನಾವುಗಳು ಇನ್ನು ನಮ್ಮ ಶಾಲೆಯ ಕಥೆ ಮುಗಿದಂತೆಯೇ
ದುಕೊಂಡೆವು. ಆದರೆ ಆಮೇಲೆ ನಮಗೆ ಅರಿವಾಯಿತು: ನಾಣಿಯ ಸಾಮರ್ಥ್ಯವನ್ನು ನಾವು
ಯಾಗಿ ಅಳೆದಿರಲಿಲ್ಲ ಎಂದು. ಎಲ್ಲರೂ ಮುತ್ತಿ ಹಿಡಿದ್ದಾಗ, ತನ್ನ ಬಲವನ್ನೆಲ್ಲ ಒಟ್ಟುಗೂಡಿಸಿ ನಾಣಿ
ಮ್ಮಲೇ ಥಂಗನೆ ನೆಗೆದ. ಅವನ ಕಾಲನ್ನು ಹಿಡಿದಿದ್ದವನ ಕೈಜಾರಿತು. ಆತ ನಾಣಿಯ ಕಾಲನ್ನು ಬಿಟ್ಟು
ಂಟವನ್ನು ಹಿಡಿದುಕೊಂಡನು. ಆದರೆ ನಾಣಿ ಅದನ್ನು ಲೆಕ್ಕಿಸದೆ, ತನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ
ಧ್ಯದ ಗೆರೆಯ ಕಡೆಗೆ ಮಿಂಚಿನಂತೆ ನುಗ್ಗಿದನು. ವಿರೋಧಿಗಳ ಶತಪ್ರಯತ್ನವನ್ನು ಬಗ್ಗುಬಡಿದು,
ಧ್ಯದ ಪಟ್ಟಿಯವರೆಗೆ ಹೊರಳಾಡಿಕೊಂಡು ಬಂದು, ಅದನ್ನು ಮುಟ್ಟಿಯೇ ಬಿಟ್ಟನು! ನಾವು ಗಂಟಲು
ತ್ತಿ ಹೋಗುವವರೆಗೂ ಆನಂದದಿಂದ ಕೂಗಾಡಿಬಿಟ್ಟೆವು. ಇನ್ನು ಅಂದಿನ ಕಬಡ್ಡಿ ಪಂದ್ಯದಲ್ಲಿ
ದ್ದವರಾರೆಂದು ಹೇಳಲೇಬೇಕಿಲ್ಲವಷ್ಟೇ!!

ನಾಣಿಯು ನಮ್ಮ ಪ್ರೀತಿಯನ್ನು ಮಾತ್ರವೇ ಅಲ್ಲ, ನಮ್ಮೆಲ್ಲರ ತಾಯಿ, ಅಣ್ಣ-ಅಕ್ಕಂದಿರೆಲ್ಲರ
ೀತಿಯನ್ನೂ ಸಂಪಾದಿಸಿಬಿಟ್ಟಿದ್ದನು. ಸಂಜೆಯ ಹೊತ್ತಿನಲ್ಲಿ ವಿಜಯ, ಪ್ರಕಾಶ, ಶ್ಯಾಮ, ಫಣಿ
ಾರದೇ ಮನೆಯ ಹೊರಗೆ ನಿಂತು, ಅಧಿಕಾರಯುತವಾಗಿ, ಅನಭಿಷಿಕ್ತ ರಾಜನಂತೆ, ''ಲೋ,
ರೋ ಆಟಕ್ಕೆ, ಮೂದೇವಿ ಥರಾ ಇನ್ನೂ ಮನೇ ಒಳ್ಗೇ ಕೂತ್ಕೊಂಡಿದ್ದೀಯಲ್ಲೋ ಗುಗ್ಗು'' ಎಂದು
ಕಂಚಿನ ಕಂಠದಲ್ಲಿ ಕೂಗಿದೊಡನೆಯೇ, ''ಓ ಯಾರು? ನಾಣಿಯಾ? ಬಾರೋ ನಾಣಿ, ಒಳಗೆ

ಬಾ! ಸ್ವಲ್ಪ ಕಾಫಿ ಕುಡಿದು ಆಟಕ್ಕೆ ಹೋಗವಿರಂತೆ'' ಎಂದು ಹೇಳದೇ ಇದ್ದ ತಾಯಂದಿರು ಯಾ
ಇರಲಿಲ್ಲ. ಅವನು ಮನೆಯ ಒಳಗೆ ಬಂದರೂ ಅಷ್ಟೇ. ಎಲ್ಲರ ಜೊತೆ ಮಾತನಾಡಿ, ಹಾಸ್ಯಮಾಡಿ,
ನಲಿದು, ಎಲ್ಲರನ್ನೂ ನಗಿಸಿ, ನಲಿಸಿಬಿಡುತ್ತಿದ್ದನು.

ನಾಣಿಯ ಇನ್ನೊಂದು ಸ್ವಭಾವವೆಂದರೆ, ಯಾವುದಕ್ಕೇ ಆಗಲಿ, ಸ್ವತಃ ಮುನ್ನುಗ್ಗಿ ತಾನೇ ಮೊದ
ಹೋಗಿಬಿಡುವುದು. ಅಂತಹದೊಂದು ಪ್ರಸಂಗವು ನಮ್ಮ ಊರಿನ ಪಾಪಣ್ಣನವರ 'ಕಲ್ಲೇ
ಚಿತ್ರಮಂದಿರ'ದಲ್ಲಿ ನಡೆಯಿತು. ಚಿತ್ರಮಂದಿರವೆಂದರೆ ನಗರಗಳಲ್ಲಿ ಕಾಣುವ ವೈಭವಯುತವ
ಟಾಕೀಸುಗಳಂತೆ ಎಂದುಕೊಂಡರೆ ನಿಮ್ಮ ಊಹೆ ತಪ್ಪಾಗುತ್ತದೆ. ಅದು ಟೂರಿಂಗ್ ಟಾಕಿ
ಆಗಿರಲಿಲ್ಲವೆಂಬುದೇನೋ ನಿಜ. ಆದರೆ ಕೆಲವು ವರ್ಷ ಕಾಲ ಭದ್ರವಾಗಿ ನಿಲ್ಲುವಂತೆಯೂ ಅ
ಕಟ್ಟಿರಲಿಲ್ಲ. ಬಿದಿರಿನ ಬೊಂಬುಗಳಿಗೆ ಮಣ್ಣು ಮೆತ್ತಿ, ತೆಂಗಿನ ಮರದತೀರುಗಳನ್ನು ಕೊಟ್ಟು, ಕಂಬ
ಬದಲಿಗೆ ಸರ್ವೇಮರಗಳನ್ನೇ ನಿಲ್ಲಿಸಿ, ಮೇಲೆ ಸೀಮೆ ಹೆಂಚು ಹೊದೆಸಿ ಕಟ್ಟಿದ ಥಿಯೇಟರ್ ಅ
ಅದು ಹೇಗೇ ಇದ್ದರೂ, ಆ ಸಿನೆಮಾ ಥಿಯೇಟರ್ ಪ್ರಾರಂಭವಾದಾಗ ನಮಗೆಲ್ಲ ತುಂಬ ಸಂತೋಷ
ಆಗಿತ್ತು. ನಮ್ಮ ಊರಿಗೂ ಒಂದು ಸಿನೆಮಾ ಟಾಕೀಸ್ ಬಂತಲ್ಲ ಎಂದು. ಯಾವುದೇ ಹೊಸ ಸಿನೆ
ಆಗಲೀ, ಇಡೀ ಕರ್ನಾಟಕದಲ್ಲಿ ಎರಡು ಬಾರಿ ಸುತ್ತಾಡಿದ ನಂತರ, ಸುಮಾರು ಒಂದು-ಒಂದೂ
ವರ್ಷದ ಬಳಿಕ ನಮ್ಮ ಊರಿಗೆ, ಈ ಪಾಪಣ್ಣನವರ 'ಕಲ್ಲೇಶ್ವರ ಚಿತ್ರಮಂದಿರ'ಕ್ಕೆ ಬರುತ್ತಿತ್ತು. ಆ
ನಮಗೆ ಆ ಸಿನೆಮಾ ಹಳೆಯದೆನ್ನಿಸುತ್ತಲೇ ಇರಲಿಲ್ಲ. ಮತ್ತೆ ಇದಲ್ಲದೆ, ವರ್ಷದ ಮುನ್ನೂರ ಅರವತ್ತೈ
ದಿನಗಳೂ ಸಿನೆಮಾ ನಡೆಯುತ್ತಿದ್ದ ಟಾಕೀಸ್ ಇದ್ದದ್ದು, ಆ ಸುತ್ತಮುತ್ತಲಿನಲ್ಲೆಲ್ಲ ನಮ್ಮ ಊರಿ
ಮಾತ್ರವೇ. ಈ ಒಂದು ಕಾರಣಕ್ಕಾಗಿಯೇ ನಮ್ಮ ಊರಿನ ಜನರಿಗೆ, ಒಂದು ವೇಳೆ ಅವರು ಬ
ಅಕ್ಕಪಕ್ಕದ ಊರುಗಳಿಗೆ ಹೋದಾಗ, ಒಂದು ವಿಶೇಷವಾದ ಬಿಂಕ, ಬಿಗುಮಾನ ಬಂದುಬಿಡುತ್ತಿತ್ತು.

ಈಗ ನಾನು ನಾಣಿಯ ಬಗ್ಗೆ ಹೇಳುತ್ತಿದ್ದೆನಲ್ಲವೇ, ಸರಿ, ಪಾಪಣ್ಣನವರ 'ಕಲ್ಲೇ
ಚಿತ್ರಮಂದಿರ'ದಲ್ಲಿ ಒಮ್ಮೆ ಒಂದು ಯಕ್ಷಿಣಿ ಪ್ರದರ್ಶನವು ನಮ್ಮ ಶಾಲೆಯ ವತಿಯಿ
ಏರ್ಪಾಟಾಗಿತ್ತು. ಪ್ರದರ್ಶನ ನೀಡಿದ ಜಾದೂಗಾರನು, ಇತರ ಎಲ್ಲ ಯಕ್ಷಿಣಿಗಾರರೂ ಸಾಮಾನ್ಯವ
ಮಾಡುವ ಎಲ್ಲ ಚಮತ್ಕಾರಗಳನ್ನೂ ಮಾಡಿ ತೋರಿಸಿದ. ಮೊಳೆಗಳನ್ನು ನುಂಗುವುದು, ಬೆಂಕಿ
ಉಂಡೆಯನ್ನು ನುಂಗುವುದು, ಕಣ್ಣುಕಟ್ಟಿಕೊಂಡು ಕಪ್ಪುಹಲಗೆಯ ಮೇಲೆ ಬರೆದದ್ದನ್ನು ಓದುವುದ
ಎಲ್ಲವನ್ನೂ ಮಾಡಿದ. ಕೊನೆಗೆ, 'ಇನ್ನೊಂದು ವಿಶೇಷವಾದ ಜಾದೂ ಮಾಡುತ್ತೇನೆ, ಯಾರಾದ
ಹುಡುಗರು ಮುಂದೆ ಬನ್ನಿ' ಎಂದ. ನಮಗೆಲ್ಲ ಅಂಜಿಕೆ. ಹೋದರೆ, ಅವನು ಎಲ್ಲಿ ಕಣ್ಕಟ್ಟು ಮ
ಏನಾದರೂ ಮಾಡಿಬಿಡುವನೋ ಎಂದು. ಒಂದು ಕ್ಷಣ ಎಲ್ಲರೂ ಸ್ತಬ್ಧರಾಗಿದ್ದೆವು. ಮರುಕ್ಷಣ
ನೋಡುತ್ತೇವೆ, ಪಕ್ಕದಲ್ಲೇ ಕುಳಿತಿದ್ದ ನಾಣಿ ಎದ್ದುನಿಲ್ಲುತ್ತಿದ್ದಾನೆ, ''ಲೋ, ನಾನು ಹೋಗ್ತೀನಿ ಕಣ್ರೋ
ಎನ್ನುತ್ತಿದ್ದಾನೆ!

''ಬೇಡ ಕಣೋ ನಾಣಿ, ಅವನು ಏನು ಮಾಡ್ತಾನೋ ಯಾರಿಗೆ ಗೊತ್ತು?'' ಎಂದು ನಾ
ಹೇಳಿದೆವು.

''ಒಳ್ಳೆ ಗೂಬೆಗಳು ಕಣ್ರೋ ನೀವು. ಏನ್ ಮಾಡ್ತಾನೆ ನೋಡೇಬಿಡ್ತೀನಿ'' ಎಂದು ಹೇಳಿದವ
ನಮ್ಮ ಉತ್ತರಕ್ಕಾಗಿಯೂ ಕಾಯದೆ, ಸರಸರನೆ ಮುನ್ನುಗ್ಗಿಹೋಗಿ, ಜಾದೂ ಆಟಕ್ಕೋಸ್ಕರವಾಗಿ ಕೆ
ಬೆಂಚುಗಳನ್ನು ಹಾಕಿ ನಿರ್ಮಿಸಿದ್ದ ತಾತ್ಕಾಲಿಕ ವೇದಿಕೆಯ ಮೇಲೆ ಹತ್ತಿಯೇಬಿಟ್ಟನು. ಯ
ಮಾಡುವವನು, ಇವನ ಕಣ್ಣುಕಟ್ಟಿ, ಒಂದು ಗೋಣಿಯ ಚೀಲದೊಳಗೆ ಕೂರಿಸಿ, ನಂತರ, ''ಆ



ನೋಡಿ ಸ್ವಾಮಿ. ಈಗ ಹೊಸಾ ಥರಾ ಮ್ಯಾಜಿಕ್ ಮಾಡಿ ತೋರಿಸ್ತೀನಿ. ನೀವು ಇದನ್ನ ಎಲ್ಲೂ ನೋಡಿಲ್ಲ ಸ್ವಾಮಿ. ಮಕ್ಕಳೆಲ್ಲ ಚಪ್ಪಾಳೆ ತಟ್ಬೇಕು.''

ನಾವೆಲ್ಲ ಚಪ್ಪಾಳೆ ತಟ್ಟಿದೆವು.

''ಈ ಹುಡುಗನ್ನೆ ನೋಡಿ ಸ್ವಾಮೀ, ಕಣ್ಣು ಎರಡೂ ಕಟ್ಟಿದೆ ಸ್ವಾಮಿ. ಏನೂ ಕಾಣಾಕಿಲ್ಲ ಹುಡುಗನ್ನೆ ಸ್ವಾಮಿ. ಏನಪ್ಪಾ ಹುಡುಗಾ, ನಿನ್ನ ಹೆಸರೇನಪ್ಪಾ?''

''ನಾರಾಯಣ.''

''ಹ್ಲಾಂ! ನಾರಾಯಣ ಸಾಬ್ ಒಳಗಡೆ ಗೋಣೀಚೀಲದಲ್ಲಿ ಕುಂತವ್ರೆ, ಸ್ವಾಮಿ. ಸಾಹೇಬ್ರಿಗೆ ಹೊಟ್ಟೆ ಹಸೀತಾ ಇದೆ ಸ್ವಾಮೀ. ಸಾಬ್, ನಾರಾಯಣ ಸಾಬ್, ನಿಮ್ಗೆ ಏನು ತಿಂಡಿ ಬೇಕೂ ಅಂತ ಗಟ್ಟಿಯಾಗಿ ಎಲ್ರಿಗೂ ಕೇಳೂ ಹಂಗೆ ಹೇಳಿ.''

''ನಂಗೆ ಜಿಲೇಬಿ ಬೇಕು'', ನಾಣಿ ಗಟ್ಟಿಯಾಗಿ ಕೂಗಿದ.



''ಆಹ್ಞಾಂ, ಜಿಲೇಬೀ ಬೇಕಾ! ನೋಡೀ ಸಾರ್, ನೋಡಿ ಸ್ವಾಮೀ, ನಾರಾಯಣ ಸಾಬ್ ಹೇ
ಅವರ್ಗೆ ಜಿಲೇಬಿ ತಿನ್ನಬೇಕಂತೆ! ಕೇಳಿದ್ರಾ, ಸಾರ್! ಕೇಳಿದ್ರಾ, ಸ್ವಾಮೀ! ನೋಡಿ ಸ್ವಾಮೀ ಜಿಲೇಬಿ,
ತಾಜಾ ಜಿಲೇಬಿ ಈಗ ಕೊಡ್ತೀನಿ ನೋಡ್ತಾ ಇರಿ ಸ್ವಾಮಿ!'' ಎಂದು ಹೇಳುತ್ತಾ ಆ ಯಕ್ಷಿಣಿಗಾ
ಒಂದು ತಟ್ಟೆಯಲ್ಲಿ ಇಟ್ಟಿದ್ದ ಇದ್ದಿಲಿನ ರಾಶಿಯಿಂದ ಒಂದು ಇದ್ದಿಲು ತುಂಡನ್ನು ತೆಗೆದು,
ಕಟ್ಟಿಸಿಕೊಂಡು ಗೋಣೀಚೀಲದ ಒಳಗೆ ಕುಳಿತಿದ್ದ ನಾಣಗೆ ಕೊಟ್ಟನು.

''ನೋಡಿ ಸಾಬ್, ಜಿಲೇಬಿ ಬೇಕಂತ ನೀವು ಹೇಳಿದ್ದು ಹೌದಲ್ಲ!''

''ಹ್ಞಾಂ! ಹೌದು!''

''ಈಗ ನೋಡಿ ಜಿಲೇಬಿ ನಿಮ್ಮ ಬಾಯಿಗೆ ಇಡ್ತೀನಿ. ಗಟ್ಟಿಯಾಗಿ ಎಲ್ಲರಿಗೂ ಕೇಳುವ ಹಾಗೆ
ಸಾಬ್, ನೀವು ಏನು ತಿಂತಾ ಇದೀರಿ?''

''ಜಿಲೇಬಿ'', ನಾಣ ಕೂಗಿದ.

''ಈಗ ಇನ್ನೇನು ಬೇಕು ಹೇಳಿ ಸಾಬ್? ಸಿಹಿ ಬೇಕಾ? ಖಾರಾ ಬೇಕಾ?''

''ಮೈಸೂರು ಪಾಕ್ ಬೇಕು.''

''ಕೇಳೀ ಸಾರ್, ಎಲ್ಲಾ ಕೇಳಿ. ಹುಡುಗಾ ಕೇಳ್ತದೆ 'ಮೈಸೂರು ಪಾಕ್ ಬೇಕೂ' ಅಂತ. ಇಲ್ಲಿ ನ
ಸ್ವಾಮೀ, ಮೈಸೂರು ಪಾಕ್ ಬಂದೈತೆ. ತಾಜಾ ತಾಜಾ ಮೈಸೂರು ಪಾಕ್ ಬಂದೈತೆ'' ಎಂದು ಹೇಳ
ತಟ್ಟೆಯಿಂದ ಮತ್ತೊಂದು ಇದ್ದಿಲಿನ ತುಂಡನ್ನು ಗೋಣಿ ಚೀಲದೊಳಗೆ ಇದ್ದ ನಾಣಗೆ ಕೊಟ್ಟನು.

''ಎಲ್ರಿಗೂ ಕೇಳೋ ಹಾಗೆ ಹೇಳಿ ಸಾಬ್! ನೀವು ಏನು ತಿಂತಾ ಇದೀರಿ?''

''ಮೈಸೂರು ಪಾಕು!'' ಮತ್ತೊಮ್ಮೆ ನಾಣ ಕೂಗಿದ.

ಹೀಗೆಯೇ ಇನ್ನೂ ಒಂದೆರಡು ಮೂರು ತಿಂಡಿಗಳನ್ನು ಕೇಳಿದ ನಾಣ. ಪ್ರತಿಬಾರಿ
ಜಾದೂಗಾರನು, ನಾಣಗೆ ಇದ್ದಿಲನ್ನೇ ತಿನ್ನಿಸಿದ. ಆದರೆ ಎಲ್ಲ ಬಾರಿಯೂ ನಾಣಯು, ತಾನು ಕ
ತಿಂಡಿಯನ್ನೇ ತಿನ್ನುತ್ತಿದ್ದೇನೆ ಎಂದು ಜೋರಾಗಿ ಕೂಗಿ ಹೇಳಿದ. ಕೊನೆಗೊಮ್ಮೆ ಯಕ್ಷಿಣಿಗಾ
ನಾಣಯನ್ನು ಗೋಣಿ ಚೀಲದಿಂದ ಹೊರಬರಲು ಹೇಳಿ, ಕಣ್ಣಿನ ಪಟ್ಟಿಯನ್ನು ಬಿಚ್ಚಿ, ಹಿಂತಿ
ಕಳುಹಿಸಿದ. ನಮ್ಮ ಹತ್ತಿರ ಬಂದ ನಾಣಯನ್ನು ನೋಡಿದರೆ, ಅವನ ಬಾಯೆಲ್ಲ ಕಪ್ಪು ಕಪ್ಪು, ಇದ್ದಿಲಿನ
''ಏನೋ ನಾಣೀ? ನಿನಗೆ ಏನು ಕೊಟ್ಟನೋ ಅವನು?'' ಎಂದು ನಾವು ಕೇಳಿದೆವು.

''ತಿಂಡಿಕೊಟ್ಟ'' ಎಂದ ನಾಣ.

''ಆದರೆ ನಿಜವಾಗಿ, ಅವನು ಪ್ರತಿಸಲವೂ ಇದ್ದಿಲನ್ನೇ ಕೊಡ್ತಿದ್ದ ಕಣೋ'', ನಾವು ಹೇಳಿ
''ನೋಡು, ನಿನ್ನ ಬಾಯೆಲ್ಲ ಕಪ್ಪಾಗಿದೆ.''

....ಇರಲಿ, ಈಗ ನಾನು ಹೇಳಹೊರಟಿದ್ದ ವಿಷಯವೇ ಬೇರೆ. ಅವನಿಗೆ ಸಂಬಂಧಿಸಿದಂತೆ,
ಕನಸುಮನಸಿನಲ್ಲಿಯೂ ಯೋಚಿಸಲಾರದಂತಹ ಘಟನೆ ಒಂದು ದಿನ ನಡೆದುಹೋಯಿ
ವರ್ಷವರ್ಷದಂತೆ ಆ ವರುಷವೂ ಗಣೇಶನ ಹಬ್ಬಬಂದಿತು. ಮನೆಗಳಲ್ಲಿದ್ದ ಗಣೇಶನನ್ನು ವಿಸ
ಮಾಡಿ ಆಗಿದ್ದರೂ, ಊರೊಟ್ಟಿನ ಹಬ್ಬದ ಸಂಭ್ರಮವಿನ್ನೂ ಮುಗಿದಿರಲಿಲ್ಲ. ಊರೊಟ್ಟಿನ ಗಣೇ
ಉತ್ಸವದ ಕಾರ್ಯಕ್ರಮಗಳು, ಸುಮಾರು ಒಂದು ವಾರ ಕಾಲ, ಬಣ್ಣ ಬಣ್ಣದ ದೀಪಾಲಂಕಾ
ನಡುವೆ, ಹರಿಕಥೆ, ಸಂಗೀತ, ನಾಟಕಗಳ ಸಂಭ್ರಮದ ನಡುವೆ ಹಿಂದಿನ ದಿನ ತಾನೇ ಮುಗಿದಿ
ಹಿಂದಿನ ದಿವಸ ರಾತ್ರಿ, ಹೂವಿನ ಮಂಟಪದಲ್ಲಿ ಕೂರಿಸಿದ್ದ ಗಣೇಶನ ಮೆರವಣಿಗೆ, ಅಲಂ
ಟ್ರಾಕ್ಟರ್‌ನಲ್ಲಿ ಊರನ್ನೆಲ್ಲ ಸುತ್ತಿಬಂದಿತ್ತು. ರಾತ್ರೆ ಬಹಳಷ್ಟು ಹೊತ್ತು ನಾನು, ನಾಣ, ಪ್ರಕಾಶ, ಗಣೇ

ಸವದ ಹಿಂದು ಹಿಂದೆಯೇ ತಿರುಗಿದ್ದೆವು. ಮೆರವಣಿಗೆಯ ದಾರಿಯಲ್ಲಿ, ಟ್ರಾಕ್ಟರ್ ನಡೆಸುತ್ತಿದ್ದ
ವರನನ್ನು ಅಂಗಲಾಚಿ ಬೇಡಿಕೊಂಡು, ಸ್ವಲ್ಪ ದೂರದವರೆಗೆ ಟ್ರಾಕ್ಟರಿನಲ್ಲಿಯೇ ಕುಳಿತು ಸಹ,
ರವಣಿಗೆಯಲ್ಲಿ ಸಾಗಿದ್ದೆವು. ಪೆಟ್ರೋಮ್ಯಾಕ್ಸ್ ದೀಪಗಳ ಬೆಳಕಿನಿಂದ ಆಕರ್ಷಿತವಾಗಿ ಹಾರಿಬರುತ್ತಿದ್ದ
ಕಿನ ಹುಳುಗಳನ್ನು ಹಿಡಿದು, ಹಿಡಿದು ಆನಂದಪಟ್ಟಿದ್ದೆವು. ಆಮೇಲೆ ಮನೆಗೆ ಹೋಗಿ ನಿದ್ರಿಸಿ,
ಳು ಕಾಣಬಹುದಾದ ಕನಸುಗಳನ್ನೆಲ್ಲ ಕಂಡು, ಬೆಳಗಾಗಿ ಎದ್ದು, ಮತ್ತೆ ಗಣೇಶನನ್ನು ನೋಡಲು
ೇಗಿದ್ದೆವು. ನಾನು ಮನೆಯಿಂದ ಹೊರಟಾಗ ದಾರಿಯಲ್ಲಿಯೇ ನಾಣಿ ಸಿಕ್ಕಿದ್ದನು.

ಗಣೇಶನ ಮೆರವಣಿಗೆಯು ನಮ್ಮ ಊರಿನ ದೊಡ್ಡ ಕಲ್ಯಾಣಿಯ ಹತ್ತಿರ ಕೊನೆಗೊಂಡಿತ್ತು. ಅಂದು
, ತೆಪ್ಪೋತ್ಸವವನ್ನು ಮಾಡಿ, ನಂತರ ಗಣೇಶನನ್ನು ಎಂದಿನಂತೆ, ಕಲ್ಯಾಣಿಯ ನೀರಿನೊಳಕ್ಕೆ
ಬಿಡಲಿದ್ದರು. ನಾನು ಹಾಗೂ ನಾಣಿ ಗಣೇಶನ ಹತ್ತಿರ ಹೋಗಿ, ಮೂರು ಪ್ರದಕ್ಷಿಣೆ ಹಾಕಿ,
ೀಲಕಕ್ಕೆ ಐದೈದು ಪೈಸೆ ದಕ್ಷಿಣೆ ಹಾಕಿ, ಭಕ್ತಿಯಿಂದ ಪ್ರಾರ್ಥನೆ ಮಾಡಿದೆವು. ಸದ್ಯದಲ್ಲೇ ಫಸ್ಟ್
ರ್ಮ್ ಪರೀಕ್ಷೆ ನಡೆಯಲಿದ್ದುದರಿಂದ, ಸಹಜವಾಗಿಯೇ, ಯಾವ ಪ್ರಯತ್ನವಿಲ್ಲದೆಯೇ ನಮ್ಮ
ಸ್ಸಿನಲ್ಲಿ ಭಕ್ತಿ ತಾನೇ ತಾನಾಗಿ ಉಕ್ಕಿ ಬಂದಿತು.

ಹತ್ತು ಗಂಟೆ ಆಯಿತು. ಶಾಲೆಗೆ ಹೊರಡುವ ಸಮಯವಾಯಿತು. ದಿನವೂ ಜೊತೆಗೇ ಬರುತ್ತಿದ್ದ
ಣಿಯು, ಅಂದು ಏಕೋ ಬರಲಿಲ್ಲ. ಅವನಿಗಾಗಿ ಸ್ವಲ್ಪ ಹೊತ್ತು ಕಾದು, ನಂತರ ನಾನೊಬ್ಬನೇ ಶಾಲೆಗೆ
ರಟೆ. ದಾರಿಯಲ್ಲಿ ಪ್ರಕಾಶ ಮತ್ತು ವಿಜಯ ಸಿಕ್ಕಿದರು. ಶಾಲೆ ಸರಿಯಾದ ಸಮಯಕ್ಕೆ
ರಂಭವಾಯಿತು. ಒಂದು ಪೀರಿಯಡ್ ಮಾತ್ರ ಮುಗಿದಿರಬಹುದಷ್ಟೇ. ಅಷ್ಟು ಹೊತ್ತಿಗೆ ನಮಗೆ
ತದ ತರಗತಿಯನ್ನು ತೆಗೆದುಕೊಳ್ಳುತ್ತಿದ್ದ ಪ್ರಸಾದ್ ಮಾಸ್ತರರು ಬಂದು ದುಃಖದ ಸುದ್ದಿಯನ್ನು
ದರು. ನಾಣಿ ಕಾಲು ಜಾರಿ-ಊರಿನ ದೊಡ್ಡ ಕಲ್ಯಾಣಿಗೆ ಬಿದ್ದು ಮುಳುಗಿ ಹೋಗಿದ್ದ.

ನಡೆದ ಘಟನೆ ಇಷ್ಟು: ನಾಣಿಯು ಶಾಲೆಗೆ, ಎಂದಿಗಿಂತ ಸ್ವಲ್ಪ ತಡವಾಗಿ, ಮನೆಯಿಂದ ಹೊರಟನು.
ಯಲ್ಲಿ ಐದನೇ ತರಗತಿಯ ಪುಟ್ಟ ಸಿಕ್ಕಿದ. ಇಬ್ಬರೂ ಒಟ್ಟಿಗೆ ಶಾಲೆಗೆ ಬರುತ್ತಿದ್ದರು. ನಾಣಿಯ
ನಲ್ಲಿದ್ದ ಶಾಯಿಯೆಲ್ಲ ಮುಗಿದುಹೋಗಿತ್ತು. ನಮ್ಮಲ್ಲಿ ಬಹಳಷ್ಟು ಜನರಿಗೆ ಗೊತ್ತಿರುವಂತೆ,
ನಲ್ಲಿದ್ದ ಶಾಯಿಯು ನಮಗರಿವಿಲ್ಲದೆ ಅನಿರೀಕ್ಷಿತವಾಗಿ ಖಾಲಿಯಾದಾಗ, ಯಾರಾದರೂ
ತರಿಂದ ಎರಡು-ಮೂರು ತೊಟ್ಟು ಶಾಯಿಯನ್ನು, ಭಿಕ್ಷೆ ಬೇಡಿ, ಸಾಲದಂತೆ ಪಡೆಯುತ್ತಿದ್ದೆವು.
ಯೊಬ್ಬ ಹುಡುಗನಿಗೂ, ತಾನು ಯಾರು ಯಾರಿಗೆ, ಎಷ್ಟೆಷ್ಟು ಹನಿ ಶಾಯಿಯನ್ನು ಸಾಲ ಕೊಟ್ಟಿದ್ದೇನೆ
ವುದು ಚೆನ್ನಾಗಿ ನೆನಪಿರುತ್ತಿತ್ತು. ಸಾಲ ಪಡೆದ ವಿದ್ಯಾರ್ಥಿಯು ಈ ಸಾಲವನ್ನು, ಸಾಧ್ಯವಾದಾಗ,
ಯಿಯ ರೂಪದಲ್ಲೋ ಅಥವಾ ಇನ್ನಾವುದೋ ರೂಪದಲ್ಲಿಯೋ ತೀರಿಸಬೇಕಾಗುತ್ತಿತ್ತು. ಹಾಗೆ
ಸುವಾಗ, ತಾನು ಸಾಲ ತೆಗೆದುಕೊಂಡಷ್ಟು ಶಾಯಿ ಮಾತ್ರವಲ್ಲದೆ, ಅದಕ್ಕೆ ಬಡ್ಡಿಯಾಗಿ
ಒಂದೆರಡು ತೊಟ್ಟು ಹೆಚ್ಚಿನ ಶಾಯಿಯನ್ನೂ ಈ ಪುಟ್ಟ ಸಾಲಿಗರು ಬಿಡದೆ, ನಿರ್ದಾಕ್ಷಿಣ್ಯವಾಗಿ
ಲಿ ಮಾಡಿಬಿಡುತ್ತಿದ್ದುದುಂಟು.

ಸರಿ, ನಾಣಿಯ ಪೆನ್ನಿನಲ್ಲಿದ್ದ ಶಾಯಿ ಮುಗಿದು ಹೋಗಿತ್ತೆಂದು ಹೇಳಿದೆನಲ್ಲವೇ? ನಾಣಿಯು ತನ್ನ
ತರಿಂದ ಒಂದೆರಡು ತೊಟ್ಟನ್ನು ಸಾಲವಾಗಿ ಪಡೆಯಲು ಸಾಧ್ಯವಿತ್ತು. ಆದರೆ ಅವನು ಹಾಗೆ
ಡಲಿಲ್ಲ. ಬಹುಶಃ, ಆಗಲೇ ಶಾಲೆಗೆ ತಡವಾಗಿಬಿಟ್ಟಿದ್ದರಿಂದ ಹಾಗೆ ಮಾಡಲಿಲ್ಲವೆನಿಸುತ್ತದೆ. ಅಥವಾ,
ೇ ಅವನು ತನ್ನ ಸ್ನೇಹಿತರಿಂದ ಸಾಕಷ್ಟು ಶಾಯಿಯನ್ನು ಸಾಲವಾಗಿ ಪಡೆದುಬಿಟ್ಟಿದ್ದರಿಂದ, ಮತ್ತೆ
ಬು ಹಿಂಜರಿಕೆ ಉಂಟಾಗಿರಬೇಕು. ಇಂತಹ ದುರ್ಭರ ಪ್ರಸಂಗ ಪ್ರತಿಯೊಬ್ಬ ಬಾಲಕನಿಗೂ

ಬರುತ್ತಿದ್ದುದುಂಟು. ಅಂತಹ ಸನ್ನಿವೇಶಗಳಲ್ಲಿ ನಾವು ಇನ್ನೊಂದು ಉಪಾಯವನ್ನು ಮಾಡುತ್ತಿ
ಪಾರಿಯಲ್ಲಿ ಸಿಗುತ್ತಿದ್ದ ದೊಡ್ಡ ಕಲ್ಯಾಣಿಯಲ್ಲಿ ಇಳಿದು, ಪೆನ್ನಿಗೆ ಒಂದೆರಡು ತೊಟ್ಟು ನೀ
ಹಾಕಿಕೊಂಡು, ಚೆನ್ನಾಗಿ ಪೆನ್ನನ್ನು ಕುಲುಕಿ, ಒಣಗಿದ ಶಾಯಿಯೊಂದಿಗೆ ನಾವು ಹಾಕಿದ್ದ ನೀರು ಬೆ
ನೀರೇ ಶಾಯಿಯಾಗಿ ರೂಪಾಂತರ ಹೊಂದುವಂತೆ ಮಾಡಿಬಿಡುತ್ತಿದ್ದೆವು.

ಬಹುಶಃ ನಾಣಿಯೂ ಅದೇ ಉದ್ದೇಶದಿಂದ ಕಲ್ಯಾಣಿಗೆ ಇಳಿದ ಎನ್ನಿಸುತ್ತದೆ. ಕಲ್ಯಾಣಿಯ ದಂ
ಮೇಲಿದ್ದ ಕಲ್ಲಿನ ಮೇಲೆ ಪುಟ್ಟ ನಿಂತಿದ್ದ. ನಾಣಿಯು ಎಂಟು ಹತ್ತು ಮೆಟ್ಟಲು ಕೆಳಗಿಳಿದು ಹ
ಒಂದೆರಡು ಮೆಟ್ಟಲಿನಷ್ಟು ನೀರಿನೊಳಗ ಇಳಿದು, ಮೈ ಬಾಗಿಸಿ, ನೀರಿಗೆ ಕೈ ಹಾಕಿದ. ಅಷ್ಟರಲ್ಲಿ ಹೆಗ
ಪುಸ್ತಕದ ಚೀಲ ಜಾರಿ ಕೆಳಗೆ ಬಂತು. ಚೀಲವನ್ನು ಸರಿಮಾಡಿಕೊಳ್ಳಲು ನಾಣಿ ತನ್ನ ಮೈಯನ್ನು
ಹೊರಳಿಸಿದನು. ಆಗ ಅವನಿಗರಿವಿಲ್ಲದಂತೆ ಅವನು ಕಾಲುಗಳೂ ಸ್ವಲ್ಪ ಹೊರಳಿದವು. ಮೈ
ತಪ್ಪಿತು. ಕಾಲನ್ನು ಮತ್ತೆ ಭದ್ರವಾಗಿ ಊರಿ ನಿಲ್ಲಲು ಯತ್ನಿಸಿದ ನಾಣಿಗೆ ಗಟ್ಟಿ ನೆಲ ಸಿಕ್ಕಲಿಲ್ಲ. ಪಾಚಿ
ಕಲ್ಲಿನ ಮೇಲೆ ಹೋದ ಅವನ ಕಾಲು ಜಾರಿ, ನಾಣಿಯು ನೀರಿನೊಳಗೆ ಮುಳುಗಿಯೇ ಹೋ
ಪುಟ್ಟನಿಗೆ ಗಾಬರಿ, ನಾಣಿ ಮುಳುಗಿದ್ದುದನ್ನು ಕಂಡು ಒಂದುಕ್ಷಣ ಏನೂ ತೋಚಲಿಲ್ಲ. ಮರುಕ್ಷ
ಜೋರಾಗಿ ಕಿರುಚಿಕೊಂಡ, ''ನಾಣಿ, ನಾಣಿ! ಹೋ! ನಾಣಿ ನೀರಿಗೆ ಬಿದ್ದುಬಿಟ್ಟ!
ಮುಳುಗಿಹೋದ!'' ಎಂದು.

ಕಲ್ಯಾಣಿಯ ಪಕ್ಕದ ರಸ್ತೆಯ, ಆಚೆ ಬದಿಯಲ್ಲಿ ಇದ್ದ 'ಕೃಷ್ಣಾಹೋಟೆಲ್'ನ ಯಜಮಾನರ
ನಾಯಕರು, ಏನೋ ಕೆಲಸ ಮಾಡುತ್ತಿದ್ದವರು, ಪುಟ್ಟನ ಕೂಗು ಕೇಳಿ, ತಕ್ಷಣ ಗಲ್ಲಾಪೆಟ್ಟಿಗೆಯ
ಹಾಕಿ, ಓಡೋಡಿ ಬಂದರು. ಅವರ ಹಿಂದೆಯೇ ಪುಟ್ಟನ ಕೂಗು ಕೇಳಿದ್ದ ಇನ್ನೂ ಕೆಲ
ಓಡಿಬಂದರು. ಒಬ್ಬರು ಓಡಿಬಂದು ನಮ್ಮ ಶಾಲೆಯ ಮುಖ್ಯೋಪಾಧ್ಯಾಯರಿಗೆ ಸುದ್ದಿ ಮುಟ್ಟಿಸಿದ

ಸುದ್ದಿಯನ್ನು ಕೇಳಿ ನಮಗೆಲ್ಲ ಏನು ಹೇಳಬೇಕೆಂಬುದೇ ಗೊತ್ತಾಗಲಿಲ್ಲ. ನಮಗೆ ಅದು
ಅರಿವಿದ್ದ ಒಂದೇ ಒಂದು ರೀತಿಯ ದುಃಖವೆಂದರೆ, ಉಪಾಧ್ಯಾಯರ ಹೊಡೆತ ಮಾತ್ರವೇ.
ನಾಣಿಯು ಕಲ್ಯಾಣಿಯಲ್ಲಿ ಮುಳುಗಿಹೋದಾಗ ನಮ್ಮ ಮನಸ್ಸಿನಲ್ಲಿ ಉಂಟಾದ ವೇದನೆ
ಇನ್ನೊಂದು ರೀತಿಯ ದುಃಖದ ಪರಿಚಯವನ್ನು ನಮಗೆ ಮಾಡಿಕೊಟ್ಟಿತು. ಮುಖ್ಯೋಪಾಧ್ಯಾ
ಅಂದು ನಮ್ಮ ಶಾಲೆಗೆ ರಜಾ ಕೊಟ್ಟರು. ಶಾಲೆಯಿಂದ ಹೊರಬಿದ್ದವರೇ, ನಾವೆಲ್ಲ, ಓಡೋ
ಊರಿನ ದೊಡ್ಡ ಕಲ್ಯಾಣಿಯ ಬಳಿ ಬಂದೆವು. ಅಷ್ಟು ಹೊತ್ತಿಗಾಗಲೇ ಅಲ್ಲಿ ಸಾಕಷ್ಟು ಜನ ಸೇರಿಬಿಟ್ಟಿ
ಎರಡು ಖಾಲಿ ಡ್ರಮ್‌ಗಳನ್ನು ಸೇರಿಸಿ ಕಟ್ಟಿ ಮಾಡಿದ್ದ ಸಣ್ಣ ತೆಪ್ಪದ ಮೇಲೆ, ಇಬ್ಬರು ಕುಳಿತು, ಉದ್ದ
ಬಿದಿರಿನ ಗಳುವಿನಿಂದ ಕಲ್ಯಾಣಿಯ ತಳವನ್ನು ಮೆಲ್ಲನೆ ತಟ್ಟುತ್ತಾ ನಾಣಿಯನ್ನು ಹುಡುಕುತ್ತಿದ್ದರು. ಕೆಲ





ಈಜುಗಾರರು, ನೀರಿನಲ್ಲಿ ಮತ್ತೆ ಮತ್ತೆ ಮುಳುಗುಹಾಕಿ ನಾಣಿಯ ದೇಹವನ್ನು ಪತ್ತೆ ಹಚ್ಚಲು ಯತ್ನಿಸುತ್ತಿದ್ದರು. ತಿಳಿಹಸಿರು ಬಣ್ಣದ ವಿಶಾಲವಾದ ಕಲ್ಯಾಣಿಯ ಜಲ ಮಾತ್ರ ತನಗೇನೂ ತಿಳಿಯದೇನೋ ಎನ್ನುವಂತೆ ಅಲೆ ಅಲೆಯಾಗಿ ಕುಣಿಯುತ್ತಾ ನಗುತ್ತಿತ್ತು. ಗಣೇಶನ ತೆಪ್ಪೋತ್ಸವ ಆ ವರ್ಷ ನಡೆಯಲೇ ಇಲ್ಲ. ಗಣೇಶನನ್ನು ಊರಿನ ಕೆರೆಯಲ್ಲಿ ಯಾವ ಸಂಭ್ರಮವೂ ಇಲ್ಲದೆ ವಿಸರ್ಜನೆ ಮಾಡಿದರು.

ಎಲ್ಲವನ್ನೂ ನೋಡಿಯೂ, ಕೇಳಿಯೂ, ನಾಣಿ ಇನ್ನಿಲ್ಲ ಎಂದು ನನಗೆ ನಂಬಲೇ ಆಗಲಿಲ್ಲ. ಅಂದು ಬೆಳಿಗ್ಗೆ ತಾನೇ, ಇಬ್ಬರೂ, ಗಣೇಶನಿಗೆ ಐದೈದು ಪೈಸೆ ಕಾಣಿಕೆ ಹಾಕಿದ್ದೆವಲ್ಲ! ಇಬ್ಬರೂ ಒಬ್ಬರ ಹೆಗಲ ಮೇಲೆ ಮತ್ತೊಬ್ಬರು ಕೈ ಹಾಕಿಕೊಂಡು, ಗಣೇಶನನ್ನು-ಕೂರಿಸಿದ್ದ ಟ್ರ್ಯಾಕ್ಟರನ್ನೂ ಸೇರಿಸಿದಂತೆ-ಮೂರು ಪ್ರದಕ್ಷಿಣೆ ಹಾಕಿದೆವಲ್ಲ! ಇಷ್ಟು ಬೇಗ, ಕೆಲವೇ ಗಂಟೆಗಳಲ್ಲಿ ನಾಣಿಗೆ ಸಾವು ಬರುವುದೇ ಎನಿಸಿತು!



ಮೂರುದಿನ ಕಳೆದ ಮೇಲೆ ನಾಣಿಯ ಶವ, ಕಲ್ಯಾಣಿಯ ತಿಳಿಹಸಿರು ನೀರಿನ ಮೇಲೆ ತೇಲುತ್ತಿತ್ತು. ಅದೇ ಕರಿಯ ಚೆಡ್ಡಿ, ಅದೇ ಗೀರುಗೀರು ಶರ್ಟು ಇತ್ತು. ಆದರೆ ದೇಹ, ನೀರು ಕುಡಿದು ಸ್ವಲ್ಪ ಸ್ಥೂಲವಾಗಿತ್ತು. ಮೀನುಗಳು ಅಲ್ಲಲ್ಲಿ ಚರ್ಮ, ಮಾಂಸವನ್ನು ತಿಂದುಹಾಕಿದ್ದವು. ನಾನು, ಪ್ರಕಾಶ, ವಿಜಯ ಎಲ್ಲರೂ ಒಟ್ಟಿಗೆ ನಿಂತು ನಾಣಿಯ ದೇಹವನ್ನು ದೂರದಿಂದ ನೋಡಿದೆವು. ಇನ್ನು ನಾಣಿ ನಮ್ಮೊಂದಿಗೆ ಆಟವಾಡಲು ಬರುವುದಿಲ್ಲ. ಇನ್ನು ಪ್ರತಿನಿತ್ಯ ಶಾಲೆಗೆ ಹೋಗುವಾಗ ನಾಣಿ ಸಿಗುವುದಿಲ್ಲ ಎನಿಸಿತು. ನಮ್ಮಲ್ಲಿ ಪ್ರತಿಯೊಬ್ಬರಿಗೂ ನಾಣಿಯು ಎಷ್ಟೋ ತೊಟ್ಟು ಶಾಯಿಯ ಸಾಲವನ್ನು ಹಿಂತಿರುಗಿ ಕೊಡಬೇಕಾಗಿತ್ತು. ಆದರೆ ನಾಣಿಯ ಸಾವು ಮಾತ್ರ ನಮ್ಮೆಲ್ಲರ ಮನಸ್ಸನ್ನೂ ಕಲಕಿಹಾಕಿಬಿಟ್ಟಿತು.

ಅವನ ಬಗ್ಗೆ ಬರೆಯಲು ನಾಣಿಯಲ್ಲಿ ಏನು ವಿಶೇಷವಿದೆ? ಆತನೇನು ವಿಶೇಷ ಪ್ರತಿಭಾವಂತನೇ? ಮಹಾಪುರುಷನೇ? ಕಲಾವಿದನೇ? ಏನು? ಈ ಪ್ರಶ್ನೆಗೆ ಉತ್ತರ ನನಗೂ ಹೊಳೆದಿಲ್ಲ. ಆದರೆ ಬಾಲ್ಯದ ದಿನಗಳ ನೆನಪು ಬಂದಾಗಲೆಲ್ಲ, ನಾಣಿಯ ನೆನಪು ನನಗೆ ಬರದೆ ಹೋದ ಸಂದರ್ಭವಿಲ್ಲವೇ ಇಲ್ಲವೆನ್ನಬಹುದು. ಅವನ ನೆನಪೇ ಎಷ್ಟೋ ವೇಳೆ ನನಗೆ ಸಂತೋಷವನ್ನುಂಟು ಮಾಡಿದೆ. ಅವನ ಬಗ್ಗೆ ಎಷ್ಟೋ ವೇಳೆ ನನ್ನ ಮನಸ್ಸು ಮರುಗಿದೆ. ಎಷ್ಟೋ ಬಾರಿ ಅವನ ಸ್ಮೃತಿಯು ನನ್ನ ಮನದಲ್ಲಿ ನೋವಿನ ಅಲೆಯೊಂದನ್ನೇಳಿಸಿದೆ.

ನಾಣಿ ಈಗ ಎಲ್ಲಿದ್ದಾನೋ ನಾನು ಅರಿಯೆ. ಅವನ ಆತ್ಮ ಶರೀರದೊಂದಿಗೇ ನಾಶವಾಗಿ ಹೋಯಿತೇ? ಅಥವಾ ಅಪಮೃತ್ಯುವಿಗೊಳಗಾದುದರಿಂದ ಪ್ರೇತವಾಗಬೇಕಾಯಿತೇ? ಅಥವಾ ಮರುಜನ್ಮ ತಳೆದು, ಈ ಬಾರಿಯಾದರೂ ಪೂರ್ಣ ಆಯುಷ್ಯವನ್ನು ಅನುಭವಿಸುವ ಭಾಗ್ಯವನ್ನು ಪಡೆದಿದೆಯೇ ಎಂಬುದು ನನಗೆ ತಿಳಿಯದು. ಇವೆಲ್ಲವೂ ಬಲ್ಲಿದರ ತರ್ಕಕ್ಕೆ ಆಹಾರವಾಗಬಲ್ಲ ವಿಚಾರಗಳು. ನನಗೆ ನಾಣಿಯ ಆತ್ಮ, ಶರೀರದೊಂದಿಗೆ ನಾಶವಾಗುವುದು ಬೇಕಿಲ್ಲ. ಅದು ಪ್ರೇತವಾಗುವುದೂ ಬೇಕಿಲ್ಲ. ಅದು ಮತ್ತೊಮ್ಮೆ ಮರುಹುಟ್ಟು ಪಡೆದು ಸಾರ್ಥಕವಾದ ಪೂರ್ಣವಾದ ಬಾಳನ್ನು ಬಾಳಲಿ ಎನ್ನುವುದೇ ನನ್ನ ಅಭೀಪ್ಸೆ. ಹಾಗೊಮ್ಮೆ ಮತ್ತೆ ಹುಟ್ಟಿ ಬಂದ ನಾಣಿಯು, ನಮ್ಮ ಊರಿಗೆ ಬಂದು, ಬಸ್ಸಿನಿಂದ ಇಳಿದು, ನಮ್ಮ ಮನೆಗೆ ಬಂದು, ನನ್ನ ಎದುರಿಗೆ ನಿಂತು, 'ಹೇಗಿದ್ದೀಯೋ ಪ್ರಭೂ' ಎಂದು ಕೇಳಿದರೆ ನಾನು ಏನು ಹೇಳಲಿ ಎಂಬ ಯೋಚನೆ ಎಷ್ಟೋ ಬಾರಿ ನನಗೆ ಬರುತ್ತದೆ. □

## ಮುಂಬಸು



# ಓಂಕಾರದ ಶಂಖನಾದಕಿಂತ ಕಿಂಚಿದೂನ

ಪ್ರೀತಿಯ ಸಂಪಾದಕರೆ,

'ಅನುಭಾವ'ದ ಕುರಿತು ನಿಮ್ಮ ಅಂಕಣ ಓದಿ ಕೆಲ ಮಾತು.

ಅನುಭಾವ ಹುಟ್ಟುವುದು ಭವದಿಂದಲೇ. ಭವದಿಂದ ಅನುಭವ, ಅನುಭವದಿಂದ ಅನುಭಾವ. ನ
ಕಾವ್ಯ ಮೀಮಾಂಸೆಯಲ್ಲಾಗಲೀ, ಸಂಸ್ಕೃತ ವಾಙ್ಮಯದಲ್ಲಾಗಲೀ ರೂಢಿಯಲ್ಲಿಲ್ಲದ ಅರ್ಥಸಂಕೀರ್ಣ
ತೆಯನ್ನು ಈ ಪದಕ್ಕೆ ತುಂಬಿದವರು ಶರಣರು. ಶರಣನೇ ಅನುಭಾವಿ. ನುಡಿದಂತೆ ಭವದಲ್ಲಿ ನಡೆದವ
ಅನುಭಾವಿಗಳು. ಶರಣರ ವಚನಗಳು ಅನುಭಾವದ ಹೆಬ್ಬಾಗಿಲನ್ನು ತೆರೆದವು. ಆಧ್ಯಾತ್ಮಿಕತೆಯ
ಅನುಭಾವದ ಒಂದು ಪ್ರಧಾನ ಅಂಗ. ಅನುಭಾವಕ್ಕೆ ಇನ್ನೂ ಬೇರೆ ಬೇರೆ ನೆಲೆಗಳಿವೆ. ಇತ್ತೀಚ
ದಿನಗಳಲ್ಲಿ, ಒಟ್ಟಾರೆಯಾಗಿ ಆಧ್ಯಾತ್ಮಿಕ ತುಡಿತವುಳ್ಳ ಎಲ್ಲ ಬರಹಗಳನ್ನು ಅನುಭಾವದ ಕಕ್ಷೆಯಲ್ಲಿಡುವು
ಸಾಮಾನ್ಯವಾಗಿದೆ. ಆದರೆ ಪ್ರತ್ಯಕ್ಷ ಅನುಭವ ಇಲ್ಲದ ಆಧ್ಯಾತ್ಮಿಕತೆ ಅನುಭಾವವಾಗಲಾರದು.

ಜೀವಸಖ್ಯದ ಒಂದು ಕನಸನ್ನು ಭಾಷೆಯಲ್ಲಿ ಜಡಗೊಳಿಸಲಾಗುತ್ತಿದೆ ಎಂಬ ನಿಮ್ಮ ಆತಂಕ ನನ್ನದ
ಕೂಡ ಆಗಿದೆ. ಕವಿ,ಕಾವ್ಯ ಅಲುಗಾಡದೆ ನಿಂತುಬಿಟ್ಟ ಬಸ್ಸಿನಂತೆಯೇ, ಊರಲ್ಲೇ ಗಿರಕಿ ಹೊಡೆಯು
ವಿಮಾನದಂತೆಯೇ ಆಗಬಾರದೆಂಬ ಕಳಕಳಿ ಮನಮುಟ್ಟುವಂಥದು. ಆದರೆ ನೀವು ಉಲ್ಲೇಖಿಸಿ
"ಆಧುನಿಕ ಮತ್ತು ಎಚ್ಚರದ ಸ್ಥಿತಿಯಲ್ಲಿ ಕಾವ್ಯ ಇರಬೇಕು" ಎಂಬ ಲಂಕೇಶ್ ವಾಕ್ಯ ನನ್ನನ್ನು ತಡೆ
ನಿಲ್ಲಿಸಿತು. ಯಾವುದು ಆಧುನಿಕ? ಗುಜರಿ ಸಾಮಾನು ಯಾಕೆ ಬೇಡ? ಕವಿತೆಗೆ ಎಚ್ಚರ ಮಾತ್ರ ಸಾ
'ಅತೀಂದ್ರಿಯ', ಕನಸುಗಳು ಬೇಡವೆ? ನೆಲದಾಳಕ್ಕೆ ಬೇರುಗಳನ್ನಿಳಿಬಿಟ್ಟ ಗಿಡ ಪ್ರತಿ ಬೆಳಗೂ ತನ್ನ
ತುಂಬ ಹೂಗಳನ್ನರಳಿಸುತ್ತದೆ. ಅದಕ್ಕೆ ಮಣ್ಣಿನ, ಬೇರಿನ, ನೀರಿನ ಅರ್ವಾಚೀನ ಸಂಬಂಧ ಬೇ
ಆದರೆ ಈ ಹೂವು ಮಾತ್ರ ಈ ದಿನವಷ್ಟೇ ಹೊಸದಾಗಿದೆ. ಕವಿ ಯಾವುದನ್ನು ತನ್ನ ನೀರು, ಗೊಬ್ಬರವ
ಬಳಸಿಕೊಳ್ಳುತ್ತಾನೆ - ಯಾರು ಬಲ್ಲರು? ಆದರೆ ಪ್ರತಿಕ್ಷಣವನ್ನೂ ಹೊಸ ಕ್ಷಣವನ್ನಾಗಿ ಸೃಷ್ಟಿಸುವ (ಪು
ಪುನಃ ಜಾಯಮಾನಾ....) ಆಸೆಯ ಕವಿ, ಅಷ್ಟರಮಟ್ಟಿಗೆ ಆಧುನಿಕ ಹೌದು, ಆದರೆ ಹಳೆಯದರ ಹಂ
ಅವನಿಗಿಲ್ಲವೆ? ಅಜ್ಜನ ಹೆಗಲ ಮೇಲೆ ಕುಳಿತ ಈ ಮೊಮ್ಮಗನಿಗೆ ಹೆಚ್ಚು ದೂರ ಮತ್ತು ಎತ್ತರ
ಸಂಗತಿಗಳು ಕಾಣಸುತ್ತಿರಲು ಸಾಕು.

ಈ ಪತ್ರ ಬರೆಯುವಾಗ, ನೀವು ಪ್ರಕಟಿಸಿದ ಕುವೆಂಪು ಪದ್ಯವನ್ನು ಇನ್ನೊಮ್ಮೆ ಓದಿಕೊಂ
ಶರತ್ಕಾಲದ ಸೂರ್ಯೋದಯವನ್ನು ಕಂಡು ಅವರಿಗೆ, ಮರ್ತ್ಯ ಹೃದಯದಲ್ಲಿ ಸ್ವರ್ಗವು ಹೊಮ್ಮಿ
ಅನುಭವವಾಗುತ್ತದೆ. ಭಾವಾವೇಶದಲ್ಲಿ ಕವಿಗೆ, "ಕಲ್ಲಿನ ಯುಗಯುಗವಿರವೂ ಶೂನ್ಯ, ಹುಲ್ಲಿ
ಅರೆನಿಮಿಷದ ಹನಿ ಧನ್ಯ" ಎಂದು ತೋರುತ್ತದೆ. ಆದರೆ ಮರುಕ್ಷಣದಲ್ಲೇ ಎಚ್ಚರವಾಗಿ, ('ಬ
ಮರಳಿ') ಎಲ್ಲವೂ ಚೈತನ್ಯಮಯವೆಂಬ ಅರಿವು ಮೂಡುತ್ತವೆ. "ಜಡವೆಂಬುದೇ ಬರಿ ಸುಳ್ಳು" ಎಂ
ಅವರು ಪದ್ಯದಲ್ಲಿ ತಳೆಯುವ ನಿಲುವು 'ಆಧುನಿಕ' ಹೌದು- 'ಅಧುನಾ' ( ಈ ಕ್ಷಣದ್ದು) ಎಂ

ಅರ್ಥದಲ್ಲಿ ಮಾತ್ರ. ಆದರೆ ಕವಿ 'ಭಾವಾವೇಶ' ಮತ್ತು 'ಎಚ್ಚರ' ಎರಡನ್ನೂ ಉಳಿಸಿಕೊಂಡೇ ಪದ್ಯ ರೂಪಿಸಿದ್ದಾರೆ. ಬೇಂದ್ರೆಯವರ 'ಬೆಳಗು' ಕೂಡ ಹೀಗೆಯೇ-ಮರ್ತ್ಯವನ್ನು ಕಾಣುತ್ತ, ಕಾಣಿಸುತ್ತಲೇ ಅದನ್ನು ಗಂಧರ್ವ ಸೀಮೆಯಾಗಿಸುವ ಕವಿತೆ. ಓದುವ ನಾವಂತೂ ಸರಿ, ಕವಿಯನ್ನೂ ಮೈಮರೆಸಿದಂತಿರುವ ಬೇಂದ್ರೆ ಕಾವ್ಯದ ನಾದದ ಗುಂಗು, ಕನ್ನಡ ಕಾವ್ಯ ರಸಿಕರ ಅವಿಸ್ಮರಣೀಯ ಅನುಭವವಲ್ಲವೆ? ಆಧುನಿಕ ಮತ್ತು ಅದರ ಹಿಂದಿನದರ ಸಂಬಂಧವಾಗಲೀ, ಎಚ್ಚರ ಮತ್ತು ಅತೀಂದ್ರಿಯದ ಸಂಬಂಧವಾಗಲೀ-ಅಷ್ಟು ಸುಲಭವಾಗಿ ಬಗೆಹರಿಯುವ ರಗಳೆಗಳಲ್ಲ ಎಂದೇ ನನ್ನ ವಾದ. "ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯ್ದಿತ್ತು" ಎಂದ ಬಸವಣ್ಣನವರ ಆ ಕಾಲದ ವೇದನೆ, ನನ್ನ ಕಾಲಕ್ಕೂ ಮೈಯಲ್ಲಿ ಮುಳ್ಳು ಹುಟ್ಟಿಸುವಂಥದು. 'ಕೊಂದವರು ಉಳಿದರೆ?' ಎಂಬುದೇನೂ ಹೊಸ ಮಾತೇ ಅಲ್ಲ. ಆದರೆ ವಚನದ ಒಟ್ಟು ಸಂದರ್ಭದಲ್ಲಿ ಅದು ಜೀವ ಕಲಕುವ ಬಗೆ, ಯಾವ ಆಧುನಿಕ ಕವಿತೆಯ ಓದಿಗೂ ಕಡಿಮೆಯದಲ್ಲ ಎನಿಸುತ್ತದೆ.

ಆಧ್ಯಾತ್ಮಿಕನಾಗಿರುವುದೆಂದರೆ ಅದೊಂದು ಮನಃಸ್ಥಿತಿ ಅಥವಾ ಅದು - 'ಮನೋಲಯ'. 'ಆತ್ಮಜ್ಞಾನಿಯಾದವನು ಹೊಸದೇನನ್ನೂ ಹೊರಗಿನಿಂದ ಪಡೆಯುವುದಿಲ್ಲ, ಅವನು ತನ್ನ ಸಹಜ ಸ್ಥಿತಿಗೆ ಮರಳುತ್ತಾನೆ' ಎಂದು ರಮಣರು ಬಣ್ಣಿಸುತ್ತಾರೆ. 'ಸೋರುತಿಹುದು ಮನೆಯ ಮಾಳಿಗೆ' ಎಂದು ಶರೀಫರು, 'ಛಲ ಬೇಕು ಶರಣಂಗೆ ಪರಸತಿಯನೊಲ್ಲೆನೆಂಬ' ಎಂದು ಒಂದು ಮೌಲ್ಯ ಕೇಂದ್ರವನ್ನೇ ಸೃಷ್ಟಿಸಿದ, ಬದುಕಿದ ಶರಣರು, ಸೂರ್ಯೋದಯ, ಚಂದ್ರೋದಯಗಳೂ ದೇವರ ದಯವೆಂದು ಅನುಭವಿಸಿದ ಕುವೆಂಪು, ಕಾವ್ಯವನ್ನು ಓಂಕಾರದ ಶಂಖನಾದಕಿಂತ ಕಿಂಚಿದೂನವೆಂದು ಭಾವಿಸಿದ ಬೇಂದ್ರೆ.... ಅನುಭಾವದ ವಿಸ್ತಾರ ದೊಡ್ಡದು. ಅದನ್ನು ತಮ್ಮದಾಗಿಸಿಕೊಳ್ಳುವವರ ಸಾಹಸವೂ ದೊಡ್ಡದು. ಅಂಥವರಿಂದ ನಮಗೆ ಹೃದ್ಯ ಅನುಭವವೇದ್ಯ ಕಾವ್ಯಕ್ಷಣಗಳು ಒದಗುವಂತಾಗಲಿ. ನನ್ನಂತೆಯೇ ಅನುಭಾವಕ್ಕೊಲಿದ ನಮ್ಮ ಗೆಳೆಯರೂ ಪ್ರತಿಕ್ರಿಯಿಸುತ್ತಾರೆಂದು ಕಾದಿದ್ದೇನೆ.

**ಚಿಂತಾಮಣಿ ಕೊಡ್ಲೆಕೆರೆ**

**'ಶಬ್ದತೀರ'ದ ಕೊನೆಯ ಪ್ಯಾರಾಕ್ಕೆ ಪ್ರತಿಕ್ರಿಯೆ**

ನಲವತ್ತೋ-ಅರವತ್ತೋ ಜನ;
ನಿದ್ರೆ-ಕನಸು-ಮಂಪರಿನಲಿ
ಸುತ್ತೆಲ್ಲಾ ಕಾರ್ಗತ್ತಲು
ಕಪ್ಪನೆಯ ಟಾರಿನ ರಸ್ತೆ
ಸತ್ತು ಬಿದ್ದಿದೆ ಉದ್ದಕೆ

ಎಲ್ಲ ಮಲಗಿರಲು
ಅವನೊಬ್ಬನ
ಕೇಂದ್ರೀಕೃತ ಮನ ಗುರಿಯತ್ತ;
ಬೆಳಕು ಬಿಡುವ ಮುನ್ನ
ತೀರ್ಥಹಳ್ಳಿಯ ತುಂಗಾ ತೀರದಿ
ನಿಲ್ಲಿಸಿದ
ರಾತ್ರಿ ಚಲಿಸುವ
ನಿಲುಗಡೆ ರಹಿತ ಬಸ್ಸಿನ
ಚಾಲಕನ ಹಾಗೆ!

ರಾತ್ರಿಯೆಲ್ಲ ಎಲ್ಲರೂ ಎಚ್ಚರದಿಂದಿದ್ದರೆ
ಜಗವೆಲ್ಲ ಮಲಗಿರಲು
ಅವನೊಬ್ಬನೇಳುವುದು
ಆಗುತ್ತಲೇ ಇರಲಿಲ್ಲ.

**ಎಂ.ಎಸ್. ರಜನೀಕಾಂತ್**

(ಪ್ರತಿಸ್ಪಂದನ, ಸಂವಾದ, ಹೊಸ ಹೊಳಹುಗಳಿಗಾಗಿ ಈ ಅಂಕಣ.)

# ಚಿತ್ತಾಕರ್ಷಕ ಚಿಕಣಿ ಕಲೆಯ ವಿಜಯ್ ಹಾಗರಗುಂಡಗಿ



ಪುರಾತನ ಕಾಲದಿಂದಲೂ ಚಿತ್ರಕಲೆ, ಬೇರೆ ಬೇರೆ ಆಯಾಮ ಪಡೆಯುತ್ತ ಬೆಳೆದು ಕೊಂಡು ಬಂದಿದೆ. ಇದರಲ್ಲಿ ಹತ್ತೆಂಟು ಪ್ರಕಾರ, ಶೈಲಿಗಳಿರುವುದನ್ನು ನಾವು ಕಾಣುತ್ತೇವೆ. ಇವುಗಳಲ್ಲಿ ಚಿಕಣಿ ಕಲೆ ಯಾ ಮಿನಿಯೇಚರ್ ಪೈಂಟಿಂಗ್ಸ್ ಕೂಡ ಪ್ರಮುಖ ಸ್ಥಾನ ಪಡೆಯುತ್ತದೆ. ಇಂಥ ಅಪರೂಪದ ಕಲೆಯನ್ನು ಉಳಿಸಿಕೊಂಡು, ತಮ್ಮದೇ ಆದ ವಿಶಿಷ್ಟ ಶೈಲಿಯೊಂದಿಗೆ ಮಿನಿಯೇಚರ್ ಪೈಂಟಿಂಗ್ಸ್ ಮಾಡುತ್ತ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ

ಮನ್ನಣೆ ಪಡೆದು ಬೆಳೆಯುತ್ತಿರುವ ನಲವತ್ತೂರರ ಪ್ರಾಯದ ಕಲಾವಿದ, ಕಲಬುರ್ಗಿಯ ವಿಜಯ್ ಹಾಗರಗುಂಡಗಿಯವರು.

ಭಾರತೀಯ ಚಿಕಣಿ ಚಿತ್ರಗಳಿಗೆ ತನ್ನದೇ ಆದ ಮಹತ್ವವಿದೆ. ಆದರೆ ಬದಲಾವಣೆಯ ಗಾಳಿಯೊಂದಿಗೆ, ಉತ್ತರ ಭಾರತದಲ್ಲಿ, ಈ ಕಲೆಯೂ ಬದಲಾಗುತ್ತ, ವಿಕೃತ ಆಧುನಿಕ ಅಭಿರುಚಿಯ ಲೇಪ ಬಳಿದುಕೊಳ್ಳುತ್ತಿದೆ. ಇದಕ್ಕೆ ವ್ಯತಿರಿಕ್ತವಾಗಿ, ಇದರ ಮೂಲಲಕ್ಷಣಗಳನ್ನು ಪೋಷಿಸಿಕೊಂಡು ಬರುತ್ತಿರುವವರು ವಿಜಯ್.

"ವಿಜಯನಗರ ಸಾಮ್ರಾಜ್ಯ ಅಳಿದು, ಅರಸರ ಆಶ್ರಯದಲ್ಲಿದ್ದ ಕಲಾವಿದರು ಮೈಸೂರು, ತಂಜಾವೂರು, ಸುರಪುರ ಮುಂತಾದ ಸ್ಥಳಗಳಿಗೆ ವಲಸೆ ಹೋಗಿ, ನೆಲೆನಿಂತರು. ಹೀಗೆ ಕಲಾವಿದರು ಹರಿದು ಹಂಚಿ ಹೋದುದೇ, ಈ ಅಪೂರ್ವ ಕಲೆಗೆ ಮುಳುವಾಯಿತು" ಅಂತ ನೊಂದು ನುಡಿಯುವ ವಿಜಯ್, "ಅವರೆಲ್ಲ ಆಗಿನ ಅರಸರಿಗಾಗಿ, ನಮ್ಮಲ್ಲಿದ್ದ ಬ್ರಿಟಿಷರಿಗಾಗಿ ಮತ್ತು ಪಾಳಯಗಾರರಿಗಾಗಿ ತಮ್ಮ ಮೂಲಶೈಲಿಯಲ್ಲಿ ಅನೇಕ ಬದಲಾವಣೆ ಮಾಡಿಕೊಂಡರು. ಆದರೆ ಇಂಥ ಪಲ್ಲಟಕ್ಕೆ ಒಳಗಾಗದೆ ಉಳಿದ, ವಿಜಯನಗರದ ಅಪ್ಪಟ ಶೈಲಿಯ ಅಪ್ರತಿಮ ಚಿಕಣಿ ಕಲಾಕೃತಿಗಳನ್ನು, ಕಲಬುರ್ಗಿ ಜಿಲ್ಲೆಯ ಸುರಪುರದಲ್ಲೇ ನೋಡಬಹುದಾಗಿದೆ" ಎನ್ನುತ್ತಾರೆ.

## ಫೇಲಾಗಿ, ವ್ಯಕ್ತಿತ್ವ ವಿಕಾಸ!

1-11-1957ರಂದು ಕಲಬುರ್ಗಿಯಲ್ಲಿ ಹುಟ್ಟಿದ ವಿಜಯ್ ಹಾಗರಗುಂಡಗಿ ಅವರಿಗೆ ಕಲೆ ಆನುವಂಶಿಕವಾಗಿ ಬಂದದ್ದಲ್ಲ. "ಮಿಲ್ ಕಾರ್ಮಿಕನಾಗಿದ್ದ ನನ್ನಪ್ಪನಿಗೆ, ಚಿತ್ರಕಲೆ ಅಂದರೆ ಏನೆಂಬುದೇ ತಿಳಿದಿರಲಿಲ್ಲ. ಬಾಲ್ಯದಿಂದಲೂ ಚಿತ್ರ ಬರೆಯುವ ಚಟ ಇತ್ತಾದರೂ, ಅನಿವಾರ್ಯವಾಗಿ ಸಾನಿಡಕ್ಕೆ ಅಂಟಿಕೊಳ್ಳಬೇಕಾಯಿತು" ಅನ್ನುತ್ತಾರೆ. "ಓದು ನನಗೇಕೋ ಆಗಿ ಬರಲೇ ಇಲ್ಲ. ಪಿ.ಯು.ಸಿ.ಯಲ್ಲಿ ಎರಡು ಬಾರಿ ಫೇಲಾದುದೇ



ಗಜೇಂದ್ರ ಮೋಕ್ಷ - ಜಲವರ್ಣ

ನನ್ನ ವ್ಯಕ್ತಿತ್ವ ವಿಕಾಸಕ್ಕೆ ನಾಂದಿಯಾಗಬಹುದೆಂ ನಾನೂ ಭಾವಿಸಿರಲಿಲ್ಲ. ಆ ದಿನಗಳಲ್ಲಿ ಪೆನ್ಸಿ ಕ್ಯಾನ್‌ವಾಸ್, ಕುಂಚ, ಬಣ್ಣ ಹಿಡಿದು, ನಗ ಪ್ರೊ. ವಿ.ಜಿ. ಅಂದಾನಿಯವರ 'ದಿ ಐಡಿಯ ಫೈನ್ ಆರ್ಟ್' ಸಂಸ್ಥೆ ಸೇರಿದೆ. ಚಿತ್ರಕಲೆಯ ಆರು ವರ್ಷಕಾಲ ಅಭ್ಯಾಸ ಮಾಡಿದ ನನ ಮರ-ಗಿಡ, ಗಿರಿ-ಕಾನನ, ಮನುಷ್ಯರ ಚ ಬರೆಯಲು ಅದೇಕೋ ಮನಸ್ಸು ಒಪ್ಪಲಿ ಇದರಲ್ಲಿ ಅಪರೂಪದ ಏನನ್ನಾದರೂ ಹುಡ ಬೇಕು, ಅದನ್ನು ತನ್ನದಾಗಿಸಿಕೊಳ್ಳಬೇಕು ಅನ ಹಂಬಲ ಹುಟ್ಟಾಯ್ತು" ಅನ್ನುವ ವಿಜಯ್, ಅ ಓದು ಮುಗಿಸಿ, ಡಿಪ್ಲೋಮಾ ಪದವೀಧರರಾ ಮುಂದೆ ರಾಜಸ್ಥಾನದ ಶಾಂತಿನಿಕೇತ ಸ್ಕಾಲರ್‌ಶಿಪ್ ಪಡೆದು, ಅಲ್ಲಿ ಎರಡು ತಿಂ ಕಾಲ ಕಲಾವಿದ ದ್ವಾರಕಾಪ್ರಸಾದ ಶಮ ಅವರಲ್ಲಿ ಶಿಕ್ಷಣ ಪಡೆದು, ಮರಳಿದರು. ಮು ವಾಗಿ ಅಲ್ಲಿ ಇವರು ಕಲಿತದ್ದು ತಂತ್ರ ಮತ್ತು ಚಿ ಬೆಳ್ಳಿ ಬಳಕೆಯ ಕಲೆ.

ವಿಜಯನಗರ ಕಾಲದ ಮೂಲ ಕ ವಿದರ ಚಿಕಣಿ ಕಲಾಕೃತಿಗಳನ್ನು ಹುಡುಕಿಕೊಂ ತಿರುಗಾಟ ನಡೆಸಿದ ವಿಜಯ್, ಅವನ್ನು ಕೂಲಂ ವಾಗಿ ಅಧ್ಯಯನ ಮಾಡಿ, ಸೂಕ್ಷ್ಮತೆಗಳ



ಶನಿ - ಜಲವರ್ಣ



ಪುರಾತನ ವಿಗ್ರಹಗಳ ಸಂಗ್ರಹ

ಗ್ರಹಿಸಿ, ಆ ಕಲೆಯ ಮುಂದುವರಿಕೆಯಲ್ಲಿ ತೊಡಗಿಸಿಕೊಂಡರು. ಈ ಕಲಾವಿದನ ಮುಖ್ಯ ವಸ್ತು ಪೌರಾಣಿಕ. ಹೀಗೇಕೆ? ಅಂದರೆ, "ಪುರಾಣ ಪುರುಷರು, ದೇವತೆಗಳೇ ನನ್ನ ಹೀರೋಗಳು, ಇದರಿಂದ ನಾನು ಸಂಪೂರ್ಣ ತೃಪ್ತಿ ಪಡೆದಿರುವುದರಿಂದ ನನಗೆ ಬೇರೆ ಯಾವುದೇ ಫಾರ್ಮ್ ಇಷ್ಟವಾಗುವುದೇ ಇಲ್ಲ" ಎನ್ನುತ್ತಾರೆ.

## ಸೂಕ್ಷ್ಮ ಕಲೆಗಾರಿಕೆಯ ಚಿಕಣಿ

ವಿಜಯ್ ಅವರ ಕಲಾಕೃತಿಗಳನ್ನು ಕಲಾಸಕ್ತರೆಲ್ಲರೂ ಇಷ್ಟಪಡುತ್ತಾರೆನ್ನುವಂತಿಲ್ಲ. ಇವರೇ ಹೇಳುವ ಹಾಗೆ, ಇವರ ಅಭಿಮಾನಿಗಳೂ ಬೆರಳೆಣಿಕೆಯಷ್ಟು. ಆದರೆ ಬೆಂಗಳೂರು, ಮೈಸೂರು, ದಾವಣಗೆರೆ, ಹೈದರಾಬಾದ್, ನಾಗಪುರ, ಮುಂಬೈ, ಬರೋಡ, ದೆಹಲಿ ಮೊದಲಾದ ನಗರಗಳಲ್ಲಿ ವಿಜಯ್ ಅವರ ಚಿತ್ರಕಲಾ ಪ್ರದರ್ಶನಗಳಾಗಿವೆ. ದೆಹಲಿಯಲ್ಲಿ ಪ್ರದರ್ಶನ ಮಾಡಿದಾಗಲೆಲ್ಲ, ಯಾವತ್ತೂ, ಪ್ರದರ್ಶಿತ ಕಲಾಕೃತಿಗಳು ಮಾರಾಟವಾಗದೆ ಮರಳಿ ಮನೆಗೆ ಬರುವುದಿಲ್ಲವಂತೆ. ಇವರ ಕಲಾಕೃತಿಗಳಿಗೆ ಇಂಗ್ಲೆಂಡ್‌ನಲ್ಲಿಯೂ ಅಪಾರವಾದ ಬೇಡಿಕೆ ಇದೆ.

ಮಿನಿಯೇಚರ್, ಚಿತ್ರಕಲೆಯ ಬಹಳ ಪೆಕ್ಯುಲಿಯರ್ ಪ್ರಕಾರ. ಅವಸರದ ಪ್ರವೃತ್ತಿಯವರಿಗೆ ಈ ಕಲೆ ಸರಳವಾಗಿ ದಕ್ಕುವಂಥದ್ದಲ್ಲ. ಸೂಕ್ಷ್ಮ ಕಲೆಗಾರಿಕೆಯಷ್ಟೇ ತಾಳ್ಮೆಯೂ ಇಲ್ಲಿ ಪ್ರಧಾನವಾಗಿರುತ್ತದೆ. 'ಆಕಾರದಲ್ಲಿ ಪುಟ್ಟವಾದ ಈ ಪೈಂಟಿಂಗ್ಸ್‌ಗಳನ್ನು ಸಿದ್ಧಪಡಿಸಲು ಎಷ್ಟು ಸಮಯ ಬೇಕು?' ವಿಜಯ್ ಅವರ ಮಾತಿನಲ್ಲಿ ಹೇಳುವುದಾದರೆ "ಮೂಡು, ಪೇಶನ್ಸ್ ಎರಡೂ ಇದ್ದರೆ ಬಹಳ ಬೇಗ, ಅಂದ್ರೆ ಎರಡು ಮೂರು ದಿವಸಗಳಲ್ಲಿ ಒಂದು ಕಲಾಕೃತಿ ಸಿದ್ಧಗೊಳಿಸಬಹುದು, ಆದರೆ ಸಾಮಾನ್ಯವಾಗಿ ನಾನು ಒಂದು ಪೈಂಟಿಂಗ್‌ಗೆ ಎರಡರಿಂದ ಮೂರು ವಾರ ತಗೋತೇನೆ."

ರಾಮಾಯಣ, ಮಹಾಭಾರತ ಮತ್ತು ಪೌರಾಣಿಕ ಹಿನ್ನೆಲೆಯ ಅದೆಷ್ಟೋ ಸಂಗತಿ, ಕತೆಗಳು ವಿಜಯ್‌ಗೆ ಗೊತ್ತಿದೆ. ಮಾಹಿತಿ, ಒದಗಿಸುವ ಪುರಾಣ, ಗ್ರಂಥ, ಧ್ಯಾನಶ್ಲೋಕಗಳನ್ನು ಗಂಭೀರವಾಗಿ ಅಧ್ಯಯನಮಾಡಿದ್ದಾರೆ. ಪರಿಚಿತ ಥೀಮು ಬೇಡವೆಂದೇ ಸದಾ ಹೊಸತಿನ ಹುಡುಕಾಟದಲ್ಲಿರುತ್ತಾರೆ.

ಚಿಕಣಿ ಕಲಾವಿದರು ತಮಗೆ ಬೇಕಾದ ಬಣ್ಣವನ್ನು ವನಸ್ಪತಿ ಬಳಸಿ ಸಿದ್ಧಮಾಡಿಕೊಳ್ಳು



ಜಲವರ್ಣ - ಈಶಾನ್ಯ



ಚಕ್ರದಾನ ಮೂರ್ತಿ



ತ್ತಾರೆಂದು ಒಂದು ನಂಬಿಕೆ ಇದೆ. ಆದರೆ ಈಗ ಇ
ಸತ್ಯವಲ್ಲ. ಮಳೆ, ಛಳಿ, ಬಿಸಿಲನ್ನು ತಡೆದುಕೊಳ್ಳುವ
ಇರುವ ಬಣ್ಣಗಳನ್ನು ಸಾಮಾನ್ಯವಾಗಿ ಕಲ್ಲುಗಳಿ
ಪಡೆಯುತ್ತಾರೆ. ಮುಖ್ಯವಾಗಿ ನಾಲ್ಕು ಬಣ್ಣಗಳನ್ನು ಕ
ಗಳಿಂದ ಪಡೆಯಬಹುದು. ರಾಜಸ್ಥಾನದಲ್ಲಿ ಈ ಕಲ್ಲುಗ
ಸಿಗುತ್ತವೆ. ಅಲ್ಲಿಲ್ಲ, ಕೇಜಿಯ ಲೆಕ್ಕದಲ್ಲಿ ಕಲ್ಲು ಪುಡಿ ಮಾ
ಬಣ್ಣ ಸಿದ್ಧಮಾಡಿಕೊಡುವ ಕೂಲಿಗಳೇ ಇದ್ದಾರೆ. ಇ
ತುಂಬಾ ಶ್ರಮದ ಕೆಲಸ. ಮೊದ ಮೊದಲು
ಬಣ್ಣಗಳನ್ನು ತರಿಸಿಕೊಂಡು ಬಳಸುತ್ತಿದ್ದ ವಿಜಯ್, ಈ
ಲಭ್ಯವಿರುವ ಇಂಗ್ಲಿಷ್ ಬಣ್ಣಗಳನ್ನೇ ಬಳಸುತ್ತಿದ್ದಾರೆ.

ಚಿಕಣಿ ಕಲೆಯ 'ಜಸ್ಲೋವರ್ಕ್'ಗೆ ಅಗತ್ಯವಾ
ಪೇಸ್ಟನ್ನು ವೈಟ್ ಲೆಡ್ ಪೌಡರ್, ರೇವಣಚಿನ್ನಿ ಹಾ
ಮೀನ್‌ಸರಿ ಬಳಸಿ, ಚೆನ್ನಾಗಿ ಕುಟ್ಟಿ, ಪುಡಿ ಮಾ
ಸೋಸಿ, ಪೇಸ್ಟ್ ಆಗಿಸಿ ಬಳಸುತ್ತಾರೆ. ಇದು ಕೂ
ಅತ್ಯಂತ ಸೂಕ್ಷ್ಮ ಮತ್ತು ಸಂಯಮದ ಕೆಲಸವೇ.

**"ಚಿಕಣಿ ಕಲೆಯ ಗೆರೆಗಳು ಎಷ್ಟು ನಾಜೂಕ**
**ಸೂಕ್ಷ್ಮವಾಗಿರುತ್ತವೆ ಅಂದರೆ, ಅವು ಮೂಡಿದವೇ ಅ**
**ಭೂತಗನ್ನಡಿ ಹಿಡಿದೇ ನೋಡುತ್ತಿರಬೇಕಾಗುತ್ತದೆ, ಸೀ**
**ಕೂದಲಿನಿಂದ ತಯಾರಿಸಿದ ಕುಂಚ ಬಳಸಬೇಕಾಗುತ್ತದೆ**
**ಬರೇ ಕ್ರಾಫ್ಟ್ ಅಲ್ಲ**

ಇದು ಕಲೆಯೇ ಅಲ್ಲ, ಬರೇ ಕ್ರಾಫ್ಟ್ ಕಸು
ಅಂತ ಅಪಸ್ವರ ಎತ್ತುವವರೂ ಇದ್ದಾರೆ. ಆದರೆ ಈ ಬ
ಎಂದೂ ವಿಜಯ್ ತಲೆ ಕೆಡಿಸಿಕೊಂಡಿಲ್ಲ. ತ
ಕಲಾಕೃತಿಗಳಿಗೆ ಅಪಾರವಾದ ಬೆಲೆ, ಬೇಡಿಕೆ ಇದ್ದರ
ಇವರೆಂದೂ ವ್ಯಾಪಾರೀ ದೃಷ್ಟಿಕೋನದಿಂದ ಆಲೋಚಿಸಿ
ಬಹುಶಃ, ಇದರಿಂದಾಗಿ ಈ ಕಲಾವಿದನಿಗೆ ಈವರೆಗ
ಸ್ವಂತದ ಸೂರೊಂದನ್ನು ಮಾಡಿಕೊಳ್ಳಲೂ ಸಾಧ್ಯವಾಗಿ

ವಿಜಯ್ ಅವರು ಕೇವಲ ಒಬ್ಬ ಕಲಾವಿದರ
ಅಲ್ಲದೇ ಒಬ್ಬ ಪುರಾತತ್ವ ವಸ್ತು ಸಂಗ್ರಹಕಾರರ
ಹೌದು. ಇದಕ್ಕಾಗಿ ಹೈದರಾಬಾದ ಕರ್ನಾಟಕದ ಮೂ
ಮೂಲೆ ಅಲೆದು, ಅಪಾರವಾಗಿ ಹಣ ಖರ್ಚು ಮಾ
ಶತ ಶತಮಾನಗಳಷ್ಟು ಹಳೆಯವಾದ ಬೇರೆ ಬೇರೆ ಹಿತ್ತಾ
ಕಂಚು, ಪಂಚಲೋಹಗಳ ಅಮೂಲ್ಯ ವಿಗ್ರ
ಮೂರ್ತಿಗಳನ್ನು ಸಂಗ್ರಹಿಸಿದ್ದಾರೆ.

ವಾಯು

ಅಪರೂಪದ ಹಳೆಯ ವಿಗ್ರಹ, ಪಡಿಯಚ್ಚುಗಳನ್ನು ಮೇಣದಿಂದ ರೂಪಿಸಿ, ಸ್ವತಃ ಹತ್ತರಿಂದ ಹನ್ನೆರಡು ಗಂಟೆಗಳ ಕಾಲ ಲೋಹವನ್ನು ಕುದಿಸಿ, ಪಡಿಯಚ್ಚಿಗೆ ಹಾಕಿ, ಹೊಸ ಮೂರ್ತಿಗಳನ್ನು ತಯಾರಿಸುವಲ್ಲಿಯೂ ಇವರು ನಿಸ್ಸೀಮರು.

**ಕೈಗೂಡದ ಕನಸು**

ಇವಕ್ಕೆಲ್ಲ ಒಂದು ಶಾಶ್ವತ ನೆಲೆಯಾಗಿ ಒಂದು ಮ್ಯೂಸಿಯಂ ಕಟ್ಟಬೇಕೆಂದು ಕನಸು ಕಂಡ ವಿಜಯ್, ಕಲಬುರ್ಗಿ ನಗರದ ಸೆರೆಮನೆಯ ಹತ್ತಿರದಲ್ಲಿ ನಾಲ್ಕು ಎಕರೆ ಜಮೀನನ್ನು ಪಡೆದರು. ಆದರೆ, ಮ್ಯೂಸಿಯಂ ನಿರ್ಮಾಣಕ್ಕೆಂದು ಹಲವು ತಿಂಗಳು ಅಲೆದಾಡಿ, ಸರ್ಕಾರದಿಂದ ನಾಲ್ಕು ಲಕ್ಷ ಮಂಜೂರು ಮಾಡಿಸಿಕೊಂಡರಾದರೂ, ಮಧ್ಯವರ್ತಿಗಳಿಗೇ ಒಂದು ಲಕ್ಷ ಕೊಡಬೇಕಾಗಿ ಬಂದುದರಿಂದ ಈ ಧನ ಸಹಾಯವೇ ಬೇಡವೆಂದು ಕೈ ಚೆಲ್ಲಿ ಕುಳಿತರು.

ಕರ್ನಾಟಕ ರಾಜ್ಯ ಲಲಿತ ಕಲಾ ಅಕಾಡೆಮಿಯಿಂದ 1979, 1980, 1981 ಹಾಗೂ 1983ರಲ್ಲಿ ನಾಲ್ಕು ಬಾರಿ ಪ್ರಶಸ್ತಿ ಪಡೆದಿರುವ ವಿಜಯ್ ಅವರಿಗೆ ಅಖಿಲ ಭಾರತ ಮಟ್ಟದ ಪ್ರಶಸ್ತಿಗಳೂ ಸಿಕ್ಕಿವೆ.

ತನ್ನದೊಂದು ಮ್ಯೂಸಿಯಂ ಆಗಬೇಕು, ತನ್ನ ಬದುಕಿನ ಅತ್ಯಮೂಲ್ಯ ಸಾಧನೆ, ಸಂಗ್ರಹ ಅಲ್ಲಿ ಸೇರಬೇಕು, ಅನ್ನುವ ಹಿರಿದಾದ ಆಶೋತ್ತರ ಹೊಂದಿರುವ ಈ ಕಲಾವಿದ ತಮ್ಮ ವೈಯಕ್ತಿಕ ಬದುಕಿನ ಬಗೆಗೆ ತಲೆ ಕೆಡಿಸಿಕೊಂಡವರೇ ಅಲ್ಲ. ಊರ ಹೊರವಲಯದಲ್ಲಿರುವ ತಮ್ಮ ಪುಟ್ಟ ಬಾಡಿಗೆ ಮನೆಯಲ್ಲಿ, ಬೆರಳೆಣಿಕೆಯ ಶಿಷ್ಯರೊಂದಿಗೆ, ದಿನಕ್ಕೆ ಐದಾರು ಗಂಟೆ ಪೈಂಟಿಂಗ್ ಮಾಡುತ್ತ, ಅಪರೂಪದ ಕಲಾಕೃತಿಗಳನ್ನು ಸಂಗ್ರಹಿಸುತ್ತ, ಉಬ್ಬುಶಿಲ್ಪ ತಯಾರಿಸುತ್ತ ಹಾಯಾಗಿ ಉಳಿದಿದ್ದಾರೆ. ''ಯಾಕೆ ಮದುವೆಯಾಗಲಿಲ್ಲ'' ಅಂತ ಕೇಳಿದರೆ, **''ಈವರೆಗೂ ಆಗಬೇಕು ಅನ್ನಿಸಿಲ್ಲ, ಅಂಥ ಒಂಟಿತನ ಕಾಡಿಲ್ಲ''** ಎಂದು ನಗುತ್ತಾರೆ.

■



'ದುರಂತ-ವಿದೂಷಕ' ಶೈಲಿಯ ಅಪರೂಪದ ಕಥನಕಾರ **ಕುಂ. ವೀರಭದ್ರಪ್ಪ**, ಅಕ್ಟೋಬರ್ ಸಂಚಿಕೆಯಿಂದ, ನಮಗಾಗೇ ಒಂದು ಅಂಕಣವನ್ನು ಬರೆಯಲು ಒಪ್ಪಿಕೊಂಡಿದ್ದಾರೆ. ಅವರಿಗೆ ಕೃತಜ್ಞತೆಗಳು. 'ಜವಾರಿ ಇಂಕಿ'ನಿಂದ ಮೂಡಿಬರಲಿರುವ ಮೊದಲ ಕಂತಿಗಾಗಿ, ನಿಮ್ಮಂತೆ ನಾವೂ ತುದಿಗಾಲಲ್ಲಿ ಕಾಯುತ್ತಿದ್ದೇವೆ.

ನಮ್ಮ ಸಂಚಿಕೆಗಳನ್ನೆಲ್ಲ ಮಮತೆಯಿಂದ ಸ್ವಾಗತಿಸಿದ್ದೀರಿ. ನಾಡಿನ ಮೂಲೆಮೂಲೆಗಳಿಂದ ''ನಮ್ಮಲ್ಲಿ ಸಂಚಿಕೆ ಸಿಗುತ್ತಿಲ್ಲ, ಸಿಗುವಂತೆ ಮಾಡಿ'' ಎಂದು ನೀವು ಬರೆದ ಪತ್ರಗಳು, ನಿಮ್ಮನ್ನು ತಲುಪಬೇಕೆಂಬ ನಮ್ಮ ಉದ್ವೇಗವನ್ನು ಹೆಚ್ಚಿಸಿವೆ. ನಿಮ್ಮೂರಲ್ಲಿ, ನಿಮ್ಮೂರಿನ ಏಜಂಟರಲ್ಲಿ **'ಭಾವನಾ'** ಸಿಗುತ್ತಿಲ್ಲವಾದರೆ ದಯವಿಟ್ಟು ಒಂದು ಕಾರ್ಡು ಹಾಕಿ, ಆ ದಿಶೆಯಲ್ಲಿ ಪ್ರವೃತ್ತರಾಗಲು ನಮಗೆ ನೆರವಾಗಿ. ಪ್ರತಿ ತಿಂಗಳ ನಾಲ್ಕನೆ ವಾರದಲ್ಲೆ ಮುಂದಿನ ತಿಂಗಳ ಭಾವನಾ ಮಾರುಕಟ್ಟೆಗೆ ಹೋಗುತ್ತಿದೆ. ನಿಮ್ಮಲ್ಲಿ ವಿಲಂಬವಾಗುತ್ತಿದ್ದರೆ ಆ ಕುರಿತೂ ಬರೆದು ತಿಳಿಸಿ.

# ತೆರೆದ ಅಂಚೆ




ಸಂಪಾದಕೀಯಗಳಲ್ಲಿ ನೀವು ವರ್ತಮಾನದ ಸಾಹಿತ್ಯಲೋಕದ ಅಂತರ್ಮುಖತೆ, ಖಾಸಗೀತನದ ಅಭಾವದ ಬಗ್ಗೆ ಬರೆದದ್ದೆಲ್ಲ ಅಕ್ಷರಶಃ ನಿಜ. 'ಭಾವನಾ'ದ ಯೋಜನೆ ಉತ್ಕೃಷ್ಟವಾಗಿದೆ. ಪ್ರತಿಯೊಂದು ಸಂಚಿಕೆಯೂ ಹೊಸ ಆಸೆಗಳನ್ನು, ಕನಸುಗಳನ್ನು ಚಿಗುರಿಸುತ್ತದೆ. ಸಾಹಿತ್ಯ ಲೋಕದ ವಾರ್ತೆಗಳಿಗೆ ಕೆಲವು ಪುಟಗಳನ್ನು ಮೀಸಲಿಟ್ಟರೆ ಒಳ್ಳೆಯದು.

**ಧಾರವಾಡ . ಕೀರ್ತಿನಾಥ ಕುರ್ತಕೋಟಿ**

ತಮ್ಮ ಭಾವನಾ ಪತ್ರಿಕೆಯು ನಮ್ಮಂತಹ ಹಳೇ ಬರಹಗಾರರಲ್ಲಿ ನವಭಾವನೆ ತರುತ್ತಿದೆ.

**ಬೆಳಗಾಂವ ನಾ.ಕೃ.ಪತ್ತಾರ**

ಸಾಮಾನ್ಯ ಓದುಗರಿಗೂ ನಿಲುಕುವಂತಹ ಉತ್ತಮ ಅಭಿರುಚಿಯ 'ಭಾವನಾ', high order ಸಾಹಿತ್ಯ ನೀಡುತ್ತಿದೆ.

**ಚಿಂತಾಮಣಿ ಬಿ.ಆರ್. ಲಕ್ಷ್ಮಣರಾವ್**

'ಭಾವನಾ'ದ ಮೂಲಕ ನೀವು 'ಶುದ್ಧತೆ' ಮತ್ತು ಶುಷ್ಕತೆಯನ್ನು ಹಿಂಡಿಹಾಕುತ್ತಿರುವುದು ಇಂದಿನ ಸಾಹಿತ್ಯಿಕ ಅಗತ್ಯ.

**ಗದಗ ಶ್ಯಾಮಸುಂದರ ಬಿದಿರಕುಂದಿ**

'ಭಾವನಾ' ಸಂಚಿಕೆಗಳು ಚೆನ್ನಾಗಿ ಬಂದಿವೆ. ಲವಲವಿಕೆಯಿದೆ.

**ಧಾರವಾಡ ಆರ್ಯ**

'ಭಾವನಾ'ದ ಕತೆಗಳನ್ನು ಓದಬೇಕೆನ್ನಿ
ಹೀಗಾಗುತ್ತಿರುವುದು ಎಷ್ಟೋ ವರ್ಷಗಳ ನ

**ಮೈಸೂರು ಮಾಧವ ಕುಲ**

ಓದಿದ ಮೇಲೂ ಮೆಲುಕು ಹಾಕು ಒಂದಿಷ್ಟು ಚಿಂತನೆಗೆ ಹಚ್ಚುವ ಕತೆಗಳಿಗೆ ಮಾಸಿಕದಲ್ಲಿ ಅವಕಾಶ ಒದಗಿಸಿದ್ದು ತ ಸಮಾಧಾನದ ಸಂಗತಿ. ಅಲ್ಲದೆ ಅಂಕ ಸಹಾ ಅಷ್ಟೇ ಉತ್ಕೃಷ್ಟವಾಗಿವೆ.

**ದಾವಣಗೆರೆ ಜಿ.ನಾರಾ**

ಜುಲೈ ತಿಂಗಳ ಸಂಚಿಕೆ ಓದಲು 20 ಬೇಕಾದರೆ, ಆಗಸ್ಟ್ ತಿಂಗಳ ಸಂಚಿಕೆ ಬಿಟ್ಟು ಐದೇ ದಿನದಲ್ಲಿ ಓದಿಸಿಕೊಂಡಿತು.

**ಕಿರೆಗುಡಿಹಳ್ಳಿ ಡಿ.ಕ**

ಒಂದೇ ಸಂಚಿಕೆಯಲ್ಲಿ, ಎಂ.ವ್ಯಾಸ, ನಾಗಭೂಷಣ, ಸುದರ್ಶನ ದೇಸ 'ಕಜ್ಜಾಯ'ದ ಸುನಂದಾ ಬೆಳಗಾಂವಕರ್ ಗಳನ್ನು ಓದಿ ತುಂಬಾ ಸಂತೋಷವಾಯಿತು

**ಬಂಗಾರಪೇಟೆ ಪದ್ಮ ಅಚ್ಯುತ**

ಕೆ.ಎನ್. ರಾಮಚಂದ್ರನ್ ಅವರ ಪುಟ ತೈಲವರ್ಣಚಿತ್ರ, ಅದ್ಭುತವಾಗಿತ್ತು.

**ಜಾನೇಕಲ್ ಚಂ.ಚನ್ನಬಸವ ಪಾ**

ಹಲವಾರು ಚಲನಚಿತ್ರ, ನಾಯಕ-ನಾ ಯರ, ರಾಜಕೀಯ ವ್ಯಕ್ತಿಗಳ ಬೃಹತ್ ಕಟ ಗಳನ್ನು ನಿರ್ಮಿಸಿದ ಅದ್ಭುತ ಕಲಾವಿದ ಚಂದ್ರನ್ ಅವರ ಕುರಿತ ಲೇಖನ ಮಾರ್ಮಿಕವಾ

**ಸಾಡತವಾಡ ವೀರೇಂದ್ರ ಪಾ**

ಬ್ಯಾನರ್ ಕಲಾವಿದರೆಂದು ಕೆಲವರಿಂದ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಹಿರಿಯ ಮಿತ್ರ, ಸರಳ, ಸ್ನೇಹಜೀವಿ, ಕುಂಚದ ಹೊಡೆತ, ಬಣ್ಣಗಳ ವಿಶಿಷ್ಟ ಬಳಕೆಯಿಂದ ಗಮನ ಸೆಳೆಯಬಲ್ಲ ಕಲಾವಿದ, ಕೆ.ಎಸ್. ರಾಮಚಂದ್ರನ್‌ರನ್ನು ಪರಿಚಯಿಸಿದ್ದೀರಿ, ಧನ್ಯವಾದ.

**ಬೆಳಗಾಂವಿ** **ಡಿ.ಎಸ್. ಚೌಗಲೆ**

ಮುಖಪುಟ ತಿರುವಿದಾಗ ಕುವೆಂಪು ಹಸ್ತಾಕ್ಷರ, ಭಾವಚಿತ್ರ ಕಂಡು ರೋಮಾಂಚನವಾಯಿತು.

**ಇಟಗಿ** **ಸಿ.ಎಸ್. ಪಾಟೀಲ್**

ಕೈಬರಹದಲ್ಲಿ ಕುವೆಂಪು ಬರೆದ ಮೂಲ ಪ್ರತಿ ಸಂಗ್ರಾಹ್ಯ.

**ವಜ್ರಳ್ಳಿ** **ದತ್ತಾತ್ರೇಯ ಭಟ್ಟ ಕಣ್ಣೀಪಾಲ**

ಕುವೆಂಪು ಅವರ ಹಸ್ತಾಕ್ಷರ, ನಡುವೆ ಅವರು ಅಲ್ಲಲ್ಲಿ ತಿದ್ದಿ ಬರೆದುದು, ಬರೆದ ವೇಳೆ, ಇವೆಲ್ಲ ಬೇರೆಯೆ ಅನುಭೂತಿ ನೀಡಿದವು.

**ಗಳತಗಾ** **ಗಾಯತ್ರೀನಂದನ**

'ಪಟ್ಟಪಾಡೆಲ್ಲ ಹುಟ್ಟುಹಾಡಾಗಿ' ನನ್ನ ಪಾಲಿಗೆ ಕತೆಯಲ್ಲ; ನಾನು ಕಣ್ಣಾರೆ ಕಂಡ, ನನ್ನ ವೃತ್ತಿಜೀವನದ ಒಂದು ಮರೆಯಲಾಗದ ಘಟನೆ. ಕತೆಗೆ ಆಯ್ದ ಚಿತ್ರವೂ ಚೆನ್ನಾಗಿದೆ.

**ಉಳವಿ** **ದೊಡ್ಡೇರಿ ವೆಂಕಟಗಿರಿರಾವ್**

'ಆವತ್ತೂ ಅಂಥದ್ದೇ ಮಳೆಯಿತ್ತು' ತುಂಬ ವಿಶಿಷ್ಟವಾದ, ಭಾವಪೂರ್ಣ ಕತೆ.

**ಹಾಸನ** **ಚಾಮರಾಜ ಸವಡಿ**

'ಸಾಯುತ್ತಿರುವ ಪ್ರಶ್ನೆಗಳು' ಕತೆ ತುಂಬಾ ಮೆಚ್ಚುಗೆಯಾಯಿತು.

**ಕೊಟ್ಟೂರು** **ನಿಜಲಿಂಗ ಕೆ.**

(ಈ ಕತೆಗಳನ್ನು ಮೆಚ್ಚಿ ಇನ್ನೂ ಅಸಂಖ್ಯ ಓದುಗರು ಪ್ರತಿಕ್ರಿಯಿಸಿದ್ದಾರೆ).

ಹರಿಯಪ್ಪ ಪೇಜಾವರರ ಕವನಗಳು ವಿಶಿಷ್ಟವಾಗಿವೆ.

**ಅಫಜಲ್‌ಪುರ** **ಡಿ.ಎಂ. ನದಾಫ**

ನಾನೂ, ನನ್ನ ಮಗ ಕೂಡಿ 'ಮಗು' ಕವನ ಬರೆದಂತಿತ್ತು!

**ಸಿಂದಗಿ** **ಸುಮಂಗಲ ಬಾದರದಿನ್ನಿ**

'ಸಹವಾಸ'ದಲ್ಲಿ ವಿಡಂಬಾರಿಯವರ ಆತ್ಮ ಕಥನದಿಂದ ಆಯ್ದ ಭಾಗಗಳು ತುಂಬಾ ಕುತೂಹಲಕಾರಿಯಾಗಿವೆ.

**ದಾಂಡೇಲಿ** **ವೆಂಕಟ ಪಟಗಾರ**

ಜಯಲಕ್ಷ್ಮಿಯವರು ಅನಾಮಿಕ ಆಪ್ತರತ್ತ ತೇಲಿಬಿಟ್ಟ 'ಕಾಗದದ ದೋಣಿ', ಒಂದು ಸರಳ, ಸುಂದರ, ಆತ್ಮೀಯ ರಚನೆ.

**ಬೆಂಗಳೂರು** **ಎಂ.ಎಚ್. ನಾಯಕಬಾಡ**

ಜಿ.ಎಸ್. ಅರುಣಕುಮಾರಿಯವರ 'ಮೂವರು ಆಗಂತುಕರು', ಜಯಲಕ್ಷ್ಮಿ ಮತ್ತು ಶಶಿಯವರ ಬಹಿರಂಗ ಪತ್ರಗಳು ಉಸಿರುಗಟ್ಟುವಷ್ಟು ಸಂತೋಷ ತಂದಿವೆ.

**ಕೊಪ್ಪಳ** **ಮಂಜುನಾಥ ಜಿ. ಗೊಂಡಬಾಳ**

ಸುನಂದಾ ಬೆಳಗಾಂವಕರರ 'ನೀಡುವ ಕೈ' ಮನುಷ್ಯಜೀವನದ ಒಲವಿನ ಭಾವಧಾರೆ.

**ಚಿಟಗೇರಿ** **ಪ್ರಸನ್ನಕುಮಾರ**

ಆಗಸ್ಟ್ ಸಂಚಿಕೆಯ 'ಶಬ್ದತೀರ' ಕಾವ್ಯದ ಆತ್ಮದ ಬಗೆಗಿನ ಹೊಸತನದ ವ್ಯಾಖ್ಯಾನ ಎಂದರೆ ಅದೂ ಕ್ಲೀಷೆಯೇನೋ.

**ತಗಡೂರು** **ಮಂಜುನಾಥ್ ಗೀತಾ**

'ಅನುಭಾವ ಎಂದರೆ ಯಾವ ಅಕ್ಕನ ಗಂಡ?' ಒಂದು ಅತ್ಯುತ್ತಮ ಕಾವ್ಯ ಮೀಮಾಂಸೆ. ಹಾಗೆಯೇ ಅದು ಎಂತಹ ಗದ್ಯವೆಂದರೆ ಸ್ವತಃ ಕಾವ್ಯವಾಗಿಬಿಟ್ಟಿದೆ.

**ಅರೆ ಅಂಗಡಿ** **ಆರ್.ವಿ. ಭಂಡಾರಿ**

'ನದಿಯ ಮೂರನೇ ದಂಡೆ' ಕತೆ ಇನ್ನೂ ಕಾಡುತ್ತಿದೆ.

**ಮಹಾಲಿಂಗಪುರ** **ವಿಭಾ**

'ಗುಲ್‌ಮೊಹರ್' ಕತೆ ಹೃದಯಸ್ಪರ್ಶಿಯಾಗಿದೆ.

**ರಟ್ಟೀಹಳ್ಳಿ** **ಅಜೇಯ್**



606016



ಕೊನೇ-ಸಿಪ್



## ಮೋಸ್ಟ್ ಲೈಕ್ಲೀ ಕರೋಡ್‌ಪತಿ ಪ್ರಶ್ನೆಗಳು

- (ಮಾದರಿ ಪ್ರಶ್ನೋತ್ತರ: ಅಮಿತಾಭ್ ಬಚ್ಚನ್ ಹುಟ್ಟುಹಾಕಿದ ಕಂಪನಿ ಯಾವುದು?
  ಎ. ಝೀ ಟಿವಿ  ಬಿ. ಈ ಟಿವಿ  ಸಿ. ಎಂ ಟಿವಿ  ಡಿ. ಎಬಿಸಿಎಲ್.
  ಉತ್ತರ- ''ಡಿ.'' ''ನಿಮಗೆ ಈ ಬಗ್ಗೆ ಖಾತ್ರಿಯಿದೆಯಾ? ''ಇದೆ.'' ''ಖಂಡಿತವಾಗಿ?''
  ''ಖಂಡಿತವಾಗಿ''. ''ಇದಕ್ಕೆ ಲಾಕ್ (ಬೀಗ) ಹಾಕಬಹುದೇ?'' ''ಬೀಗ, ಈಗಾಗಲೇ ಬಿದ್ದಿದೆ... ಬೀಗ ಬೀ

- ಸ್ಟಾರ್ ಟಿವಿಯ ಸದಾ ಎಂಗೇಜ್ ಆಗಿರುವ ನಂಬರನ್ನು ಹಿಡಿಯಲು ಮಾಡಬೇಕಾದ ತಾಲೀಮು ಯಾವ
  ಎ. ರೇಲ್ವೇ ಎನ್‌ಕ್ವಯರಿಯ ನಂಬರ್ ಮಿಲಾಯಿಸುವುದು.
  ಬಿ. ಟೆಲಿಫೋನ್ ವಿಭಾಗದ 199 ಮಿಲಾಯಿಸಿ ಸಂಗೀತ ಕೇಳುವುದು.
  ಸಿ. ನಕ್ಕೀರನ್ ಪತ್ರಿಕೆಗೆ ಫೋನಿಸುವುದು.
  ಡಿ. ಹನಿಗವನ ಸ್ವೀಕೃತವೆ ಎಂದು ಕೇಳಿ ಪತ್ರಿಕಾಲಯಕ್ಕೆ ಹಗಲಲ್ಲಿ ಎಸ್‌ಟಿಡಿ ಮಾಡುವುದು.

- ಮೂರು ಬಾರಿ ಕರ್ನಾಟಕದ ಮುಖ್ಯಮಂತ್ರಿಯಾಗಿದ್ದ ರಾಮಕೃಷ್ಣ ಹೆಗಡೆಯವರು ನೈತಿಕ ಹೊಣೆ ಹೊತ್ತು ಪದವಿಗೆ ಎಷ್ಟು ಬಾರಿ ರಾಜೀನಾಮೆ ಕೊಟ್ಟಿದ್ದರು?
  ಎ. ನಾಲ್ಕು ಬಾರಿ  ಬಿ. ಐದು ಬಾರಿ  ಸಿ. ಆರು ಬಾರಿ  ಡಿ. ಹತ್ತು ಬಾರಿ.

- ಏಕಕಾಲಕ್ಕೆ ಕರ್ನಾಟಕದ ಪ್ರಧಾನ ಮಂತ್ರಿ ಮತ್ತು ಭಾರತದ ಮುಖ್ಯಮಂತ್ರಿಯ ಪದವಿಗಳನ್ನಲಂಕರಿಸಿದ ಮಗ ಎಷ್ಟು ಕಾಲ ರಾಜ್ಯಭಾರ ಮಾಡಿದರು?
  ಎ. ಒಂದು ದಿನ  ಬಿ. ಒಂದೂಕಾಲು ದಿನ  ಸಿ. ಒಂದೂವರೆ ದಿನ  ಡಿ. ಎರಡುದಿನಕ್ಕಿಂತ

- ಶ್ರೀಯುತರು ರಾಜ್ಯಭಾರ ಮಾಡಿದ ಕಾಲದಲ್ಲಿ ಎಷ್ಟು ಘಂಟೆ ಎಚ್ಚರದಿಂದಿದ್ದರು?
  ಎ. ಹತ್ತು ನಿಮಿಷ  ಬಿ. ಹನ್ನೆರಡು ನಿಮಿಷ  ಸಿ. ಹದಿನೈದು ನಿಮಿಷ  ಡಿ. ಹೇಳುವುದು ಕಷ್ಟ

- ಮಾಧುರಿ ದೀಕ್ಷಿತ್ ಯಾರು?
  ಎ. ಹುಸೇನರ ಹುಚ್ಚು  ಬಿ. ಜಡೇಜನ ಕನಸು.  ಸಿ. ಶ್ರೀದೇವಿಯ ದುಸ್ವಪ್ನ.
  ಡಿ. ನೇನೆ-ದವರ ಮನದಲ್ಲಿರುವ ನಾರಿ (NRI) ಮುನಿದರೆ, ಸಾರಿ

- ಕೌನ್ ಬನೀ ಹೈ ಕರೋಡಪತ್ನಿ?
  ಎ. ಜಯಾ ಬಚ್ಚನ್  ಬಿ. ಇನ್‌ಫೋಸಿಸ್ ಸುಧಾಮೂರ್ತಿ
  ಸಿ. ಸಂಗೀತಾ ಬಿಜಲಾನಿ  ಡಿ. ಮಿಸೆಸ್ ವೀರಪ್ಪನ್

**ಕಚಗುಳಿ:** ಕರೋಡ್‌ಪತಿ ಕಾರ್ಯಕ್ರಮವನ್ನು ಅತಿಯಾಗಿ ನೋಡುತ್ತಿದ್ದ ಭೂಪನೊಬ್ಬ, ಯಾವ ಸಂದರ್ಶನದಲ್ಲಿ 'ನಿಮ್ಮ ತಂದೆಯ ಹೆಸರು'? ಎಂದು ಕೇಳಿದಾಗ ನಾಲ್ಕು ಆಪ್‌ಶನ್ ಕೊಡಿ ಸಾರ್ ಎಂದ

Printed, published and owned by **Vijay Sankeshwar**, Published at 1st Floor, "Giriraj Annex
P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-
Printed at Anand Printers & Publishers, 6/127, 5th Cross, KPN Extn., Bangalore - 560 022
Editor: **Jayant Kaikini**